


ಸಂಪುಟ ೭
ಸಂಚಿಕೆ ೪

# ಕರ್ನಾಟಕ ಭಾರತಿ

ಅಕ್ಷಯತೃತೀಯಾ ಸಂಚಿಕೆ

೧೯೭೫

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

# ಲೇಖಕರಿಗೆ ಸೂಚನೆಗಳು

**'ಕರ್ನಾಟಕ ಭಾರತಿ'**ಯು ಸೃಜನ, ವಿಮರ್ಶನ, ಸಂಶೋಧನ ಸಾಹಿತ್ಯದ ಅಭಿವೃದ್ಧಿಗಾಗಿ ಮೀಸಲಾಗಿದ್ದು, ಅದರಲ್ಲಿ ಪ್ರಕಟನೆಗಾಗಿ ಈ ಬಗೆಯ ಎಲ್ಲ ಲೇಖನಗಳಿಗೂ ಸ್ವಾಗತವಿದೆ. ಅನುವಾದ ಲೇಖನಗಳಿದ್ದರೆ, ಮೂಲ ಲೇಖಕರ ಹಾಗೂ ಲೇಖನದ ಹೆಸರನ್ನು ಸೂಚಿಸುವುದಲ್ಲದೆ ಮೂಲ ಲೇಖಕರ ಅಥವಾ ಪ್ರಕಾಶಕರ ಅನುಮತಿಯನ್ನು ಕಳುಹಿಸಬೇಕು.

ಲೇಖನಗಳನ್ನು ಕಾಗದದ ಒಂದೇ ಮಗ್ಗುಲಲ್ಲಿ ಸಾಕಷ್ಟು ಮಾರ್ಜಿನ್ ಬಿಟ್ಟು ಸ್ಪಷ್ಟವಾಗಿ ಬರೆದಿರಬೇಕು. ಇಲ್ಲವೆ ಟೈಪ್ ಮಾಡಿರಬೇಕು. ಹಸ್ತಪ್ರತಿಗಳು ಯಾವ ರೀತಿಯಿಂದಲೂ ಅಸ್ಪಷ್ಟವಾಗಿಯಾಗಲಿ, ಅಸಂಪೂರ್ಣವಾಗಿಯಾಗಲಿ ಇರಬಾರದು.

ಲೇಖನ ಸ್ವೀಕೃತವಾದ ಕೂಡಲೆ ಲೇಖಕರಿಗೆ ತಿಳಿಸಲಾಗುತ್ತದೆ. ಅಸ್ವೀಕೃತ ಲೇಖನಗಳನ್ನು ಮರಳಿ ಪಡೆಯಲಿಚ್ಛಿಸುವವರು ಸಾಕಷ್ಟು ಅಂಚೆಚೀಟಿಗಳನ್ನು ಕಳುಹಿಸಬೇಕು.

ಲೇಖಕರಿಗೆ ಅವರ ಲೇಖನಗಳ ೨೫ ಪ್ರತಿಗಳನ್ನು ಲೇಖನ ಪ್ರಕಟವಾದ ಸಂಚಿಕೆಯ ಪ್ರತಿಯೊಂದಿಗೆ ಕಳುಹಿಸಲಾಗುತ್ತದೆ. ಹೆಚ್ಚಿಗೆ ಪ್ರತಿಗಳು ಬೇಕಾದವರು ಅದರ ಮುದ್ರಣಾದಿ ವೆಚ್ಚವನ್ನು ವಹಿಸಬೇಕಾಗುವುದು. ಲೇಖನ ಅಚ್ಚಾಗುವ ಪೂರ್ವದಲ್ಲಿ ಈ ವಿಷಯಕ್ಕೆ ತಿಳಿಸಬೇಕು.

ಲೇಖನಗಳನ್ನು, ವಿಮರ್ಶೆಗಾಗಿ ಪುಸ್ತಕಗಳನ್ನು, **ಸಂಪಾದಕರು, 'ಕರ್ನಾಟಕ ಭಾರತಿ' ಕನ್ನಡ ಅಧ್ಯಯನಪೀಠ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ-580003** ಇವರಿಗೆ ಕಳುಹಿಸಬೇಕು. ವಿಮರ್ಶೆಗಾಗಿ ಪುಸ್ತಕಗಳನ್ನು ಕಳುಹಿಸುವವರು **ಎರಡು** ಪ್ರತಿಗಳನ್ನು ಕಳುಹಿಸಬೇಕು.

ಇನ್ನಿತರ ಯಾವುದೇ ವಿಷಯಕ್ಕೆ **ನಿರ್ದೇಶಕರು, ಪ್ರಸಾರಾಂಗ ವಿಸ್ತರಣ ಹಾಗು ಪ್ರಕಟನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-580003** ಇವರಿಗೆ ಬರೆಯಬೇಕು.

## ಕರ್ನಾಟಕ ಭಾರತಿ

೧. ಸ್ವಾತಂತ್ರ್ಯೋತ್ಸವ ಸಂಚಿಕೆ ೨. ರಾಜ್ಯೋದಯ ಸಂಚಿಕೆ
೩. ಸಂಕ್ರಮಣ ಸಂಚಿಕೆ ೪. ಅಕ್ಷಯತೃತೀಯಾ ಸಂಚಿಕೆ

**ವಾರ್ಷಿಕ ಚಂದಾ : ರೂ. ೮-೦೦** (ಅಂಚೆವೆಚ್ಚ ಸಹಿತ)

**ಬಿಡಿಸಂಚಿಕೆಯ ಬೆಲೆ : ರೂ. ೨-೫೦**

**( ಅಂಚೆವೆಚ್ಚ ರೂ. ೧-೨೫ ಪ್ರತ್ಯೇಕ )**

(ವಿದ್ಯಾರ್ಥಿಗಳಿಗೆ ರಿಯಾಯತಿ ಚಂದಾದರ ರೂ. ೪-೦೦ ಮಾತ್ರ)

ಹಣವನ್ನು ಮನಿಯಾರ್ಡರ್ ಇಲ್ಲವೆ ಪೋಸ್ಟಲ್ ಆರ್ಡರ್ ಮೂಲಕ

**ಕುಲಸಚಿವರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-580003 ಇವರಿಗೆ ಕಳುಹಿಸಬೇಕು.**

# ಕರ್ನಾಟಕ ಭಾರತಿ

ತ್ರೈಮಾಸಿಕ ಪತ್ರಿಕೆ

ಸಂಪುಟ : ೭

ಸಂಚಿಕೆ : ೪

ಪ್ರಧಾನ ಸಂಪಾದಕರು

ಡಾ. ಎಂ. ಎಸ್. ಸುಂಕಾಪುರ

ಸಹಾಯಕ ಸಂಪಾದಕರು

ಡಾ. ಎಂ. ಎಂ. ಕಲಬುರ್ಗಿ



ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

# ಕರ್ನಾಟಕ ಭಾರತಿ

ಕರ್ನಾಟಕ ವಿಶ್ವವಿದ್ಯಾಲಯದ ತ್ರೈಮಾಸಿಕ ಪತ್ರಿಕೆ

ಸಂಪುಟ : ೭ ಸಂಚಿಕೆ : ೪

ಮೇ ೧೯೭೫

## ಅಕ್ಷಯತೃತೀಯಾ ಸಂಚಿಕೆ





ಪ್ರಕಾಶಕರು :
ಶ್ರೀ ಎಸ್. ಎಸ್. ಒಡೆಯರ, ಎಂ.ಎ., ಎಲ್‌ಎಲ್.ಬಿ.
ಕುಲಸಚಿವರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೩

ಮುದ್ರಕರು :
ಕರ್ನಾಟಕ ವಿಶ್ವವಿದ್ಯಾಲಯ ಮುದ್ರಣಾಲಯ, ಧಾರವಾಡ-೩

# ಪರಿವಿಡಿ



ಅಖಿಲಕರ್ನಾಟಕ ದ್ವಿತೀಯ ಜಾನಪದ ಸಮ್ಮೇಳನದ ಒಂದು ದೃಶ್ಯ
ಕುಲಪತಿ ಡಾ. ಆರ್. ಸಿ. ಹಿರೇಮಠ, ಸಮ್ಮೇಳನಾಧ್ಯಕ್ಷೆ ಶ್ರೀಮತಿ ಜಯದೇವಿತಾಯಿ ಲಿಗಾಡೆ
ಉದ್ಘಾಟಕರಾದ ಮುಖ್ಯಮಂತ್ರಿ ದೇವರಾಜ ಅರಸ, ಸ್ವಾಗತಾಧ್ಯಕ್ಷ ಡಾ. ಎಂ. ಎಸ್. ಸುಂಕಾಪುರ

# ಕವಿ : ಸರ್ವಜ್ಞ

ಜಿ. ಎಸ್. ಶಿವರುದ್ರಪ್ಪ

'ಸರ್ವಜ್ಞ'-ಎಂಬುದು ಒಬ್ಬ ವ್ಯಕ್ತಿಯ ಹೆಸರಲ್ಲ; ಅದೊಂದು ಕಾವ್ಯ ಪದ್ಧತಿಗೆ ಇಟ್ಟ ಹೆಸರು. ಎಂದರೆ ಸರ್ವಜ್ಞನೆಂದು ನಾವು ಒಪ್ಪಿಕೊಂಡಿರುವ ಈ ತ್ರಿಪದಿಗಳಲ್ಲಿ ಎಷ್ಟನ್ನೊ ವಾಸ್ತವವಾಗಿ ರಚಿಸಿದ ಕವಿಯೊಬ್ಬ, ಈ ಪದ್ಧತಿಯ ಮೂಲದಲ್ಲಿ ಇದ್ದಿರಲಿ ಇಲ್ಲವೆಂದು ಈ ಮಾತಿನ ಅರ್ಥವಲ್ಲ. ಖಂಡಿತ ಇದನ್ನು ಬರೆದ ವ್ಯಕ್ತಿಯೊಬ್ಬ ಇದ್ದಿರಬೇಕು. ಅವನ ಹೆಸರೇನೋ ತಿಳಿಯದು. 'ಸರ್ವಜ್ಞ' ಎಂಬುದೇ ಈ ತ್ರಿಪದಿಗಳಲ್ಲಿ ಎಷ್ಟನ್ನೊ ಬರೆದ ಕವಿಯ ಹೆಸರಿದ್ದಿರಬೇಕು—'ಪ್ರಭು' 'ಪ್ರಭುದೇವ' ಎಂಬ ಹೆಸರಿನಂತೆ, ಸರ್ವಜ್ಞ ಎಂಬುದೂ ಒಬ್ಬ ವ್ಯಕ್ತಿಯ ಹೆಸರಾಗಿದ್ದಿರಬೇಕು–ಎನ್ನುತ್ತಾರೆ ಕೆಲವರು. ಸರ್ವಜ್ಞ,-ಎಂದು ಯಾರಾದರೂ ಹೆಸರಿಟ್ಟುಕೊಂಡಾರೆಯೇ, ಬಹುತೇಕ ಅದು, ಒಂದು ಬಿರುದು ಅಥವಾ ಆತನ ಇಷ್ಟದೈವದ ಆಂಕಿತವಾಗಿರಬೇಕು, ಎನ್ನುತ್ತಾರೆ ಇನ್ನೂ ಕೆಲವರು[೧]. ತನ್ನ ಹೆಸರು ಇತ್ಯಾದಿಗಳ ಹಂಗನ್ನು ಹರಿದುಕೊಂಡು, ಅತ್ಯಂತ ವ್ಯಕ್ತಿ ನಿರಸನದ ಸಂತೋಷದಲ್ಲಿ ಬದುಕಿದಂತೆ ತೋರುವ ಈ ವ್ಯಕ್ತಿಗೆ ಕೊಟ್ಟದ್ದೇ ಹೆಸರು! ಇಂಥ ಕವಿಯ ಕಾಲದೇಶಾದಿ ಸಂಗತಿಗಳನ್ನು ನಾವು ನಿರ್ದಿಷ್ಟವಾಗಿ ಚೌಕಟ್ಟಿಸಿ ಹೇಳಲು ಸಾಧ್ಯವಿಲ್ಲ. ಅವನು ಹುಟ್ಟಿ ಇಂದಿಗೆ

---

೧ ಡಾ. ಎಲ್. ಬಸವರಾಜು ಅವರು ಇತ್ತೀಚೆಗೆ(೧೯೭೨) ಸಂಪಾದಿಸಿ ಪ್ರಕಟಿಸಿರುವ ಸರ್ವಜ್ಞನ ವಚನ ಸಂಗ್ರಹದಲ್ಲಿ ಪ್ರತಿಯೊಂದು ತ್ರಿಪದಿಯಲ್ಲೂ, 'ಸರ್ವಜ್ಞ' ಎಂದಿರದೆ 'ಪರಮಾರ್ಥ'–ಎಂದು ಕಾಣಿಸಿಕೊಳ್ಳುತ್ತದೆ. ಡಾ. ಬಸವರಾಜು ಅವರಿಗೆ ಆಧಾರವಾಗಿ ದೊರೆತ ಸರ್ವಜ್ಞನ ಅತ್ಯಂತ ಪ್ರಾಚೀನ ಪ್ರತಿ–ಕ್ರಿ.ಶ. ೭–೩–೧೬೫೬ರಲ್ಲಿ ವೆಂಕನೆಂಬುವನು ಮಾಡಿಕೊಂಡ ಓಲೆಯ ಪ್ರತಿಯಲ್ಲಿ ಪ್ರತಿಪದ್ಯದ ಅಂಕಿತ 'ಸರ್ವಜ್ಞ' ಎಂಬುದರ ಬದಲು 'ಪರಮಾರ್ಥ'–ಎಂದಿರುವದರಿಂದ, ಡಾ. ಬಸವರಾಜು ಅವರು "ಈ ಕೃತಿಯ ಹೆಸರು 'ಪರಮಾರ್ಥ'. ಇದನ್ನು ಬರೆದವನು (ದೇವನಾತಿ) ಸರ್ವಜ್ಞ" ಎಂಬ ತೀರ್ಮಾನಕ್ಕೆ ಬರುತ್ತಾರೆ. ಎಂದರೆ ದೊರೆತ ಒಂದು ಪ್ರತಿಯಲ್ಲಿ ಪ್ರತಿಮಾಡಿಕೊಂಡ ತೇದಿ ಇರುವದರಿಂದ ಅದನ್ನು ಪ್ರಬಲ ಆಧಾರವಾಗಿ ತೆಗೆದುಕೊಂಡು, ಅದರಲ್ಲಿನ 'ಪರಮಾರ್ಥ' ಎಂಬ ಅಂಕಿತವೇ ಸಾಚಾ ಎಂದೂ ಡಾ. ಬಸವರಾಜು ಭಾವಿಸಿದ್ದಾರೆ. ಆದರೆ ತೇದಿಯನ್ನು ಕಾರಣಾಂತರದಿಂದ ಹಾಕದೆ ಇರುವ ಪ್ರತಿಗಳು ತೇದಿಯನ್ನು ಹಾಕಿದ ಒಂದೇ ಒಂದು ಪ್ರತಿಗಿಂತ ಯಾಕೆ ಪ್ರಾಚೀನವಾಗಿರಲು ಸಾಧ್ಯವಿಲ್ಲ ಎಂಬುದನ್ನೂ ಎಲ್ಲಾ ಪ್ರತಿಗಳಲ್ಲೂ ಸರ್ವಜ್ಞ ಎಂದೇ ಅಂಕಿತವಿರುವಾಗ, ಒಂದೇ ಒಂದು ಪ್ರತಿಯಲ್ಲಿರುವ 'ಪರಮಾರ್ಥ' ಎಂಬ ಅಂಕಿತವೇ ವಿಶ್ವಾಸಾರ್ಹವಾಗಲು ಹೇಗೆ ಸಾಧ್ಯ–ಎಂಬುದನ್ನೂ, ಡಾ. ಬಸವರಾಜು ಅವರು ಯಾಕೆ ವಿಚಾರ ಮಾಡಲಿಲ್ಲವೆಂಬುದು ಆಶ್ಚರ್ಯದ ಸಂಗತಿಯಾಗಿದೆ.

ನಾಲ್ಕುನೂರು ವರ್ಷಗಳಾದುವೆಂಬುದೂ ನಮ್ಮ ಕಲ್ಪನೆಯೇ. ಆದರೆ ಇಷ್ಟು ಮಾತ್ರ ನಿಜ: ವಚನಕಾರರ ಕಾಲದಿಂದ ಈಚೆಗೆ, ಹದಿನಾರನೆಯ ಶತಮಾನದ ಒಳಗಿನ ಅವಧಿಯಲ್ಲಿ ಇದ್ದಂಥ ವ್ಯಕ್ತಿತ್ವ ಇದು. ಈ ವ್ಯಕ್ತಿತ್ವದ ಕೆಲವು ಗೆರೆಗಳನ್ನು ಸರ್ವಜ್ಞನವೆಂದು ಹೇಳಲಾದ ತ್ರಿಪದಿಗಳಲ್ಲಿ ಗುರುತಿಸುವದು ಸಾಧ್ಯ.

ಈ ವ್ಯಕ್ತಿತ್ವ ಅನಿಕೇತನವಾದದ್ದು. ನಿಂತಲ್ಲಿ ನಿಲ್ಲದೆ ಗಾಳಿಯಂತೆ ಅಲೆದವನು ಇವನು. 'ಮಂಡೆ ಬೋಳಿಸಿಕೊಂಡು ತುಂಡುಗಂಬಳಿ ಹೊದೆದು ಹಿಂಡನಗಲಿದ ಗಜದಂತೆ' ಸುತ್ತಿದವನು. ಕೈಯಲ್ಲೊಂದು ಕಪ್ಪರವನ್ನು ಹಿಡಿದು, ಹಿರಿದಾದ ನಾಡು ಎದುರಿಗಿರುವಾಗ ಪರಮೇಶನೆಂಬ ನಾಮವನ್ನು ನೆಚ್ಚಿ; ತಿರಿಯುತ್ತಲೇ ಊರೂರು ಸುತ್ತಿದ ಚಾರಣ ಕವಿ ಈತ. ಅಲ್ಲಮಪ್ರಭುವನ್ನು ಬಹುಮಟ್ಟಿಗೆ ನೆನಪುತರುವ ಈ 'ಜಂಗಮ'ನಿಗೆ ನೆಲವೇ ಹಾಸಿಗೆ, ಆಕಾಶವೇ ಹೊದಿಕೆ. ತನ್ನ ಪೂರ್ವೋತ್ತರಗಳನ್ನು ಕಳಚಿ ಎಸೆದು ಬಹುಮಟ್ಟಿಗೆ ದಿಗಂಬರನಾದ ಇಂಥವನ ತಂದೆ, ತಾಯಿ, ಹಾಗು ಹುಟ್ಟಿನ ಗುಟ್ಟುಗಳನ್ನು ಬಿದಕಿ ಇವನ ಕೆಲವು ತ್ರಿಪದಿಗಳಲ್ಲಿ ಗುರುತಿಸಬಹುದೆನ್ನುತ್ತಾರೆ ಕೆಲವರು. ವಾಸ್ತವವಾಗಿ ಅವನ ತಂದೆ-ತಾಯಿ ಹಾಗು ಸರ್ವಜ್ಞ ಹುಟ್ಟಿದ್ದು ಹೇಗೆ-ಎಂಬುದನ್ನು ಹೇಳುವ ತ್ರಿಪದಿಗಳೂ ಯಾರೊ ಕಟ್ಟಿ ಸೇರಿಸಿದವುಗಳೆಂದೇ ನಮ್ಮ ಅಭಿಪ್ರಾಯ. ಕುಂಬಾರ ಮಾಳಿಯಲ್ಲಿ ದ್ವಿಜೋತ್ತಮನೊಬ್ಬನಿಗೆ ಹುಟ್ಟಿದವನು ಸರ್ವಜ್ಞ–ಎಂಬ ಕತೆಯಲ್ಲಿ ಈ ದೇಶದ ಪ್ರತಿಭೆಯೆಲ್ಲವೂ ಪ್ರತಿಷ್ಠಿತವರ್ಣದ ಬೀಜದ ಬೆಳಸು ಎಂಬ ಪರಂಪರಾಗತವಾದ ವರ್ಣಪ್ರತಿಷ್ಠೆಯ ಪ್ರಕ್ಷೇಪ ಇದು ಯಾಕಾಗಿರಬಾರದು ಎಂಬ ಪ್ರಬಲವಾದ ಸಂದೇಹ ನಮಗೆ. ಇನ್ನೂ ಒಂದೆರಡು ತ್ರಿಪದಿಗಳು ಆತನನ್ನು ಕೈಲಾಸದ ಪನ್ನಗಧರನ ಗಣಗಳಲ್ಲಿ ಒಬ್ಬನಾದ ಪುಷ್ಪದತ್ತನೇ ಈತ, ಎಂದು ಅಲೌಕಿಕಸ್ತರದ ವರೆಗೂ ಈತನ ಭವವನ್ನು ಎತ್ತಿದ್ದಾರೆ. ಈ ಪೀಠಿಕಾಪ್ರಕರಣಗಳನ್ನು ಸರ್ವಜ್ಞನೆಂದು ನಾವು ಕರೆಯುವ ಕವಿ ಖಂಡಿತ ಬರೆದಿರಲಾರ. ಸರ್ವಜ್ಞನ ಬದುಕಿನ ಬಗೆಗೆ ಉಳಿದದ್ದೇನೂ ತಿಳಿಯದೆ ಹೋಗಿರುವಾಗ, ಅವನ ಜನನ, ತಂದೆ ತಾಯಂದಿರ ವಿಚಾರವನ್ನೂ ಕುರಿತ ತ್ರಿಪದಿಗಳು ಮಾತ್ರ ಸಾಚಾ ಎಂದು ನಂಬುವದು ಕಷ್ಟ.[೨]

೨ ಸರ್ವಜ್ಞನ ಜನನ ವೃತ್ತಾಂತವನ್ನು ಹೇಳುವ ಈ ತ್ರಿಪದಿಗಳು ಕೈಬರೆಹದ ಪ್ರತಿಗಳಲ್ಲಿ ಏಕರೂಪವಾಗಿ ಬಂದಿಲ್ಲ. ಹಾಗೆಯೇ ಸಂಪಾದನೆಯ ಸಿದ್ಧವೀರಣ್ಣದೇವರು ಸಂಗ್ರಹಿಸಿರುವ "ಸರ್ವಜ್ಞ ಮೂರ್ತಿಯ ಆಚರಣೆಯ ಸಂಬಂಧದ ತ್ರಿಪದಿ"ಗಳಲ್ಲಿ ಇಲ್ಲವೇ ಇಲ್ಲ. ಅಲ್ಲದೆ ಸರ್ವಜ್ಞನ ತ್ರಿಪದಿಗಳಲ್ಲಿ ಪ್ರಕ್ಷೇಪಗಳು ವಿಶೇಷವಾಗಿ ಈಗಲೂ ನಿಜವಾಗಿ ಸರ್ವಜ್ಞನವು ಎಷ್ಟೆಂಬುದನ್ನು ನಿರ್ಣಯಿಸುವದು ದುಃಸಾಧ್ಯವಾಗಿರುವಾಗ ಆತನ ಹುಟ್ಟನ್ನು ಕುರಿತು ಹೇಳುವ ತ್ರಿಪದಿಗಳು ಮಾತ್ರ ಪ್ರಕ್ಷೇಪವಲ್ಲವೆಂದು ಹೇಳಲು ಆಧಾರವಿಲ್ಲ. ಅಲ್ಲದೆ, ತನ್ನ ತಂದೆ-ತಾಯಂದಿರ ಪ್ರಣಯದ ಸಂಗತಿಯನ್ನು, ಮಗನಾದವನು ಹೇಳುವದು, ಅದೂ ಆ ಸಂದರ್ಭವನ್ನು ಗಮನಿಸಿದರೆ ತೀರಾ ಅಸಂಭವವೆನ್ನಿಸುತ್ತದೆ.

ಆದರೆ ಇಷ್ಟು ಮಾತ್ರ ನಿಜ: ಈ ತ್ರಿಪದಿಗಳನ್ನು ಬರೆದವನು ಅಚ್ಚ ಕನ್ನಡಿಗ. ಅವನು ಬದುಕಿದ್ದು ವಚನಕಾರರ ಕಾಲದನಂತರ, ಬಹುಶಃ ಹದಿನಾರನೆಯ ಶತಮಾನದ ಒಳಗಿನ ಅವಧಿಯಲ್ಲಿ, ಅವನೊಬ್ಬ ಚಾರಣಕವಿ. ಅತ್ಯಂತ ನಿರ್ಲಿಪ್ತನಾಗಿ ನಿಂತರೂ ಜೀವನ ಪ್ರೀತಿಯನ್ನು ಕಳೆದುಕೊಳ್ಳದ ವಿಲಕ್ಷಣ ಮನೋಧರ್ಮದವನು. ಯಾರ ಹಂಗಿಗೂ ಒಳಗಾಗದ ವಿಮರ್ಶಕನ ಕಣ್ಣಿನಿಂದ ಲೋಕವನ್ನು ನೋಡಿದವನು. ಅಂಬಿಗರ ಚೌಡಯ್ಯನ ತಮ್ಮ, ಮನಸ್ಸಿನಲ್ಲಿ ಮಾತಿನಲ್ಲಿ.

'ಸರ್ವಜ್ಞ' ಎಂದು ಜನಜನಿತವಾಗಿರುವ ಈ ವ್ಯಕ್ತಿ ಒಬ್ಬ ಕವಿ. ಕಂಡದ್ದನ್ನು ಕಂಡೊಡನೆಯೆ ಪದ್ಯರೂಪದಲ್ಲಿ ಕಟ್ಟಿ ನಿಲ್ಲಿಸುವ ಕೌಶಲವಿರುವ ಕಾರಣ ಈತ ಒಬ್ಬ ಕವಿ ಎನ್ನಬಹುದು. ಈ ಕವಿಯ ಕಾವ್ಯ 'ವಚನ' ರೂಪದ್ದು. 'ವಚನ' ಎಂದರೆ ಕೂತು ಬರೆದದ್ದು ಎನ್ನುವದಕ್ಕಿಂತ, ಸುಮ್ಮನೆ ಹೇಳಿದ್ದು, ಮಾತಾಡಿದ್ದು ಎಂದು ಅರ್ಥವಾಗುತ್ತದೆ. ಸರ್ವಜ್ಞನ ತ್ರಿಪದಿಗಳಿಗೆ 'ಸರ್ವಜ್ಞನ ವಚನ' ಎಂದು ಹೆಸರಿರುವದು ಈ ಕಾರಣದಿಂದಲೆ ಇರಬೇಕು. ಇವು ವಚನ ಅಥವಾ ಆಡಿಸಿದ್ದನ್ನು ಅಂದಂದೇ ಹೇಳಿದ್ದು. ಇದರ ಜತೆಗೆ ಇವುಗಳನ್ನು ಹಲವರು 'ಪದ್ಧತಿ' ಎಂದು ಕರೆಯಲಾಗಿದೆ. 'ದಾನಪದ್ಧತಿ' 'ರಾಜನೀತಿ ಪದ್ಧತಿ' 'ಸ್ತ್ರೀ ಪದ್ಧತಿ' 'ದೈವಪದ್ಧತಿ' 'ಯೋಗಪದ್ಧತಿ' ಹೀಗೆ ಈತನ ತ್ರಿಪದಿಗಳನ್ನು ವಿಷಯಾನುಸಾರಿಯಾಗಿ ವಿಂಗಡಿಸಿ ಪ್ರಕಟಿಸಿದ್ದಾರೆ ಉತ್ತಂಗಿಯವರು. ವಾಸ್ತವವಾಗಿ ದೊರೆತ ಎಲ್ಲ ಹಸ್ತಪ್ರತಿಗಳಲ್ಲಿಯೂ ಹೀಗಿದ್ದಿತೆಂದು ಕಾಣುತ್ತದೆ. ಕ್ರಿ. ಶ. ೧೬೩೬ರಲ್ಲಿ ಪ್ರತಿಯಾದ ಸರ್ವಜ್ಞನ ಅತ್ಯಂತ ಪ್ರಾಚೀನತಮ ಪ್ರತಿಯಲ್ಲಿಯೂ ಹೀಗೆಯೆ ಇದೆ ಎನ್ನುವದು ಡಾ. ಬಸವರಾಜು ಅವರು ಸಂಪಾದಿಸಿ ಪ್ರಕಟಿಸಿರುವ 'ಪರಮಾರ್ಥ' ದಲ್ಲಿಯೂ ಕಾಣುತ್ತದೆ. ಸರ್ವಜ್ಞನ ತ್ರಿಪದಿಗಳನ್ನು ಅಥವಾ ವಚನಗಳನ್ನು ಹೀಗೆ 'ಪದ್ಧತಿ'ಗಳೆಂದು ಕರೆದದ್ದು ಸ್ವಾರಸ್ಯವಾದ ಸಂಗತಿಯಾಗಿದೆ. ಸರ್ವಜ್ಞನ 'ವಚನ'ವಾದ ಈ ಅಭಿವ್ಯಕ್ತಿ ವಾಸ್ತವವಾಗಿ ಒಂದು ಪದ್ಧತಿ tradition, ಅಥವಾ ಬರವಣಿಗೆಯ ಕ್ರಮವಾಯಿತೆಂಬುದು ಇದರಿಂದ ಸ್ಪಷ್ಟವಾಗಿದೆ. ಸರ್ವಜ್ಞನ ಈ 'ಪದ್ಧತಿ' ಇಂಥ ಎಷ್ಟೋ ರಚನೆಗೆ ಸಲೀಸಾದ ದಾರಿಯಾಗಿ, ಅನೇಕರು ಈ 'ಪದ್ಧತಿ' ಯೊಳಗೆ ತಮ್ಮ ಹೆಜ್ಜೆಯನ್ನೂರಿ, ನಿಜವಾದ ಕವಿಯ 'ಪದ್ಧತಿ' ಅಥವಾ ಹೆಜ್ಜೆ ಗುರುತುಗಳು ಯಾವುವು ಎಂಬುದು ತಿಳಿಯದಂತಾಗಿದೆ. ಆದ್ದರಿಂದಲೇ ನಾವು ಮೊದಲು ಹೇಳಿದ್ದು 'ಸರ್ವಜ್ಞ' ಎನ್ನುವದು ಒಬ್ಬ ವ್ಯಕ್ತಿಯ ಹೆಸರಲ್ಲ, ಅದೊಂದು ಕಾವ್ಯಪದ್ಧತಿಗೆ ಇಟ್ಟ ಹೆಸರು ಎಂದು.

ಈ 'ವಚನ' ಕಾವ್ಯದ ಕವಿ, ತನ್ನ ವ್ಯಕ್ತಿತ್ವವನ್ನು ಕುರಿತು :

**ಮಂಡೆ ಬೋಳಿಸಿಕೊಂಡು, ತುಂಡುಗಂಬಳಿ ಹೊದೆದು**
**ಓಂದನಗಲಿದ ಗಜದಂತೆ ಇಪ್ಪವನ**
**[illegible] ಸರ್ವಜ್ಞ**

ಎಂದು ಹೇಳಿಕೊಂಡಿದ್ದಾನೆ. ಎಲ್ಲವರಿಂದ ಕಲಿತುಕೊಂಡರೂ, ನಿರ್ಭಯ ಏಕಾಕಿತನವನ್ನು ಸಾಧಿಸಿದವನೊಬ್ಬನ ಚಿತ್ರವೊಂದು ಈ ಪದ್ಯದಲ್ಲಿದೆ. ಈ ಬಗೆಯ ಏಕಾಕಿತನವನ್ನು ಸಾಧಿಸಿಕೊಳ್ಳಲಾರದವ ಕವಿಯಾಗಲಾರ. ಇದರ ಜತೆಗೆ

ಕರದಿ ಕಪ್ಪರವುಂಟು, ಹಿರಿದೊಂದು ನಾಡುಂಟು
ಹರನೆಂಬ ದೈವ ನಮಗುಂಟು, ತಿರಿವರಿಂ
ಸಿರಿವಂತರಾರು ಸರ್ವಜ್ಞ

ಎಂಬ ಪದ್ಯದಲ್ಲಿ, ಈ ನಿಸ್ಸಾರವಾದ ಜಗತ್ತು, ಅದರ ಉದಾರತೆಯ ಬಗ್ಗೆ ಭರವಸೆ, ಈ ಎಲ್ಲವನ್ನೂ ನಡೆಯಿಸುವ ಯಾವುದೋ ಒಂದು ದೈವ-ಇವು ಸಾಕು ತನ್ನನ್ನು ನಡೆಸಲು, ಎಂಬ ಧೈರ್ಯವೇ ಈ ವ್ಯಕ್ತಿತ್ವದ ಮೂಲ ದ್ರವ್ಯವೆಂಬಂತೆ ಹೇಳಲಾಗಿದೆ. ಇಂಥ ಕವಿ ತನ್ನ ಕಾವ್ಯ ಪ್ರೇರಣೆಯ ಬಗ್ಗೆ 'ಎನ್ನ ಮನಸಿಗೆ ನೆನಹು[2] ಪನ್ನಗಧರ ಕೊಟ್ಟ' ಎಂದು ಹಿಂದಿನ ಎಲ್ಲ ಕವಿಗಳಂತೆಯೆ ಹೇಳಿಕೊಂಡಿದ್ದಾನೆ. ಈ ನೆನಹು, ಅಥವಾ ಕಾವ್ಯ ನಿರ್ಮಾಣ ಶಕ್ತಿಯಾದ ಪ್ರತಿಭೆ, ಅನುಭವದ ಉಗ್ರಾಣದಿಂದ ನೆನಹುಗಳನ್ನು ಆಯ್ದು ಕಟ್ಟುವ ಕಲೆಗಾರಿಕೆ, ತನಗೆ ದೈವೀಕೃಪೆಯಿಂದ ಬಂದದ್ದು ಎನ್ನುತ್ತಾನೆ. ಎಂದರೆ ಅನಿಸಿದ್ದಕ್ಕೆ ಅಧಿಕಾರ ಕೊಡುವ ಈ ಪ್ರವೃತ್ತಿ ಸರ್ವಜ್ಞನಿಗೆ ಸಹಜವಾಗಿಯೆ ಬಂದಿತೆಂದು ಈ ಮಾತಿನ ಅರ್ಥ. ಜತೆಗೆ, ಅವನು ಆಗೀಗ ಅಂದದ್ದನ್ನು ಕಂಡು ಅಲ್ಲಲ್ಲಿನ ಜನ ಮೆಚ್ಚಿ ಇನ್ನಷ್ಟು ಹೇಳು—ಎಂದು ಕೇಳಿರಬೇಕು. ಆದ್ದರಿಂದಲೆ 'ಹೇಳಲರಿಯೆನು ನಾನು, ಹೇಳಿಸಲು ಹೇಳುವೆನು'—ಎನ್ನುತ್ತಾನೆ. ಸರ್ವಜ್ಞನ ಪದ್ಯಗಳು ಹುಟ್ಟಿಕೊಂಡದ್ದೆ ಹೀಗೆ. ಆವರಿವರು 'ಹೇಳೆನಲು' ಆತ ಹೇಳುತ್ತ ಹೋಗಿರಬೇಕು; ಈ ಹೇಳಿದ ಕಾವ್ಯ-ಗಮನಿಸಬೇಕು—ಒಂದೆಡೆ ಕೂತು ಬರೆದ ಕಾವ್ಯ ಅಲ್ಲ-ಸರ್ವಜ್ಞನದು. ಇವುಗಳಿಗೆ 'ವಚನ' ಅಥವಾ ಹೇಳಿದ್ದು-ಎಂಬ ಹೆಸರು ಬಂದದ್ದು ತೀರ ಸಹಜವಾಗಿದೆ. ಇಂಥ ಕವಿ ಹೇಳಿದ್ದನ್ನು, ಕೇಳಿದ ಜನ, ಅವನ ವಿಷಯದ ಬಾಹುಳ್ಯವನ್ನು ಕಂಡು ಬೆರಗಾಗಿ ಅವನನ್ನು 'ಸರ್ವಜ್ಞ' ಎಂದು ಕರೆದಿದ್ದಿರಬಹುದು. ಆದರೆ ಈ ಕವಿ ಅದನ್ನು ನಿರಾಕರಿಸಿ 'ಎಲ್ಲ ಬಲ್ಲವರಿಲ್ಲ, ಬಲ್ಲವರು ಬಹಳಿಲ್ಲ'

ಸರ್ವಜ್ಞನೆಂಬವನು ಗರ್ವದಿಂದಾದವನೆ
ಸರ್ವರೊಳಗೊಂದು ನುಡಿಗಲಿತು ವಿದ್ಯೆಯಾ
ಪರ್ವತವೆ ಆದ ಸರ್ವಜ್ಞ

ಎಂದು ಹೇಳುವುದರ ಮೂಲಕ ಉತ್ತರ ಕೊಟ್ಟು ತನ್ನ ವಿನಯವನ್ನು ಎತ್ತಿ ಹಿಡಿದಿದ್ದಾನೆ.

2 Imagination is nothing but the exercise of memory—Stephen Spender.

ಸಾಹಿತ್ಯ ಪರಂಪರೆಯ ದೃಷ್ಟಿಯಿಂದಲೂ ಸರ್ವಜ್ಞ ಏಕಾಂಗಿಯಾಗಿಯೇ ತೋರುತ್ತಾನೆ. ಯಾಕೆಂದರೆ ಅವನು ತನ್ನನ್ನು ತನಗಿಂತ ಹಿಂದಿನ ಕನ್ನಡ ಸಾಹಿತ್ಯದೊಂದಿಗೆ ಬೆಸೆದುಕೊಳ್ಳುವುದೇ ಇಲ್ಲ—ವಚನಕಾರರ ಮನೋಧರ್ಮದೊಂದಿಗೆ ಹೊರತು. ತನಗಿಂತ ಹಿಂದೆ ಒಂದು ಸಾಹಿತ್ಯಿಕ ಪರಂಪರೆಯಿದೆ, ತಾನು ಅದರದೊಂದು ಭಾಗ, ತಾನು ಬರೆಯುತ್ತಿರುವುದೂ ಸಾಹಿತ್ಯವೇ–ಎಂಬ ಯಾವ ಅರಿವಿನಿಂದಲೂ ಈತ ಬದ್ಧನಾದವನಲ್ಲ. ಹೀಗಾಗಿ ಸರ್ವಜ್ಞನದೆಂದು ಹೇಳಲಾದ ಈ ತ್ರಿಪದಿಗಳು, ಕಾವ್ಯ ಎನ್ನಲು ಏನೇನಿರಬೇಕು ಎಂದುಕೊಂಡಿದ್ದೇವೆಯೋ ಅವೆಲ್ಲವನ್ನೂ ಗಾಳಿಗೆ ತೂರುತ್ತವೆ. ಹೀಗಾಗಿ ಸರ್ವಜ್ಞನ ಕಾವ್ಯಕ್ಕೆ ಇಂಥದೇ ವಸ್ತು ಇಲ್ಲ. ಅದಕ್ಕೊಂದು ನಿಶ್ಚಿತವಾದ ಬೆಳವಣಿಗೆ–ಆದಿ, ಮಧ್ಯ ಅಂತ್ಯ ಇಲ್ಲ. ಇದನ್ನು ಇಂಥಲ್ಲಿಂದ ಓದಬೇಕೆಂಬ ಹಂಗಿಗೆ ಓದುಗರನ್ನು ಒಳಗುಪಡಿಸುವುದಿಲ್ಲ. ಎಲ್ಲಿಂದಾದರೂ ಓದಬಹುದು, ಎಲ್ಲಿ ಬೇಕಾದರೂ ನಿಲ್ಲಿಸಬಹುದು. ಇದು ಯಾವ 'ಪಂಡಿತ ಮಂಡಲಿ'ಯ ಪ್ರೀತಿಗಾಗಲೀ, ಯಾವನೊಬ್ಬನ ಕಥನವಾಗಲಿ ಅಲ್ಲ. ಹೀಗಾಗಿ ಇದನ್ನು ನಮಗೆ ಪರಿಚಯವಾದ 'ಕಾವ್ಯ'ಗಳ ಮಾದರಿಯಿಂದ ನೋಡಲೂಬಾರದು. ಹಾಗಾದರೆ ಇದನ್ನು 'ಕಾವ್ಯ'ವೆಂದು ಕರೆಯುವುದಾದರೂ ಹೇಗೆ? ಒಂದೊಂದು ಬಿಡಿ ಬಿಡಿ ಪದ್ಯಕ್ಕೂ ತನ್ನದೇ ಅಸ್ತಿತ್ವವಿದೆ, ಒಟ್ಟಾಗಿ ನೋಡಿದರೆ ಒಂದು ಧೋರಣೆಯಿದೆ. ಆ ಧೋರಣೆ ಮೂಲತಃ ಜೀವನ ವಿಮರ್ಶೆಯಾಗಿದೆ. 'ಸಾಹಿತ್ಯ ಜನಜೀವನದ ವಿಮರ್ಶೆ' (Literature is the criticism of life)–ಎಂಬ ಮ್ಯಾಥ್ಯೂ ಆರ್ನಾಲ್ಡನ ಮಾತು ಸರ್ವಜ್ಞನಿಗೆ ಅನ್ವಯಿಸುತ್ತದೆ. ಅಂದಂದು ಅನ್ನಿಸಿದ್ದಕ್ಕೆ ಅಂದಂದೇ ಮಾತು ಕೊಟ್ಟು ನಿಲ್ಲಿಸಿದ 'ಪದ್ಧತಿ' ಇದು. ಈ ಬಗೆಯ ಅಭಿವೃದ್ಧಿಗೆ ಹಿಂದಿನ ಸಾಹಿತ್ಯದಲ್ಲಿ ನಿದರ್ಶನಗಳಿಲ್ಲದಿಲ್ಲ. ಸಂಸ್ಕೃತದಲ್ಲಿ ಸುಭಾಷಿತಗಳನ್ನು ಬಿಟ್ಟರೆ ಎಲ್ಲಾ ಕವಿಗಳಲ್ಲೂ ಈ ಬಗೆಯ ಲೋಕೋಕ್ತಿ, ಸೂಕ್ತಿ, ಚಾಟೂಕ್ತಿಗಳು ಕಾಣಿಸಿಕೊಳ್ಳುತ್ತವೆ. ಅವುಗಳನ್ನು ಹೇಳಿಕೆ—Statements–ಎಂದು ಕರೆಯಬಹುದು. ಆದರೆ ಇಂಥ ಹೇಳಿಕೆಗಳು, ಮಾರ್ಗಕವಿಗಳಲ್ಲಿ, ಕಾವ್ಯದ ಸಂದರ್ಭದ ಒಳಗೆ ಬರುತ್ತಿದ್ದುವು. 'ಹರಿ ಕರಿಯನಲ್ಲದಿರಿವುದೆ ನರಿಯಂ?' 'ಕುಲಮೆಂಬುದುಂಟೆ—ಬೀರಮೆ ಕುಲಂ ಮಲ್ಲವೆ?' 'ನಿಯೋಗಂ ನಿಡಿಯರೋಳರ್' 'ನೆಟ್ಟಿಯ ಬಳ್ಳಿಂ ಕರಿದು' 'ಮಾನವ ಜಾತಿ ತಾನೊಂದೆವಲಂ' 'ಹಿಂದ ಬಡಿಗೆ ಕಣ್ಣಿಕ್ಕಿಕ್ಕುಂ' ಇಂಥ ಮಾತುಗಳು ಕಾವ್ಯದ ಸಂದರ್ಭದೊಳಗೆ ಯಥೋಚಿತವಾಗಿ ಬರುತ್ತವೆ. ಹಾಗೆಯೇ, ವಿವೇಕದ, ತತ್ವದ, ನೀತಿಯ, ಧರ್ಮಕ್ಕೆ ಸಂಬಂಧಿಸಿದ ಹೇಳಿಕೆಗಳೂ ಕಾಣಿಸುತ್ತವೆ. ಆದರೆ ಸರ್ವಜ್ಞನಲ್ಲಿ ಇಂಥ ಹೇಳಿಕೆ (Statements) ಗಳೇ ಪ್ರಧಾನವಾಗಿ, ಹಿಂದಿನ ಕವಿಗಳಿಗಿದ್ದಂಥ ಯಾವ ಕಥಾ ಸಂದರ್ಭದ ನೆರವನ್ನೂ ಕೋರದೆ

ನೇರವಾಗಿ ಅಂದಂದಿನ ಅನುಭವದ ಸಂದರ್ಭಗಳಲ್ಲಿ ಕಾಣಿಸಿಕೊಳ್ಳುತ್ತವೆ ಎನ್ನುವುದೆ ವಿಶೇಷವಾದ ಸಂಗತಿಯಾಗಿದೆ. ಈ ಅರ್ಥದಲ್ಲಿ ಸರ್ವಜ್ಞನ ಕವಿತೆ ಹೇಳಿಕೆಗಳ ಕಾವ್ಯ (Poetry of Statements). ನಿದರ್ಶನಕ್ಕೆ :

> ' ಊರಿಂಗೆ ದಾರಿಯನು ಆರು ತೋರಿದರೇನು ? '
> ' ತುಪ್ಪವಾದಾಬಳಿಕ ಹೆಪ್ಪನೆರೆದವರುಂಟೆ ? '
> ' ಶ್ವಾನ ತೆಂಗಿನಕಾಯ ತಾನು ಮೆಲಬಲ್ಲುದೆ ? '
> ' ಬೆಟ್ಟ ಕರ್ಪುರ ಉರಿದು ಬೊಟ್ಟಿಡಲು ಬೂದಿಲ್ಲ '
> ' ಜಾತಿಹೀನನ ಮನೆಯ ಜ್ಯೋತಿ ತಾ ಹೀನವೇ ? '
> ' ಕುರಿ ಕಬ್ಬಿನೊಳು ಹೊಕ್ಕು ಅರಿವುದೆ ತನಿರಸವ ? '
> ' ಆನೆ ನೀರಾಟದಲಿ ಮೀನ ಕಂಡಂಜುವುದೆ ? '
> ' ಉಣ್ಣೆ ಕೆಚ್ಚಲೊಳಿರ್ದು ಉಣ್ಣದದು ನೊರೆವಾಲ '
> ' ಸೊಡರೆಣ್ಣೆ ಶೀರಿದರೆ ಕೊಡನೆತ್ತಿ ಹೊಯ್ಯುವರೆ ? '

ಈ ಹಲವು ಹೇಳಿಕೆಗಳನ್ನು ನೋಡಬಹುದು. ಈ ಹೇಳಿಕೆಗಳು, ಹಿಂದಿನ ಕಾವ್ಯಗಳಲ್ಲಾಗಿದ್ದರೆ, ಯಾವುದೋ ಒಂದು ಸಂದರ್ಭದ ಒಳಗೆ ಬಂದು, ಆ ಸಂದರ್ಭದ ಅರ್ಥವಂತಿಕೆಗೆ ಪೂರಕವಾಗಬಹುದಾದವು. ಆದರೆ ಇಲ್ಲಿ ಅಂಥ ಕಥಾಸಂದರ್ಭ ಇಲ್ಲ; ಆದರೆ ಅಂಥ ಮಾತಾಡಿದ ಅನುಭವದ ಸಂದರ್ಭ ಯಾವುದೆಂದು ಊಹಿಸಬಹುದು. ಈ ಹೇಳಿಕೆಗಳು, ಕೇವಲ ಉಕ್ತವಾಗದೆ, ದೃಷ್ಟಾಂತ ರೂಪವನ್ನು ತಾಳುತ್ತವೆ. ಆದರೆ ಈ ದೃಷ್ಟಾಂತಗಳ ಉದ್ದೇಶ ರಸಾನುಭವವಲ್ಲ; ಅಂದರೆ, ಅವುಗಳಲ್ಲಿ ಅಂಥ 'ರಸ' ಇಲ್ಲವೆಂದು ಅರ್ಥವಲ್ಲ. ಒಂದೆರಡು ಕ್ಷಣ ಅವುಗಳು ಕಟ್ಟುವ ಚಿತ್ರ ಕೊಂಚ ರಸಾನುಭವವನ್ನು ಕೊಟ್ಟರೂ, ಅವುಗಳ ಮುಖ್ಯ ಉದ್ದೇಶ, ನೀತಿಯನ್ನು ವಿವೇಕವನ್ನು, ಹೇಳುವುದು. ನಮ್ಮ ಅಲಂಕಾರಿಕರು ವಾಙ್ಮಯವನ್ನು, ಪ್ರಭುಸಮ್ಮಿತ, ಮಿತ್ರ ಸಮ್ಮಿತ ಹಾಗೂ ಕಾಂತಾಸಮ್ಮಿತ ಎಂದು ವಿಭಾಗಿಸಿದರು. ಸರ್ವಜ್ಞನ ವಚನಗಳು ಬಹುಮಟ್ಟಿಗೆ ಮಿತ್ರಸಮ್ಮಿತವೆಂಬ ವರ್ಗಕ್ಕೆ ಸೇರುತ್ತವೆ. ಹಿತೈಷಿಯಾದ ಗೆಳೆಯನೊಬ್ಬನು, ಈ ಲೋಕದಲ್ಲಿ ನಡೆದುಕೊಳ್ಳಬೇಕಾದ ನಿರ್ದೇಶನವನ್ನು ನಯವಾಗಿ ಆದರೆ ಕೆಲವು ಸಲ ಕಟುವಾಗಿ ಹೇಳಿದ ಹಾಗಿದೆ ಈ ಸರ್ವಜ್ಞನ ಧಾಟಿ. ಕಾವ್ಯ ಪ್ರಯೋಜನವನ್ನು ಹೇಳುವಲ್ಲಿ ನಮ್ಮ ಅಲಂಕಾರಿಕರು, ಕಾವ್ಯ ವ್ಯವಹಾರವನ್ನು ಬೋಧಿಸುತ್ತದೆ ಎನ್ನುತ್ತಾರೆ. ಸರ್ವಜ್ಞನ ಕಾವ್ಯ ನಿಜವಾದ ಅರ್ಥದಲ್ಲಿ ವ್ಯವಹಾರ ಕಾವ್ಯ. ಅನುಭವಿಯೊಬ್ಬನು, ಮನುಷ್ಯ ಸ್ವಭಾವವನ್ನು, ಲೋಕದ ನಡವಳಿಕೆಯನ್ನು ಚೆನ್ನಾಗಿ ಕಂಡ ಅನುಭವಿಯೊಬ್ಬನು, ಸುತ್ತಣ ಜನರನ್ನು ತಿದ್ದುವ, ಸುಧಾರಕತನದ ಕಳಕಳಿಯಿಂದ ನುಡಿದ ಅಭಿವ್ಯಕ್ತಿಗಳಿವು. ಇವುಗಳಲ್ಲಿ ವಸ್ತುಚಿತ್ರಣದ ದೃಷ್ಟಿ

ಇದೆ; ಶಾಸ್ತ್ರದ ನಿಷ್ಕೃಷ್ಟತೆಯೂ ಇದೆ. ಹೀಗಿರುವದರಿಂದಲೇ ಈ ಉಕ್ತಿಮಾರ್ಗ ಸಲೀಸಾಗಿ ಸುತ್ತಣ ಜನಮನವನ್ನು ಮುಟ್ಟುತ್ತದೆ, ಹಾಗು ತಟ್ಟುತ್ತದೆ.

ಸರ್ವಜ್ಞನ ಈ ಉದ್ದೇಶವೇ, ಅವನನ್ನು ಇತರ ಕವಿಗಳಿಂದ ಬೇರ್ಪಡಿಸುತ್ತದೆ. ಅವನದು, ಮನಸ್ಸನ್ನು ರಂಜಿಸುವ, ಅಥವಾ ಅರ್ಥರಮ್ಯತೆಯನ್ನು ವ್ಯಂಜಿಸುವ ಉಕ್ತಿವಿಧಾನವಲ್ಲ. ಮನಸ್ಸನ್ನು ಕೆದಕುವ, ಹೊಡೆದೆಬ್ಬಿಸುವ, ಉಕ್ತಿವಿಧಾನ, ಪ್ರಶ್ನಿಸುವ ವಿಧಾನ—

**ದಂಡಿಸದೆ ದೇಹವನು, ಖಂಡಿಸದೆ ಕರಣವನು**
**ಉಂಡುಂಡು ಸ್ವರ್ಗವೇರಲಿಕೆ ಅದನೇನು**
**ರಂಡೆಯಾಳುವಳೆ ಸರ್ವಜ್ಞ**

**ಉಣ್ಣದೊಡವೆಯ ಗಳಿಸಿ ಮಣ್ಣಿನೊಳು ಬಚ್ಚಿಟ್ಟು**
**ಚೆನ್ನಾಗಿ ನೆಲನ ಸಾರಿಸಿದವನ ಬಾಯೊಳಗೆ**
**ಮಣ್ಣು ಕಾಣಯ್ಯ ಸರ್ವಜ್ಞ**

ಇಂಥಂಥ ಉಕ್ತಿಗಳನ್ನು ಗಮನಿಸಬಹುದು. ಈ ಎರಡೂ ಬದುಕಿನ ಎರಡು ಧೋರಣೆಗಳನ್ನು ಕುರಿತ ವಿಮರ್ಶೆಯಾಗಿದೆ. ಪರದ ಮೇಲೆ ಕಣ್ಣಿಟ್ಟ ಸೋಮಾರಿ ಸಾಧಕನ ಮತ್ತು ಜಿಪುಣನ ಧೋರಣೆಗಳನ್ನು ವಿಡಂಬಿಸಲಾಗಿದೆ. ಮೂಲತಃ ಸರ್ವಜ್ಞನದು ಜೀವನ ವಿಮರ್ಶೆ. ಈ ಬಗೆಯ ವಿಮರ್ಶನ ಪ್ರವೃತ್ತಿಯಿಂದ ಸಾಹಿತ್ಯ ನಿರ್ಮಿತಿಯಾದದ್ದು ವಚನಕಾರರ ಕಾಲದಲ್ಲಿ. ಆದ್ದರಿಂದಲೇ ವಚನಕಾರರನ್ನು ಸರ್ವಜ್ಞನ ಉಕ್ತಿಗಳು ವಿಶೇಷವಾಗಿ ನೆನಪಿಗೆ ತರುತ್ತವೆ; ಅಷ್ಟೇ ಅಲ್ಲ ವಚನಕಾರರ ಭಾವನೆಗಳನ್ನು ಎಷ್ಟೋ ಕಡೆ ಪುನರಾವರ್ತಿಸುತ್ತಾನೆ. ವಚನಕಾರರೆ ಸರ್ವಜ್ಞನಿಗೆ ಸ್ಫೂರ್ತಿಯ ನೆಲೆ. ವಚನಕಾರರ ಕಾಲದ ನಂತರ, ಅದೇ ಮಟ್ಟದ ಹಾಗೂ ಪ್ರಮಾಣದ ವಚನ ನಿರ್ಮಿತಿ ಕಾಣಿಸಿಕೊಳ್ಳುವುದಿಲ್ಲವಾದರೂ, ವಚನ ಪರಿಷ್ಕರಣ ಹಾಗೂ ವಚನ ವ್ಯಾಖ್ಯಾನ ಮತ್ತು ಪ್ರಸಾರ ಕಾರ್ಯಗಳು ನಡೆದವು. ಸರ್ವಜ್ಞ ಮುಖ್ಯವಾಗಿ ವಚನಗಳನ್ನು ತ್ರಿಪದಿಗೆ ತಿರುಗಿಸಿ ಪ್ರಸಾರ ಮಾಡಿದವನು. ಆದರೆ ಒಂದು ವ್ಯತ್ಯಾಸ: ವಚನಕಾರರು ಒಂದು ಧಾರ್ಮಿಕ ಸಾಮಾಜಿಕ ಆಂದೋಲನದ ಸಂದರ್ಭದಲ್ಲಿ, ಸಾಂಘಿಕವಾಗಿ ಕೆಲಸ ಮಾಡಿದವರು; ಸರ್ವಜ್ಞ ಅಂಥ ಯಾವ ಉದ್ದೇಶದಿಂದಲೂ ಬದ್ಧನಾಗದೆ, ಏಕಾಂಗಿಯಾಗಿ ಊರೂರು ಅಲೆದವನು. ಆದರೆ ಒಂದು ಧಾರ್ಮಿಕ ಉದ್ದೇಶದಿಂದ ಬದ್ಧನಾದರೂ, ವಚನಕಾರರ, ಅದರಲ್ಲೂ ಪ್ರಮುಖ ವಚನಕಾರರ, ವಚನಗಳಲ್ಲಿರುವ ಕಾವ್ಯಗುಣ ಸರ್ವಜ್ಞನಲ್ಲಿಲ್ಲ. ಕೆಲವು ವಚನಕಾರರಲ್ಲಿರುವ ಅನುಭವದ ಕಾವ್ಯ, ಅದು ತಾನೇ ತಾನಾಗಿ ವ್ಯಕ್ತವಾಗುವಲ್ಲಿನ ಘನೀಭವನಕ್ರಮ (Process of Crystallisation) ಬಹುಕಾಲದ ಪರಿಭಾವನೆಗೆ ನಿಲ್ಲುವ ಸಾಮರ್ಥ್ಯ ಸರ್ವಜ್ಞನ ತ್ರಿಪದಿಗಳಲ್ಲಿ ಇಲ್ಲ.

'ಹಬ್ಬಕ್ಕೆ ತಂದ ಹರಕೆಯ ಕುರಿ
ತೋರಣಕ್ಕೆ ತಂದ ತಳಿರ ಮೇಯಿತ್ತು'

'ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೋ'

'ತಸುವ ತೋಂಟವ ಮಾಡಿ, ಮನವ ಗುದ್ದಲಿ ಮಾಡಿ
ಅಗೆದು ಕಳೆದೆನಯ್ಯ ಭವದ ಬೇರನು'

'ಈಳೆ ನಿಂಬೆ ಮಾವು ಮಾದಲಕ್ಕೆ
ಹುಳಿನೀರನೆರೆದವರಾರಯ್ಯಾ?'

ಇಂಥ ವಚನಗಳಲ್ಲಿ ದಟ್ಟೈಸಿದ ಅನುಭವ, ಓದಿದನಂತರ ಅವುಗಳು ಉಂಟು ಮಾಡುವ ರಸಾಸ್ವಾದ ಹಾಗೂ, ಜೀವನದ ಬಗ್ಗೆ ಹೊಸ ತಿಳವಳಿಕೆ ಸರ್ವಜ್ಞನ ಉಕ್ತಿಗಳಲ್ಲಿ ತೀರಾ ವಿರಳ. ಅದಕ್ಕೆ ಕಾರಣ, ಸರ್ವಜ್ಞ ವಚನಕಾರರ ಮಾತುಗಳನ್ನೆ ಮತ್ತೆ ಹೇಳುವದು ಒಂದು, ಎಂದುಕೊಂಡರೆ, ಅವನ ಉಕ್ತಿಯ ಅಲ್ಪಗಾತ್ರದ ಪರಿಮಿತಿಯೂ ಇನ್ನೊಂದು ಕಾರಣ ಎನ್ನಬಹುದು.೪ ಆದರೆ ವಚನಕಾರರಲ್ಲಿಲ್ಲದ ಒಂದು ಉದಾರಧೋರಣೆ ಸರ್ವಜ್ಞನಲ್ಲಿದೆ. ವಚನಕಾರರು ಮೂಲತಃ ಒಂದು ನೂತನ ಮತಧರ್ಮ ಪ್ರವರ್ತನೆಯ ಉದ್ದೇಶದಿಂದ ಬದ್ಧರಾಗಿದ್ದರೆ, ಸರ್ವಜ್ಞ ತಾನು ಅಂಥ ಯಾವ ಧರ್ಮಪ್ರಸಾರದ ಉದ್ದೇಶಕ್ಕೂ ಬದ್ಧನಾದವನಲ್ಲ. ಎಲ್ಲ ಬಗೆಯ ಹಂಗನ್ನೂ ಹರಿದುಕೊಂಡು 'ಹಿಂಡನಗಲಿದ ಗಜದಂತೆ' ತಿರುಗಿದ ಈತ ಯಾವ ಒಂದು ಮತಧರ್ಮವನ್ನು ಎತ್ತಿಹಿಡಿಯುವ ಸ್ವಭಾವದವನಲ್ಲ. ಅವನ ತ್ರಿಪದಿಗಳಿಂದ ಆತ ವೀರಶೈವ ಧರ್ಮದವನೆಂದು ಊಹಿಸಲು ಸಾಧ್ಯವಿದ್ದರೂ, ಆತ ವಾಸ್ತವವಾಗಿ ಅದನ್ನು ಮೀರಿ ಸಂಚರಿಸಿದವನು. ದೇವರು ಧರ್ಮ, ಇತ್ಯಾದಿ ವಿಚಾರಗಳಲ್ಲಿ ಆತನ ಕಲ್ಪನೆ ತಕ್ಕಮಟ್ಟಿಗೆ ಜಾತ್ಯತೀತವಾದದ್ದು.೫ ಹೀಗಾಗಿ

೪ ಹರಿಹರನ ರಗಳೆಗಳನ್ನು ಓದುತ್ತಾ ಯಾವ ಒಂದು ಬಗೆಯ ಏಕತಾನತೆ ಅನುಭವಕ್ಕೆ ಬರುತ್ತದೋ, ಈತನ ತ್ರಿಪದಿಗಳನ್ನು ಒಂದೇ ಸವನೆ ಓದತೊಡಗಿದರೆ ಅದೇ ಅನುಭವವಾಗುತ್ತದೆ. ತ್ರಿಪದಿಯ ತೀರಾ ಕಿರುಬಂಧದಲ್ಲಿ, ಅಂಥ ಯಾವ ಛಂದಸ್ಸಿಗೆ ಸಂಬಂಧಿಸಿದ ಪ್ರಯೋಗವನ್ನು ನಡೆಯಿಸುವದು ಸಾಧ್ಯವಾಗಿಲ್ಲ. ಆದರೆ ಆ ಕಿರುಬಂಧದಲ್ಲಿ,ಜಾಣ್ಮೆಯ, ದೃಷ್ಟಾಂತದ, ಅಲಂಕಾರದ ಉಕ್ತಿಕೋದುಕೊಂಡು ಒಂದೊಂದು ತ್ರಿಪದಿಯೂ ಮುಕ್ತಕಗಳಂತೆ ಸ್ವಾದುವಾಗುತ್ತದೆ.

೫ ಒಬ್ಬನಲ್ಲದೆ ಜಗಕೆ ಇಬ್ಬರುಂಟೇ ಮತ್ತೆ
ಒಬ್ಬ ಸರ್ವಜ್ಞ ಕರ್ತನೀ ಜಗಕೆಲ್ಲ
ಒಬ್ಬನೇ ದೈವ ಸರ್ವಜ್ಞ

ನಡೆವುದೊಂದೇ ಭೂಮಿ, ಕುಡಿವುದೊಂದೇ ನೀರು
ಸುಡುವಗ್ನಿಯೊಂದೆ ಇರುತಿರಲು ಕುಲಗೋತ್ರ
ನಡುವೆ ಎತ್ತಣದು ಸರ್ವಜ್ಞ

ಊರೆಲ್ಲ ನೆಂಟರು, ಕೇರಿಯೆಲ್ಲವು ಬಳಗ
ಧಾರುಣಿಯು ಎಲ್ಲ ಕುಲದೈವವಾಗಿನ್ನು
ಯಾರನ್ನು ಬಿಡಲೊ ಸರ್ವಜ್ಞ

ಜಾತಿ ಹೀನನ ಮನೆಯ ಜ್ಯೋತಿ ತಾ ಹೀನವೇ
ಜಾತಿ ವಿಜಾತಿ ಯೆನಬೇಡ, ದೇವನೊಲಿ
ದಾತನೇ ಜಾತ ಸರ್ವಜ್ಞ

ಸರ್ವಜ್ಞನ ತ್ರಿಪದಿಗಳು ಎಲ್ಲರಿಗೂ ಪ್ರಿಯವಾಗಿವೆ. ಅವನದು ಮುಖ್ಯವಾಗಿ ಜೀವನ ಪ್ರೀತಿಯಿಂದ ಹುಟ್ಟಿದ ಮಾನವ ಧರ್ಮ. ಸುತ್ತಣ ಬದುಕನ್ನು ಹಸನು ಮಾಡುವ ಸುಧಾರಕತನ ಅವನ ಅಭಿವ್ಯಕ್ತಿಯ ಮೂಲ ಪ್ರೇರಣೆ. ಇದರಿಂದಾಗಿ ಅವನ ಅಭಿವ್ಯಕ್ತಿ ದೃಷ್ಟಾಂತ ಹಾಗೂ ಹೇಳಿಕೆಗಳ ರೂಪದ್ದಾಗುತ್ತದೆ. ಕಾವ್ಯದ ರಮ್ಯತೆಗಿಂತ ತತ್ತ್ವದ ವಾಚ್ಯವೇ ಪ್ರಧಾನವಾಗುತ್ತದೆ. ನಿದರ್ಶನಕ್ಕೆ :

**ಆನೆ ನೀರಾಟದಲಿ ಮೀನ ಕಂಡಂಜುವುದೆ ?**
**ಹೀನ ಮಾನವನ ದುರ್ನುಡಿಗೆ ತತ್ತ್ವದ**
**ಜ್ಞಾನಿಯಂಜುವನೆ ಸರ್ವಜ್ಞ**

ಎಂಬ ಈ ಪದ್ಯವನ್ನು ನೋಡೋಣ. ಇದರಲ್ಲಿ ನೀತಿಕಾವ್ಯದ ಸಮಸ್ತ ಲಕ್ಷಣಗಳನ್ನೂ ಹಾಗೂ ದೌರ್ಬಲ್ಯಗಳನ್ನೂ ಗುರುತಿಸಬಹುದು. ಮೊದಲ ಪಂಕ್ತಿ, 'ಆನೆ ನೀರಾಟದಲಿ ಮೀನ ಕಂಡಂಜುವುದೆ'–ಎಂಬ ಪ್ರಶ್ನೆ, ಆಧುನಿಕ ಅರ್ಥದಲ್ಲಿ ನಿಜವಾಗಿಯೂ ಹರಳುಗೊಂಡು ಒಂದು ಕಾವ್ಯ ಪ್ರತಿಮೆ (Poetic image) ಯಾಗಿದೆ. ಅದೊಂದು ಪಂಕ್ತಿ ಸಾಕು ಏನೆಲ್ಲವನ್ನು ಧ್ವನಿಸಲು. ಆದರೆ ಮುಂದಿನ ಎರಡು ಸಾಲುಗಳು, ಮೊದಲ ಪಂಕ್ತಿ ಧ್ವನಿಸುತ್ತಿದ್ದ ಅರ್ಥ ಪರಂಪರೆಯನ್ನು, ವಿವರಣಾತ್ಮಕವಾದ ಉಪದೇಶದ ಧಾಟಿಯಲ್ಲಿ ಒಂದು ಪರಿಮಿತಾರ್ಥಕ್ಕೆ ಇಳಿಸಿ ಬಿಡುತ್ತವೆ. ಹೀಗಾಗಿ ನಿಜವಾದ ಕಾವ್ಯಗುಣ ನೀತಿಬೋಧೆಗೆ ನೈವೇದ್ಯವಾಗುತ್ತದೆ. ಇದಕ್ಕೆ ಕಾರಣ ಈ ಕವಿಯ ಕಾವ್ಯಧೋರಣೆಯೇ. ಸರ್ವಜ್ಞನಿಗೆ, ಕಾವ್ಯ, ಕಾವ್ಯ ರಚನೆಯ ಬಗ್ಗೆ ಇರುವ ಕಳಕಳಿಗಿಂತ, ಸುತ್ತಣ ಜನವನ್ನು ತಿದ್ದುವ ಉದ್ದೇಶವೇ ಪ್ರಧಾನವಾದ್ದರಿಂದ, 'ಕಾವ್ಯರೂಪ'ದ ಅಭಿವ್ಯಕ್ತಿ ತಾನು ಹೇಳುವ ನೀತಿಗೆ, ವಿವೇಕಕ್ಕೆ ಸಲೀಸಾಗಿ ಒದಗಿಬರುವ ಒಂದು ಮಾಧ್ಯಮ ಮಾತ್ರವಾಗುತ್ತದೆ. ಆದರೂ, ವಿವರಣೆಯ ಭಾಗವನ್ನು ಹೊರತುಪಡಿಸಿ ನೋಡಿದರೆ, ಸರ್ವಜ್ಞನ ಉಕ್ತಿಗಳಲ್ಲಿ ನೆನಪಿನ ನಾಲಗೆಯ ಮೇಲೆ ರಸವೊಸರಿಸುವ ಎಷ್ಟೋ ಪಂಕ್ತಿಗಳು ದೊರಕುತ್ತವೆಯೆಂಬುದು ಸಮಾಧಾನದ ಸಂಗತಿ. 'ಬಳ್ಳಿಗುರುಡರು ಕೂಡಿ ಹಳ್ಳವನು ಬಿದ್ದಂತೆ' ಎಂಬ ಪಂಕ್ತಿಯಲ್ಲಿ 'ಬಳ್ಳಿಗುರುಡ'–ಎಂಬ ಮಾತನ್ನು ಗಮನಿಸಬೇಕು. 'ಧನಕನಕ ಉಳ್ಳನಕ ದಿನಕರನಂತಕ್ಕು' 'ಧನಕನಕ ಹೋದ ಮರುದಿವಸ ಹಾಳೂರ ಶುನಕನಂತಕ್ಕು'-ಎಂಬ ಎರಡು ಹೋಲಿಕೆಗಳ ವೈದೃಶ್ಯದ ಸ್ವಾರಸ್ಯ ಸೊಗಸಾದದ್ದು. 'ಉಣ್ಣೆ ಕೆಚ್ಚಲೊಳಿರ್ದು ಉಣ್ಣದದು ನೊರೆವಾಲ' ಎಂಬುದು, ಸಂಪತ್ತಿದ್ದೂ, ಅದನ್ನು ಉಣ್ಣಲಾರದ ನಿರ್ಭಾಗ್ಯರನ್ನು ಕುರಿತು ಉಚಿತವಾದ ಟೀಕೆಯಾಗಿದೆ. 'ಅನ್ನದೇವರ ಮುಂದೆ ಇನ್ನು ದೇವರು ಇಲ್ಲ' 'ಮನದಲ್ಲಿ ನೆನೆವಂಗೆ ಮನೆಯೇನು ಮಠವೇನು' 'ಅಡಿಯ ಮುಂದಿಡೆ ಸ್ವರ್ಗ ಅಡಿಯ ಹಿಂದಿಡೆ ನರಕ' 'ಜಾತಿಹೀನನ ಮನೆಯ ಜ್ಯೋತಿ ತಾ ಹೀನವೇ'

'ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೆ ಮೇಲು' 'ಊರಿಂಗೆ ದಾರಿಯನು ಯಾರು ತೋರಿದರೇನು' 'ಚಿತ್ತವಿಲ್ಲದೆ ಗುಡಿಯ ಸುತ್ತಿದರೆ ಫಲವೇನು?' 'ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ' ಇಂಥ ಎಷ್ಟೊಂದು ಹೇಳಿಕೆಗಳು ಸರ್ವಜ್ಞನ ತ್ರಿಪದಿಗಳ ತುಂಬ ಚದುರಿಕೊಂಡು, ಮಿನುಗುತ್ತಿವೆ. ಈ ಹೇಳಿಕೆಗಳ ಸಂಕ್ಷಿಪ್ತಾಭಿವ್ಯಕ್ತಿ, ಅವುಗಳ ಹಿಂದಿರುವ ಲೋಕಾನುಭವ, ದಿನನಿತ್ಯದ ವ್ಯವಹಾರಕ್ಕೂ ಒದಗಿಬರುತ್ತವೆ. ಸುತ್ತಣ ಜನದ ಆಡುಮಾತಿಗೆ ಕಾವ್ಯಾಭಿವ್ಯಕ್ತಿಯ ತಿರುವು ಕೊಟ್ಟು, ವ್ಯಂಗ್ಯ, ಕಟಕಿ, ವಿನೋದ, ಸಹಾನುಭೂತಿ ಇತ್ಯಾದಿ ವೈವಿಧ್ಯಗಳಲ್ಲಿ, ಜನದ ಬದುಕನ್ನು ತಿದ್ದುತ್ತಾ, ನಿಜವಾದ ಅರ್ಥದಲ್ಲಿ ಜನತೆಯ ಕವಿಯಾದ ಸರ್ವಜ್ಞ, ಕನ್ನಡ ಸಾಹಿತ್ಯ ಪರಂಪರೆಯಲ್ಲಿ ತನ್ನ ವಿಶಿಷ್ಟ ವ್ಯಕ್ತಿತ್ವದಿಂದ ಕನ್ನಡ ಜನಮನದಲ್ಲಿ ಮನೆಮಾಡಿಕೊಂಡಿದ್ದಾನೆ.

# ಜಗದ ಮರ್ಮಜ್ಞ

ಡಿ. ಎಸ್. ಕರ್ಕಿ

ಇವನಿವನೆ ನೋಡು
ಸರ್ವಜ್ಞಕವಿ ಇವನೆ
ಜಗದ ನೆಲೆಕಲೆಯರಿತ
ಮರ್ಮಜ್ಞನಿವನೆ :
ಸುತ್ತಲಿನ ಬಾಳಬಗೆ
ತನ್ನ ಅರುಹನು ಪರಿಶೀಲಿಸಿ
ಅದಕೆ ಸೂತ್ರಗೊಳಿಸಿ
ಲೋಕಾನುಭವದ ಸಾರಜ್ಞನೆನಿಸಿ
ನಾಲ್ಕು ಶತಮಾನಗಳು
ಶ್ರುತಿಗೊಳುತ ಬಂದಿರಲು
ತೀಕ್ಷ್ಣ ಚಿತ್ತವ ತಿಳಿಯು
ತ್ರಿಪದಿಯಲಿ ಬೆಳಗಿ
ನಿಂದಿಹನು ತ್ರಿಪದಿಯು
ತ್ರಿಣೇತ್ರನಾಗಿ.
ನೋಡಿವನೆ ಸರ್ವಜ್ಞ
ಇವನಿವನೆ ನೋಡು
ಸರ್ವಜ್ಞಕವಿ ಇವನೆ
ಜನದ ನೆಲೆ ಕಲೆಯರಿತ
ಮರ್ಮಜ್ಞನಿವನೆ.

ವೈಶಿಷ್ಟ್ಯಪೂರ್ಣನಹ
ವ್ಯಕ್ತಿಯೀತ
ಎಂಟು ದಿಕ್ಕಿನ ಬೆಳಕ
ಸ್ವಾಗತಿಸುತ
ಇದ್ದುದನು ಇದ್ದಂತೆ ಚಿತ್ರಿಸುತ್ತ
ಜಗದ ವೈಚಿತ್ರ್ಯವನು
ಬಗೆಯ ಕನ್ನಡಿಯಲ್ಲಿ
ಪಡಿಮೂಡಿಸುತ್ತ
ನಿಚ್ಚಳದ ನುಡಿಯಲ್ಲಿ
ಕುಂದು ಕೊರತೆಗಳನ್ನು
ಎತ್ತಿತೋರುತ್ತ
ನಿಚ್ಚನಿಚ್ಚವು ಜನರ
ಎಚ್ಚರಿಸುತ
ಇಂದಿಗೂ ಮನಮನದಿ
ನಿಂದಿರುವನೀತ
ಅಚ್ಚುಮೆಚ್ಚಿನ ಕವಿಯು
ಸರ್ವಜ್ಞನೀತ.

ನೀತಿ ರೀತಿಗಳ
ಸಾರಜ್ಞನೀತ
ಗಮನಿಸುವ ಜನಕಿವನೊ-
ಳಹುದು ತೀರ್ಥ;
ಹಂಗಿಲ್ಲದಿಹ ಬಾಳ್ಗೆ
ಹಿಂಗದಿಹ ಬುದ್ಧಿ
ಜೋಡುಗೊಂಡಿರೆ ಕೇಳ
ಬೇಕೆ ಈತನ ಸಿದ್ಧಿ

ತೀಕ್ಷ್ಣಮತಿ ಸಹಜ ಯತಿ
ತುಂಡು ಬಟ್ಟೆಯನುಟ್ಟು
ಕಂಬಳಿಯ ಹೊದೆದು
ಕೈಯಲ್ಲಿ ಕುಣಿಯುತಿಹ
ಕೋಲೊಂದು ಹಿಡಿದು
ಜಗದ 'ಪದ್ಧತಿ'ಗಳನು
ನಗೆಗೂಡಿ ನುಡಿದು
ಜಗದ ಮಧ್ಯದೊಳಿದ್ದು
ಹಿಂಡನಗಲಿಹ ಹಿರಿಯ
ಗಜದಂತೆ ನಡೆದು
ಸರ್ವರಿಗು ಸರಿದಾರಿ-
ಯನ್ನು ತೆರೆತೆರೆದು
ಸಕಲರಿಗೂ ಹಿತಕಾರಿ-
ಯಾಗಿ ನಡೆದು
ಧನ್ಯನಾದನು ಮಾನ್ಯ
ಸರ್ವಜ್ಞನಿವನು.

ಇವ ಏನಿತು ಹಳಿದರೂ
ಹುಳಿಯಿಲ್ಲ ನಡೆಯಲ್ಲಿ
ಅವನು ಚಿಮ್ಮಿದುದೆಲ್ಲ
ತಿಳಿಬಗೆಯ ಓಕುಳಿ
ಬಟ್ಟೆ ರಂಗಾದಷ್ಟು
ನಗೆ ಬರುವುದೆಮಗೆ
ಹೊಗೆಯಿಲ್ಲ ಬಗೆಗೆ ತುಳು-
ತುಳುಕಿ ಬರುವುದು ಬೆಳಕು
ನುಡಿಯಲಿ ವಿಡಂಬನೆಯ
ಬಿಡದಿದ್ದರೇನು ?
ಜನಕೆ ಒಳಿತನೆ ಅರುಹಿ
ನಡೆವನಿವನು.

ವಿವಿಧ ಜಾತಿಯೊಳೊಂದೆ
ಜ್ಯೋತಿಯನು ಕಂಡವನು
ಒಂದೆ ಮಾನವ ಧರ್ಮ-
ವನು ಕಿರಣಿಸಿಹನು
ಅವನ ತ್ರಿಪದಿಗಳಲ್ಲಿ
ಇಹುದು ಬಾಳಿನ ಬುತ್ತಿ
ಉಂಡು ನಲಿವರಿಗೆಲ್ಲ
ನಿತ್ಯ ತೃಪ್ತಿ.

# ಸರ್ವಜ್ಞ

ಶೈಲಜಾ ಉಡಚಣ

ಹಿಂದೆ ಬಲು ಹಿಂದೆ,
ಕೇವಲ ಭಕ್ತಿಗಾಗಿ ಬಾಗಿದ್ದ ಬೆಟ್ಟಕ್ಕೆ
ಬೆನ್ನ ಮೂಳೆ ಮುರಿದಂತಾಗಿತ್ತು,
ಮುಗಿಲಿನಲ್ಲಿಯೇ ವಿಹರಿಸಿ ಬೇಸತ್ತ ಮಿಂಚಿಗೆ
ಮನೆಮನೆಯ ಮುಂದೆ ನಿಲ್ಲಬೇಕೆನಿಸಿತ್ತು,
ಅನಂತತೆ ಅಡವಿ ಪಾಲಾಗಿ ಸಾಕಾಗಿ ಹೋಗಿ
ಒಮ್ಮೆ ತುಂಡುಗಂಬಳಿಯಲ್ಲಿ ಮುದುಡಬಯಸಿತ್ತು,
ಮೇಲೆ ಮೇಲೆ ಎತ್ತರಕ್ಕೇ ನಡೆದ ರಜತ ಗಿರಿಗೆ
ಕೆಳಗಿಳಿದು ಬಂದು ಕರದ ಕಪ್ಪರದಲ್ಲಿ ಕುದುರಬೇಕಿತ್ತು,
ಬಯಲ ಬ್ರಹ್ಮಾಂಡಕ್ಕೆ, ನೂರು ನೂರು ಕಾವ್ಯಗಳ
ಕೋಟಿ ಪದಗಳಲ್ಲಿ ಹರವಿ ನೆಲೆ ಸಿಕ್ಕದೆ ಮುತ್ತಿನಂತಹ
ಮೂರು ಮಾತಿನಲ್ಲಿ ಮುದುಡಬೇಕಿತ್ತು,
—ಇವೆಲ್ಲ ಒಂದೆಡೆ ಸೇರಿ ಚಿಂತಿಸಿದವು
ತಂತಮ್ಮ ಬಯಕೆಯನ್ನು ಬಿಚ್ಚಿಕೊಂಡು.

ದುಃಖ ಧಾರೆಯಾಗಿ ಗಂಗೆಯಿಂದ ತುಂಗೆಗೆ ಹರಿದು
ಬಂದು ಮಡುಗಟ್ಟಿತು.
ಆಗಲೆ ಬೆಳಗ್ಗೆದ್ದು ತಾನೆ ನೀರು ತುಂಬಲು ನಡೆದವಳು
ನುಡಿಗರತಿ, ಮಕ್ಕಳಣದುರು ಚೆಲ್ಲಾಪಿಲ್ಲಿ ಅಸ್ತವ್ಯಸ್ತ
ಆ ಅಹಮಿಕೆಗಳಿಂದ ಬೇಸತ್ತು;
ಪಥಕ್ಕೆ ಬಂದಾಗ ಅವಳ ಬಯಕೆ ಬದುಕಾಗಿತ್ತು
ಜಲ, ಜೀವವಾಗಿ,
ಹಿಗ್ಗಿ ಮುತ್ತಿಟ್ಟು ಎತ್ತಿದಳು, "ನಡೆ ಮಗನೆ", ಎಂದು
ಕೈ ಹಿಡಿದಳು.
ಬೆಟ್ಟ ನಡೆಯಿತು

ಮಿಂಚು ಕೋಲಾಯಿತು
ಕಪ್ಪುರದ ಕೈಲಾಸ ಕೈಯಲ್ಲಿ ಬಂತು
ತುಂಡುಗಂಬಳಿ ಹೊದೆದು ನಡೆದ ಮನೆಮನೆಗೆ.
ಮುತ್ತಿನಂತಹ ಮೂರು ಮಾತು ತೊದಲಿದನು
ಮಗೂ ಹೆಸರೇನು ಎಂದುದಕ್ಕೆ?
"ಸರ್ವಜ್ಞ"
ಸರ್ವರೊಳಗೊಂದು ನುಡಿಗಲಿತ ಸರ್ವಜ್ಞ.

# ಸರ್ವಜ್ಞ ಕವೀನ್ನ ಕಂಡರ....

ಭುಜೇಂದ್ರ ಮಹೀಶವಾಡಿ

ಆಗ—

ಸರ್ವಜ್ಞ ಕವೀನ್ನ ಕಂಡರ—
ರಾಜಾನ ಎದೀ ಧಸಕ್ ಅಂತಿತ್ತು;
ಮಂತ್ರೀ ಮಾರಿಗಿ ಮುಸುಕ ಬೀಳತಿತ್ತು;
ಸೇನಾಪತಿ ಕಾಲಾಗ ಝುಮ್ ಬರತಿತ್ತು;
ದಂಡಿಗಿ ದಂಡೆಲ್ಲಾ ಅರ್ಧಂಗಿ ಬ್ಯಾನಿ ಬಂದ
ಲುಕುಲುಕು ಅಳಗ್ಯಾಡತಿತ್ತು!

—ಯಾಕ?
ಅವನ ಕೈಯ್ಯಾಗೇನ
ಅಟಂ ಬಾಂಬ್ ಇತ್ತು?

ಆಗ—

ಸರ್ವಜ್ಞ ಕವೀನ್ನ ಕಂಡರ-
ದೇವರ ಹೆಸರ ಮ್ಯಾಲ
ಧರ್ಮದ ಹೆಸರ ಮ್ಯಾಲ
ದರಬಾರ ನಡೆಸಿದ
ಪುರೋಹಿತರ ಹಿಂಡಿಗಿಹಿಂಡs
ಹಾರ್ಟಫೇಲಾಗಿ ಸಾಯುತಿತ್ತು;
ಜಾತೀ ಹೆಸರ ಮ್ಯಾಲ
ಸುಳ್ಳ-ಪಳ್ಳ ಮೆರದಾಡೂ ಮಂದಿಗೆಲ್ಲಾ
ಸೆಟೀಬ್ಯಾನಿ ಬರತಿತ್ತು,
ಸೆಟೀಬ್ಯಾನಿ!

—ಯಾಕ?
ಅಂವ್ಯಾನ ದೆವ್ವೊ-ಭೂತೋ?
ಅಷ್ಟ್ಯಾಕ ಅವಂಗ ಅಂಜತಿದ್ರು?

ಈಗ—

ಸರ್ವಜ್ಞ ಕವೀನ್ನ
ಕರಕೊಂಡ ಬಂದ್ರ,–
ಕಳ್ಳ–ಕದೀಮರೆಲ್ಲಾ
ಅಂಜಿ ಸಂದೀಗೊಂದೀ
ಅಡಕ್ಕೋತಾರು!
ಪುಂಡ–ಪುಢಾರಿಗಳಿಗೆಲ್ಲಾ
ದುರ್ಗವ್ವ ಬರತಾಳು!
ಹಾದೀ ತಪ್ಪಿ ನಡಿಯೂ
ಹೆಣ್ಣೂ–ಗಂಡಿಗೆಲ್ಲಾ
ಮೆಯ್ಯಾಗ ಉರೀ ಬರತಾವು!

—ಇಷ್ಟೆಲ್ಲಾ ಮುಂದೀನ ಅಂಜಿಸಿಕೊಂಡ
ಸಾಮ್ರಾಜ್ಯ ಆಳತಾನ ಸಾಮ್ರಾಜ್ಯ–
ಆ ಸರ್ವಜ್ಞ ಭೂಪ,
ಸಾಮಾನ್ಯ–ಏನಪಾ?

ಹಿಂದೀನ ಜನ್ಮದಾಗ
ಬಿಸೀ ಇಲ್ದs ಬಾನಾ ಉಂಡ
ಜೈನೀ ಮಾಡಿ ಸತ್ತ ಮಂದಿ
ಈ ಜನ್ಮದಾಗ ಹಕ್ಕ್ಯಾಗಿ
ಹಾರ್ಯಾಡಿ ಮೆಯ್ಯೂ ಹೊತ್ತಿನ್ಯಾಗ
ಹೋದಾಗ ಹಾಕಿದ
ಸರ್ವಜ್ಞ ಕವೀ ಬಿದರ–ಬೆಂಚಾ ನೋಡೇ–
ಹೌಹಾರಿ ತೆನೀ ತಿನದ
ಬ್ಯಾಡರ ಬಲ್ಯಾಗ ಬೀಳತಾವು!

ಆ ದೊಡ್ಡ ಪಟ್ಟಣದಾಗ,
ನಟ್ಟನಡೂ ಚೌಕ್ಯಾಗ–
ಸರ್ವಜ್ಞಪ್ಪನ ಮೂರ್ತಿ ಮಾಡಿ
ನಿಲ್ಲಿಸಿಬಿಟ್ರ—ಅವನ ಕಣ್ಣ ಕ್ಯಾಮರಾದಾಗ
ಕಳ್ಳ–ಸಂತೀ ಗ್ಯಾಂಗಿನ ಕರಾಮತಿ
ಚಿತ್ರೀಕರಣ ಆಗಬಹುದು;

ಅವನ ಎದೀ ಛಾಪಗಾನ್ಯಾಗ
ಪೊಟ್ಟಿ ನೋಟ ಛಾಪಸೂ ಮಂದೀ
ಫೋಟೋ ಅಚ್ಚ ಆಗಬಹುದು;
ಅವನ ಕಿವೀ ಅಂಬೂ ಟೇಪ-ರಿಕಾರ್ಡ
ಯಂತ್ರದಾಗ ಮೋಸಗಾರರ ಮಾತೆಲ್ಲಾ
ಮೂಡಬಹುದು!

ಹುಷಾರ್ !

ಸರ್ವಜ್ಞಪ್ಪನ ಮುಂದ
ಯಾವಪ್ಪನ ಪುಂಗೀಕಾಯಿ
ಸುಡಿಯಾಂಗಿಲ್ಲ;
ಯಾರ ದಿಮಾಕ ನಡಿಯಾಂಗಿಲ್ಲ!
ಸೊಕ್ಕ-ಯಮಕ-ಗತ್ತ-ಗಮಕ
ಯಾವದೊಂದೂ ಸಾಗಾಂಗಿಲ್ಲಾ !
ನನ್ನ ಮುಂದ ಯಾಂವ ಅದಾನಂತ
ಸೆಟಿದ ನಡ್ಯಾವನ ತಲೀಬುರಡಿ
ಬಡೀತೈತಿ!
ಮೀಸೀ ತಿರುವಾವನ ಮೂಗಿನ ಹೊಳ್ಳಿ
ಹರೀತೈತಿ!
ಹಾಂಗೂ ಹಿಂಗೂ ಮಾಡಿ
ಕಿತಕೊಂಡ ಕೂಡಿಸಿಟ್ಟವನ ಕೈ
ಕೀಳತೈತಿ!
ಅವರದಿವರದ ಕಸದ ತಿಂದ
ಉಬ್ಬಿದ ಹೊಟ್ಟಿ ಒಡೀತೈತಿ!
ಶೀಲ ಇಲ್ಲದ ರೂಪವಂತೀ
ಮಾರಿಗೆ ಮೈಲಿ ಏಳತಾವು!
ಗುಣಾ ಇಲ್ದ ಬರೀ ಹಣಾಹಣಾ
ಅಂದವರ ಹೆಣಾ ಬೀಳತಾವು!

ಸರ್ವಜ್ಞ ಅಂದರ—
ಕನ್ನಡಿ ಇದ್ದಾಂಗಪಾ ಕನ್ನಡಿ!
ಇದರಿಗಿ ಬಂದ ನಿಂತವನ

ಪಾಪಾ–ಪುಣ್ಣೆ
ಅವನ ಮಾರೀ ಮ್ಯಾಲs
ಅವನ ಕಣ್ಣಿಗೇ ಕಾಣತೈತಿ!

ಸರ್ವಜ್ಞ ಒಮ್ಮೊಮ್ಮಿ
ಭಾಳ ಅಂಜತಿದ್ದ;
ಅಂದರ–ಅಂವ ಪಾಪಕ್ಕ
ಅಂಜತಿದ್ದ!
ಸರ್ವಜ್ಞ ಒಮ್ಮೊಮ್ಮಿ
ತುಡಗ ಮಾಡತಿದ್ದ;
ಅಂದರ–ಅಂವ ಸಜ್ಜನರ
ಸದ್ಗುಣಾ ತುಡಗ ಮಾಡತಿದ್ದ!
ಅಂದರ—
ಅವರ ಉರಿಯೂ ಹಣತೀ
ಆರಸದsನ ತನ್ನ ಹಣತೀಗಿ
ದೀಪಾ ಹಚಕೋತಿದ್ದ!

ಸರ್ವಜ್ಞಪ್ಪ ಅಂದರ
ಒಳಗ–ಹೊರಗ ಒಂದs ರೂಪ!
ದಿಗಂಬರೆಪ್ಪ ನಮ್ಮಪ್ಪ
ಬೆಳಗುಳ ಗುಮಟೇಸೂರ!
ಒಳಗ–ಹೊರಗ ಒಂದs ರೂಪ!

ಗರುವ ಬ್ಯಾಡಂತ,
ಸರುವರೊಳಗಿನ ಸದ್‌ಗುಣಾ ಕಲ್ತು
ವಿದ್ಯಾದ ಪರವತ ಆಗಬೇಕಂತ!
ಅಧ್ಯಾಂಗ್‌ಪಾ! ಅಂತಿಯೇನು?

ಅವಗುಣಾ ಅಂಬೋ ಹಣಜಿ ಹತ್ತಿ
ನಮ್ಮ–ನಿಮ್ಮ ಮನೀ ಮಾಳಿಗಿ ಸೋರತಾವು!
ಒಂದೀಟs ದುಡ್ಡಾ ಮತ್ತ ಅಮಲಾ
ಇದ್ದರಂತೂ ತೀರೇಹೋತು,
ಸೊಕ್ಕ ತಲಿಗಿ ಏರಿ ಕೂತು
ಕೇಡಿ ಸೆಟಧಾಂಗ ಸೆಟೀತೀವು!

ಕಚ್ಚಿ–ಕೈ–ಬಾಯಿ ನಿನ್ನ
ಇಚ್ಛಾದಾಗ ಇದ್ದರ–
ನೀನಽ ಅಚ್ಯೂತಂತ
ಅಜಾ ಅಂತ, ಲೋಕದಾಗ
ನೀ ನಿಚಿಂತಿ ಅಂತ!

ಅದೇನ ನಮ್ಮ ಕೈಲಿ, ನಿಮ್ಮ ಕೈಲಿ
ಆಗೂ ಮಾತ?

ಹಾಂಗ ವಿಚಾರಮಾಡಿ ನೋಡಿದರ
ನಮಗ–ನಿಮಗ ಕಚ್ಚಿರೆ ಎಲ್ಲಿ ಐತಿ?

ಲುಂಗಿ, ಪ್ಯಾಂಟು, ಪಾಯಿಜಾಮು
ಗೋಲ್ ಸಾಡಿ, ಸ್ಕರ್ಟು, ಬೆಲ್‌ಬಾಟಮು!

ಅದ ಹೋಗ್ಲಿ, ನಮ್ಮ–ನಿಮ್ಮ ಕೈಯ್ಯರೆ
ಕೈಯ್ಯಾಗದಾವೇನ?

ಬಾಯಾಗರೆ ಒಂದಽ ನಾಲಿಗಿ ಐತೇನ?
ಸತ್ಯವನು ಬಲ್ಲಾತ
ಸತ್ತಾಂಗ ಇರಬೇಕಂತ!
ಸತ್ತಾಂಗ ಇರಬೇಕಾದರ
ಜೀವಂತರೆ ಎಲ್ಲಿ ಅದೀವು?

ನಡಿಯೂದ ಒಂದಽ ನೆಲಾ
ಕುಡಿಯೂದ ಒಂದಽ ನೀರಾ
ಮನಸ್ಯಾನ ಕುಲಾ ಒಂದಽ ಅಂತಾನು!
ನಾವು ನೆಲದ ಮ್ಯಾಲ
ಅದೀವೋ ಇಲ್ಲೊ ತಿಳೀವಲ್ಲದು;
ನಾವು ನೀರಾ ಅರೆ ಕುಡೀತೀವೋ ಇಲ್ಲೊ
ಹೇಳಲಾಕ ಬರ್ಽವಲ್ಲದು!
ನಮಗ ಕುಲಾ ಅಂಬೂದರೆ
ಐತ್ಯೋ ಇಲ್ಲೊ? ಗೊತ್ತಽ ಆಗವಲ್ಲದು!

ಅದೇನು ಇರಲಿ,
ಸರ್ವಜ್ಞಪ್ಪನ ಹೆಸರ ಹೇಳಿ
ನಾವೂ–ನೀವೂ ಒಂದು
ಆಗುಣೇನ ಇಂದು?
ಸರುವ ಅಜ್ಞಾನ ಅಂಬೂದೆಲ್ಲಾ
ತೊರಿಯೂಣೇನ? ಹೇಳಪಾ!
ನಮ್ಮ–ನಿಮ್ಮ ಹಮ್ಮ ಕಳದ ಒಗಟ
ಎದೀ ತೆರದ ಒಳಗಿನ
ಖರೆ ಕಳಕಳಿ ಅಂಬೂದ
ತೋರಸೂಣೇನ? ಎಳಪಾ!

# ಒಬ್ಬ ಮುದುಕ, ನಮ್ಮಜ್ಜ ಮತ್ತು ಸರ್ವಜ್ಞ

ಬುದ್ದಣ್ಣ ಹಿಂಗಮಿರೆ

ನೀ ಹ್ಯಾಂಗಿದ್ದಿ ಯಾರಿಗ್ಗೊತ್ತು?
ಯಾವನೋ ಒಬ್ಬ ಚಿತ್ರಾ ಬರ್ದು ನಿನ್ನ ತಲೀ ಅಂದಾ.
ತಲೀಗಿ ಒಂದಿಷ್ಟ ಬಿಳೀಕೂದ್ಲಾ ಮಾಡಿದಾ.
ಗದ್ದಕ್ಕ ಒಂದಿಷ್ಟು ಕರೀ-ಬಿಳೀ ಗೆರೀಯಾಡ್ಸಿ
ದಾಡಿ ಮಾಡಿದಾ.
        ಅಂತೂ ಇಂತೂ ನಿನ್ನ ಮುಖಾ ಹೀಂಗಿದ್ದೀತು
                                        ಅಂತಾ ಊಹಿಸಿ
ಮುಖಾ ಆಗ್ಲಿಕ್ಕಿ ಏನೇನು ಬೇಕೊ ಅದ್ನೆಲ್ಲಾ ಮಾಡಿಟ್ಟು
ಕೊಳ್ಳಾಗ ಲಿಂಗಪ್ಪನ ಕಟ್ಟಿದಾ.
ಹಾಗೇ ಬೀಸುಗೈ-ಬೀಸುಗಾಲ್ ಮಾಡಿ
ಲಂಗೋಟಿ ಪಟ್ಟೀ ಸುತ್ತಿ
ಕಾಗದ್ದ ಮ್ಯಾಲಿ ನಿನ್ನನ್ನ ಮೂಡ್ಸಿ ಬಿಟ್ಟ.
ಆದ್ರ ನಿಂದೂ ನಿಂತಲ್ಲೀ ನಿಲ್ಲೂ ಸ್ವಭಾವಾ ಅಲ್ಲಾ ಅನ್ನೂದು ಗೊತ್ತಾಗಿ
ಕೈಯಾಗೊಂದ ಕೋಲ ಕೊಟ್ಟ.
ಆಯ್ತು : ಚಿತ್ರಾ ಬರ್ದ್ಯಾಂವ್ನ ಮನಸಿನ್ಯಾಗ ಹೊಕ್ಕ್ಯಾಂವಾ
ನೀ ಆದಿ.

*        *        *        *

ನಿನ್ನೆ ಸ್ಟೇಶನ್ಕ ಹೋದಾಗ-ಪ್ಲ್ಯಾಟ್‌ಫಾರ್ಮಿನ್ಮ್ಯಾಲೆ
ಯಾವ್ನೋ ಮುದ್ಕ ಅಡ್ಡಾಡ್ತಿದ್ದಾ :
ಟಕ್ ಟಕ್ ಟಕ್—ಅಂತಾ
ಕೋಲೂರ್ತಾ ನನ್ನತಾವ ಬಂದಾವ್ನೇ
ಧುತ್ತಂತಾ ಮುಂದ ಬಂದ ನಿಂತು
    'ಯಾಕ್ ಕೂತಿಲ್ಲೇ ಮಗ್ನೇ
    ಎದ್ದ ಅಡ್ಡಾಡು, ಕೈಕಾಲ ಹೋಗ್ಯಾವಾ?'

ಇಷ್ಟಂದಾವ್ನೇ–ಅಲ್ಲಿಂದಾಗ್ಲೇ ಹೊಂಟ್ಹೋದಾ.
ಹೋವಾ ಹೋದಾ ಹೋಗಿಯೇಬಿಟ್ಟಾ.
ಯಾಷ್ಟೇ ಇರಬೇಕಂತ್ಕೊಂಡು–ಅಷ್ಟ ಸುದ್ದೀ ಅಲ್ಲೇ ಮರ್ತಬಿಟ್ಟೆ
ಆದ್ರೆ, ಅವ್ನೇ ರಾತ್ರೀ ಕನಸಿನ್ಯಾಗ ಬಂದಾ.
ಧಡಧಡಾಂತಾ ಬಾಗಿಲಾ ಮುರ್ದು ಒಳ್ಗ ಹೊಕ್ಕಾಂವಾ–
ಎದೀ ಹತ್ತಿ ನಿಂತು–

'ಯಾಕ ಮಲಗೀಲೇ ಮಗನೇ
ಬಾ ನನ್ನ ಜತಿ ಅಂದಾವ್ನೇ
ಕೋಲ್ನಿಂದ ಬಿಗ್ದಬಿಟ್ಟಾ'.

ಅಯ್ಯೋ, ಮಾಸ್ತರ್ರೇ ಸಾಯ್ತೀನಿ ಹೊಡೀಬ್ಯಾಡ್ರಿ
—ಎಂದು ಕೂಗಿಕೊಂಡೆ.

ಅಷ್ಟರಾಗ ಹೊತ್ತಿನ್ಗೊಂಡಿ ಒಡಿದು
ಮುತ್ತಿನ್ಮಳೀ ಸುರೀತಿತ್ತು,
ಕೊಕ್ಕೊಕ್ಕೋ ಎಂದು ಕೋಳಿ ಕೂಗ್ತಾ ಇತ್ತು.
ನಾ ಅರ್ಧಾ ಕಣ್ಣ ಮಾಡ್ಕೊಂಡು ಓಡ್ಯಾಡೊ ವಯಸ್ಸಿನ್ಯಾಗ
ಒಬ್ಬ ಮುದ್ಕನ್ನ ಕಂಡದ್ದು ನೆಪ್ಪಿಗಿ ಬಂತು.

ನಮ್ಮೂರ ಹನುಮದ್ದ್ಯಾವ್ರ ಗುಡೀಕಟ್ಟಿಮ್ಯಾಲಿ
ಕೂತ್ಕೊಂಡು–ಏನೇನೋ ಕಥೀ ಹೇಳಿದ್ದು,
ಪದಾ ಹೇಳಿದ್ದು–ಥಟ್ಟನೆ ನೆಪ್ಪಾತು.
ಮನಸಿನ್ಯಾಗಾ–
ಖುದ್ದ ಆ ಮುದ್ಕನೇ ಉದ್ದುದ್ದಾಗಿ
ಬೇವಿನ ಮರಾ ಆಗಿ ಹಬ್ಬಿದಾಂಗಾತು. ಹಿರೀಹೊಳೀ ಆಗಿ
ತೆರಿತೆರೀ ಕಡದಾಂಗಾತು.
ಅಷ್ಟರಾಗ್ನೇ ಕಂಬಾರ್ರ ಓಣಿ, ಕುಂಬಾರ್ರೋಣಿ ದಾಟಿ
ಸೆಗಣೀ ಬುಟ್ಟೀ ತಿಪ್ಪಿಗಿ ಹಾಕಿ
ನಮ್ಮಜ್ಜನೇ ಥಟ್ಟಂತಾ ಎದ್ದು ಬಂದಾಂಗಾತು.
'ಅಜ್ಜಾ'–ಅಂತಾ ಅನಬೇಕಂದೆ. ಆದ್ರೆ,
ನಮ್ಮಜ್ಜನ ಮುಖಾನೇ ನಾ ನೋಡಿಲ್ಲ.
ನಮ್ಮಜ್ಜ ಹೆಂಗ್ಮಾತಾಡ್ತಿದ್ನೋ ಅದೂ ಗೊತ್ತಿಲ್ಲಾ.
ಆದ್ರೆ,

ಅಂದು ಸ್ಟೇಶನ್ನದಾಗ ಭೆಟ್ಟಿಯಾಗಿ ಬೈದಾಂವಾ
ಕನಸಿನ್ಯಾಗ ಬಂದು ಎದೀ ಹತ್ತಿ ನಿಂತಾಂವಾ
ಅವ್ನ ಮಾತು ಮಾತ್ರ ಹರ್ತಾಗಿದ್ದು
ಅದ್ನ ಇಂದಿಗೂ ಮರಿಯೂವಾಂಗಿಲ್ಲಾ.

ಬಹುಶಾ ಸರ್ವಜ್ಞ ಅನ್ನಾಂವಾನೂ
ಹೀಂಗs ಇರಬೇಕು ಯಾಕಂದ್ರೇ
ಅವ್ನ ಮಾತೂಂದ್ರೆ
ಒಂದ ಲೋಟಾ ಸೆರೀ ಕುಡ್ದು
ಮ್ಯಾಲಿ ಒಂದೊಬ್ಬಿ ಮಿರ್ಚೀ ತಿಂದ್ಹಾಂಗಾ.
ಜೋಲಿ ಹೊಡೀತಾ ಮನೀಗಿ ಬರೂವಾಗ
ಯಾರಾದ್ರೂ ಹೆಸ್ರು ತಗದ್ರೂಂದ್ರೆ
ಸರ್ದ ನಿಂತು ಕಪಾಳ್ಕ ಬಿಗ್ದ್ಯಾ ಹಾಕತ್ತು.
ನೀ ಹ್ಯಾಂಗಿದ್ದಿ ಯಾರಿಗ್ಗೊತ್ತು?

ಏನ್ ಕೇಳ್ತೀರಿ, ನಂಬಿದ್ರ ನಂಬ್ರಿ, ಬಿಟ್ರ ಬಿಡ್ರಿ
ಅದೆಲ್ಲಾ ಪ್ರಪಂಚದಾಟಾ, ಸೂತ್ರದಾರಿ ಕುಂತಾನ ಮ್ಯಾಲ
ಎಲ್ಲಾ ಅವಂದs ಲೀಲಾ
ಹಾವಂದ ನಾಯಿ ಹಸ್ತು ಚಕ್ಕನs ಹುಲ್ಲು ಕಿಸ್ತು ನಿಂತ್ರ
ನೀರಿ ನೀರಿಗಿ ಇದ್ದಲ್ಲೇ ನಿಗುರಿ ನಿಲ್ಲತಾವಂದ್ರ ನೀವು ನಂಬಬೇಕು
ಛೀ ಏನ್ರೆಪಾ ಎಂಥಾ ಹಲಕಟ್ಟ ಹೇಳ್ತಾರಂತಾ
ಕಿವಿ ಮುರಕೋಬ್ಯಾಡ್ರಿ ಮನಸು ಹರಕೋಬ್ಯಾಡ್ರಿ.
ಈಗ ಧರವಸ್ತ ಸಾಕಷ್ಟೈತಿ. ಅಂದ್ಹಾಂಗ ಅವದ್ದು ಹೇಳಿದ್ನೆಲ್ಲಾ
ಅವರು ಕುಡಗೋಲು ನುಂಗಿದ್ದು ಸಣ್ಣ ಮಾತಲ್ಲಾ.
ಒಟ್ಟಿನ್ಯಾಗ ನಾ ಕವಿತಾ ಬರೀಲಿಲ್ಲಾ.
ಬರಿಯಾಕರ ಪುರಸೊತ್ತೆಲ್ಲೈತಿ?
ದೇಶದ ತುಂಬಾ ಬೀಸೇತೆಲ್ಲಾ ಬಿರುಗಾಳಿ, ಭ್ರಷ್ಟಾಚಾರಾ,
ನಿರುದ್ಯೋಗ ಅದು ಇದೂ ಅಂತಾ
ಆ ಬೀಸ್ಯಾಡೂ ಗಾಳ್ಯಾಗ ನಮ್ಮುಂದಿಕಾಯಿ ಉಸ್ಯಾಡತಾವು—
ಇಂಥಾದರಾಗ ನನ್ನ ಚುಟ್ಟಕ್ಕ ಕಡ್ಡೀ ಕೆರಿಯಾಕ
ನನಗs ಪುರಸೊತ್ತಿಲ್ಲ.
ಅದಕs ಹೇಳಿದ್ನೆಲ್ಲಾ ನಾ ಕವಿತಾ ಬರೀಲಿಲ್ಲಾ ಅಂತಾ.
ಆ ಜನರ್ದ್ದೋ, ಅವರ ಮೀಸೀಗಂಟಿದ ಸಾವಿರ ಆಶೆ
ಬೂದ್ಯಾಗಿ, ಕಣ್ಣಾಗ ಹೂವಾಗಿ ನಗತಾವ.
ಅವ್ರಕ ತಿಂದ ಕೂಳು ಮೈ ಹತ್ತದಂಗಾಗಿ ಗಂಡಸನ್ನೂದ ಮರೆಸೈತಿ
ತಿನ್ನೂದು ಹ್ಯಾಂಗಂತ ಸರ್ವಜ್ಞ ಹೇಳಿದಾ ಪಾಪ! ಸತ್ತು ಹೋದ
ಸರಿ,
ಹೊಟ್ಟ್ಯಾಪ್ರು ಸತ್ತು ಸುಡೂ ಕಿಚ್ಚಿನ್ಯಾಗ ಬುಟ್ಟಾ ಹಚಿಗೊಂಡು
ಕೈಕಾಸೂ ಜನಕ್ಕ ನಮ್ಮ ದೇಶ ಏನ್ ಕಡ್ಮಿ ಮಾಡೈತಿ
ಅವರ ಹೆಸರ್ಲೇ ನಮ್ಮದನ್ನೂ ಡೋಲು ಹೋಡೀತೀವಿ
ಕುಡೀತೀವಿ ಕುಣೀತೀವಿ ಅದಕs ನಾ ಕವಿತಾ ಬರೀಲಿಲ್ಲಾ, ಅವರ
ಸತ್ತಾವನ ಹೆಸರ್ಲೆ ಅಷ್ಟರs ಬಾಳಾ ಅಂತ
ಇದನ ಬರೀಬೇಕಾತು ಬರಿದ್ಯಾ. ತಪ್ಪು ತಿಳೀಬ್ಯಾಡ್ರಿ
ಶಾಸ್ತ್ರಾ ಹೇಳಿ ಬದನೀಕಾಯೀನ ತಿನ್ನೂದು
ನಮ್ಮ ದೇಶದಾಗಿನ ಹೊಕ್ಕಳ ಗುಣಾರೆಪಾ.

# ಸರ್ವಜ್ಞಮೂರ್ತಿ

ಎಚ್. ಎಸ್. ಭೀಮನಗೌಡರ

ಅಯ್ಯಾ ಸರ್ವಜ್ಞಮೂರ್ತಿ,
ನಿನ್ನಂಥವರ ಕನಸಿನ
ಈ ಪಂಜರದಲ್ಲಿಯೆ ನಿನ್ನ
ನುಡಿಯುತ್ತಾ ಪಠಿಸುತ್ತ ನಿನ್ನ ಭಜಿಸುತ್ತ
ಜಪಿಸುತ್ತ ನೆಮ್ಮದಿ ಪಡೆಯುವದೆ ಲೇಸು

ಎನ್ನುತ್ತಲೆ, ಆ ಕಾಡುಗಿಡ
ಆಳಕ್ಕೆ ಬೇರಿಳಿಸು ದಿಕ್ಕುದಿಕ್ಕಿಗೂ ಹಚ್ಚಗೆ ಹರಡಿ
ಹೂವಾಗಿ ಕಾಯಾಗಿ ಹಣ್ಣಾಗಿ ಬೆಳೆಯುವುದ
ಪಾರ್ಥಸಾರಥಿಯ ಹಾಗೆ ಬೆಳೆಯುವುದ
ಹೇಗೆ ಮರೆಯುವುದು

ಎನ್ನುತ್ತಲೆ, ಒಟ್ಟು ನೀನೂ ನಮ್ಮ ಹಾಗೆ
ಇಲ್ಲಿಯೇ ಕಣ್ಣು ತೆರೆದದ್ದೇನೊ ಖರೋಬರಿ
ಮನೆ ಬಿಟ್ಟದ್ದು, ಮಠ ಬಿಟ್ಟದ್ದು ಅಥವಾ
ಮಣ್ಣ ಬಿಟ್ಟದ್ದೇ ಒಂದು ಆಶ್ಚರ್ಯ.
ಹೆಣ್ಣು ಬಿಟ್ಟದ್ದಂತೂ ಇನ್ನೂ ಆಶ್ಚರ್ಯ.
ಕೇವಲ ವಿದ್ಯೆಯ ಪರ್ವತವಾಗಿ ಬೆಳೆದು
ಡೋಲು ಬಾರಿಸಿದರೆ
ಅದೇ ಏನು ಮುಕ್ತಿಗೆ ದಾರಿ?

ಎನ್ನುತ್ತಲೆ, ಹಣ್ಣು ಬಿರಿದು
ಕಣ್ಣಲ್ಲಿ ಕೆಂಪನೆ ಬಿಂಬ
ಬಾಯಲ್ಲಿ ಬಂಗಾರದ ನೀರು
ಗಕ್ಕನೆ ಜಿಗಿದು ಗಬಗಬ ತಿಂದು
[illegible]ಪ್ರಾಣಿಯಾಗಿಬಿಡಬೇಕು

ಎನ್ನುತ್ತಲೆ, ಮತ್ತೆ ನಿನ್ನ ಶತಮಾನೋತ್ಸವ ಬೇರೆ
ಒಮ್ಮೆ ನಡುರಾತ್ರಿಯಲ್ಲಿ ಮನೆಮಾಳಿಗೆ ಮೇಲೆ
ಕುಳಿತು ಕೂಗಿಹೋದ ಗೂಗೆಯು ಬೋಧನೆ
ಓಣಿ ಓಣಿಯಲ್ಲಿ, ಮನೆಮನೆಯಲ್ಲಿ
ಮೆರವಣಿಗೆ ತೆಗೆದ ಕಾಗೆಗಳಿಂದ ಪ್ರಸಾರ

ಎನ್ನುತ್ತಲೆ, ಕಣ್ಣು ಹಣ್ಣಿನತ್ತಲೆ
ತಿನ್ನುವುದಕ್ಕಿಂತಲೂ ತಿನ್ನಬೇಕೆಂಬ ಹುಚ್ಚೇ ಹೆಚ್ಚು.

ಎನ್ನುತ್ತಲೆ, ಎಲಾ ಅವಿವೇಕಿ
ಈಗ ಗೊತ್ತಾಯಿತು ನೋಡು :
ವಿದರ್ಭದೇಶದ ಶ್ವೇತರಾಜನ ಹಾಗೆ
ನೀನು ಕೈಲಾಸಕ್ಕೆ ಹೋದ ಮೇಲೆ
ನಿನಗೂ ವಿಪರೀತ ಹಸಿವಾಗಿ ಮರಳಿಬಂದು
ಇಲ್ಲಿ ಬಿಟ್ಟುಹೋಗಿರುವ ನಿನ್ನ ಹೆಣವನ್ನೇ
ಈಗ ನಮ್ಮ ಮೂಲಕ ತಿನ್ನಲು
ಹೊಂಚು ಹಾಕಿದ್ದೀಯಾ ಎನ್ನಬೇಕಾಗುತ್ತದೆ.

# ಕನಸಿನ್ಯಾಗ ಸರ್ವಜ್ಞ

ಕಲಾಶೇಖರ

ಸರ್ವಜ್ಞ ಸತ್ತಿಲ್ಲ
ಆವಾನ ಜೀವಂತ
ಅಲ್ಲಿಲ್ಲೊ ಅಡ್ಡಾಡತಿದ್ದ
ಅಂತ, ನಂಗೊಂದು ಕನಸು ಬಿತ್ತು.

ಮೈಮ್ಯಾಲಡ್ಡ ಕಂಬ್ಳಿ ಹೊದ್ಕೊಂಡು
ಗೇಣ್ ಬಟ್ಟೀಲೆ ಮರ್ಯಾದಿ ಮುಚ್ಗೊಂಡು
ಎಡಗೈಯಾಗ ಕೋಲು,
ಬಲಗೈಯ್ಯಾಗ ಪರಟಿ ಹಿಡ್ಕೊಂಡು
ಪರ್ಯಟನ ಮಾಡ್ತಿದ್ದ.

ಆಯಾಸಾತು, ಊರ್ಮುಂದಿರ
ಮರದ್ಕೆಳಗ ಕೂತ್ಕೊಂಡ;
ನಿದ್ದೀ ಜೋಮು ಬಂತಂತ
ಲಂಗೋಟಿ ಒಂದs ಬಿಟ್ಟು
ಉಳದವೆಲ್ಲ ಬದಿಗಿಟ್ಟು
ಮಲ್ಕೊಂಡs ಬಿಟ್ಟ.

ಹಿಂಗ, ಮೈಮ್ಯಾಲೆಚ್ಚರಿಲ್ದ ಮಲಗಿದ್ರ
ಹಂಗs ಬಿಟ್ಟಾರs ಈಗಿನ್ಕಾಲ್ದ ಜನ ?
ಕೋಲು, ಪರಟಿ ಹೊಡ್ಕೊಂಡು
ಕಂಬ್ಳೀನು ಹೊತ್ತs ಬಿಟ್ರು.

ಗೊರಕಿ ಹೊಡಿಯೋದನ್ನ ನೋಡಿ
ಗುಡಿಕಟ್ಟಿ ಮ್ಯಾಲೆ ಕುಂತು
ಹರಟಿ ಹೊಡಿಯೋ ಜಾಣ್ ಜನ
ಗೇಣು ಬಟ್ಟೀನು ಕಿತ್ಗೊಳ್ಳಾಕ
ಛೂ ಬಿಟ್ರs ಸಣ್ಣ ನಾಯೀನ.

ಉಸುರ್ನ ಬಿಗಿಹಿಡ್ದು ಎರಡ್ಕಾಲಿನ ನಾಯಿ
ಒಂದೊಂದಽ ಹೆಜ್ಜಿ ಇಡ್ತಾ ಹತ್ರ ಬಂತು-
ಇನ್ನ ಲಂಗೋಟಿಗೆ ಕೈಹಾಕ್ಬೇಕು
ಬುದುಂಗ್ನ ಎದ್ದು ಹೊರಟಽಬಿಟ್ಟ ಸರ್ವಜ್ಞ.
ಹಿಂಗಾಗೋದು ಗೊತ್ತಽ ಇತ್ತಂತ ಅಂವ್ಗ
ಯಾಕ? ಅಂವ ಸರ್ವಜ್ಞ, ಅದಕಽ.

ಆವಾಗ, ಸರ್ವೇಜನ ಸೇರಿ ಸ್ಟೇಜ್ ಕಟ್ಟಿ
ಕಂಚಿನ ಪರಟಿ, ಕಬ್ಬಿನ ಕೋಲು
ಕೈಯ್ಯಾಗ ಕೊಟ್ಟು, ಕಾಶ್ಮೀರ್ ಶಾಲ್ ಹೊಚ್ಚಿ
ಕೊಳ್ಳಾಗ ಮಾಲಿ ಹಾಕಿ-
ಕರ್ಕೊಂಡು ಸಭೆಗೆ ಬಂದ್ರು ಸರ್ವಜ್ಞನ್ನ.

ಹಿಂಗ ಮಾಡಿದ ನಾಯೀನ ದರದರ ಎಳ್ಕೊಂಡ ಬಂದ್ರು
ಅದಕ ಕಲಿಸಿದವ್ರು ಫರಾರಿಯಾದ್ರು.
ಪಾಪ! ಆ ನಾಯ್ಗ ರಪ್ಪ್ ಅಂತ ಹೊಡದಾಂಗಾತು
ಗಪ್ನ ನನಗೆಚ್ಚರಾತು, ಕಣ್ಬಿಟ್ಟೆ :
ತಗೊಳಪ! ಅವಂದಽ ಉತ್ಸವ.

# ಉದಯಾದಿತ್ಯಾಲಂಕಾರ: ಕರ್ತೃವಿಚಾರ

ಎಂ. ವಿ. ಸೀತಾರಾಮಯ್ಯ

‘ಉದಯಾದಿತ್ಯಾಲಂಕಾರ’ ಎಂಬ ಚಿಕ್ಕ ಅಲಂಕಾರಶಾಸ್ತ್ರ ಗ್ರಂಥವು ಕನ್ನಡ ಅಲಂಕಾರಶಾಸ್ತ್ರದ ಚರಿತ್ರೆಯಲ್ಲಿ ವಿಶೇಷ ಪ್ರಾಮುಖ್ಯವನ್ನು ಪಡೆದಿಲ್ಲ. ಬಹುಶಃ ಆ ಕಾರಣದಿಂದಲೇ ವಿದ್ವಾಂಸರ ಗಮನವನ್ನು ಸೆಳೆದಿರಲಿಲ್ಲ; ಗ್ರಂಥದ ಕರ್ತೃವಿನ ವಿಷಯವಾಗಿ ವಾದವಿವಾದಗಳು ಹುಟ್ಟಿಕೊಂಡಿರಲಿಲ್ಲ. ಈ ಗ್ರಂಥವನ್ನು ಮೊತ್ತಮೊದಲಿಗೆ (೧೮೯೪ರಲ್ಲಿ) ಸಂಪಾದನೆ ಮಾಡಿ ‘ಕರ್ನಾಟಕ ಕಾವ್ಯಮಂಜರಿ’ಯಲ್ಲಿ ಪ್ರಕಟನೆ ಮಾಡಿದ ಸಂಪಾದಕದ್ವಯರಾದ ಎಸ್. ಜಿ. ನರಸಿಂಹಾಚಾರ್ಯರೂ, ಎಂ. ಎ. ರಾಮಾನುಜಯ್ಯಂಗಾರ್ಯರೂ ಗ್ರಂಥಕ್ಕೆ ಬರೆದಿರುವ ಚಿಕ್ಕ ಪೀಠಿಕೆಯಲ್ಲಿ ಕವಿ ಕಾವ್ಯವಿಚಾರವಾಗಿ ತಮ್ಮ ಅಭಿಪ್ರಾಯಗಳನ್ನು ತಿಳಿಸಿದ್ದಾರೆ. ಆರ್. ನರಸಿಂಹಾಚಾರ್ಯರು ತಮ್ಮ ಕವಿಚರಿತ್ರೆಯಲ್ಲಿ ಆ ಅಭಿಪ್ರಾಯಗಳನ್ನು ಅಂಗೀಕರಿಸಿದ್ದಾರೆ. ಕರ್ತೃವಿನ ವಿಚಾರದಲ್ಲಿ ಇವರುಗಳಿಗೆ ಸಂದೇಹವೇ ಇಲ್ಲ. ಅವರ ಮತದಂತೆ, ಉದಯಾದಿತ್ಯನೇ ಕರ್ತೃ; ಅವನು, “ವಸುಧಾನಾಥನ ಸೋಮನಾಥನ ಸುತಂ ಚೋಳೋದಯಾದಿತ್ಯಂ”; ಅವನು ಒಂದು ಪದ್ಯದಲ್ಲಿ ಭೋಜನ ಹೆಸರನ್ನು ಸ್ಮರಿಸುವುದರಿಂದ ಭೋಜನ ಕಾಲಕ್ಕಿಂತ (ಕ್ರಿ. ಶ. ೯೯೭–೧೦೫೩) ಈಚಿನವನು, ‘ಸೂಕ್ತಿಸುಧಾರ್ಣವ’ದಲ್ಲಿ ಕ್ರಿ. ಶ. ೧೨೪೫) ಅಷ್ಟಾದಶ ವರ್ಣನೆಗೆ ಸಂಬಂಧಪಟ್ಟ ಉದಯಾದಿತ್ಯಾಲಂಕಾರದ ಪದ್ಯವೊಂದು ಉದ್ಧೃತವಾಗಿರುವುದರಿಂದ ೧೨೪೫ಕ್ಕಿಂತ ಹಿಂದಿನವನು, ಸುಮಾರು ೧೧೫೦ರಲ್ಲಿ ಇದ್ದಿರಬಹುದು.[1]

ನಾನು ಉದಯಾದಿತ್ಯಾಲಂಕಾರದ ಹೊಸ ಪರಿಷ್ಕೃತ ಮುದ್ರಣವನ್ನು ೧೯೬೦ರಲ್ಲಿ ಹೊರತಂದೆ. ಗ್ರಂಥ ಸಂಪಾದನೆ ಮಾಡುವಾಗ ಪಾಠಪರಿಷ್ಕರಣ ಕಾರ್ಯದೊಂದಿಗೆಯೇ ಗ್ರಂಥದ ವ್ಯಾಖ್ಯಾನಕಾರ್ಯವೂ (ಎಂದರೆ, ಅಭ್ಯಾಸಪೂರ್ಣ

೧. ಉದಯಾದಿತ್ಯಾಲಂಕಾರದ ೩೩ನೆಯ ಮತ್ತು ೩೫ನೆಯ ಪದ್ಯಗಳು ಪ್ರಕ್ಷಿಪ್ತಗಳಾಗಿದ್ದು, ೨ನೆಯ ನಾಗವರ್ಮನ ಕಾವ್ಯಾವಲೋಕನದ ಎರಡು ಲಕ್ಷ್ಯ ಪದ್ಯಗಳನ್ನು ಬಹಳವಾಗಿ ಹೋಲುತ್ತವೆ. ಈಚೆಗೆ ಈ ನಾಗವರ್ಮನ ವರ್ಧಮಾನಪುರಾಣ ದೊರೆತು ಪ್ರಕಟವಾಗಿದೆ. ಅದರ ಸಂಪಾದಕರಾದ ಶ್ರೀ ಬಿ. ಎಸ್. ಸಣ್ಣಯ್ಯನವರು ಅದರ ರಚನಾ ಕಾಲವನ್ನು ೧೦೪೨ ಎಂದು ಖಚಿತಪಡಿಸಿದ್ದಾರೆ. ಆದ್ದರಿಂದ, ಉದಯಾದಿತ್ಯಾಲಂಕಾರದ ಕಾಲದ ಪೂರ್ವದ ಗಡಿ ಕ್ರಿ. ಸು. ೧೦೫೦ ಎಂದು ಇಟ್ಟುಕೊಳ್ಳಬಹುದು.

ವಾದ ಟಿಪ್ಪಣಿ ಬರೆಯುವ ಕೆಲಸವೂ) ಕವಿಕಾವ್ಯ ವಿಚಾರ ವಿಮರ್ಶೆಯೂ ಜೊತೆ ಜೊತೆಯಾಗಿ ನಡೆಯಬೇಕು ಎನ್ನುವ ಪಂಥಕ್ಕೆ ಸೇರಿದವನು ನಾನು. ಹೀಗೆ ಮಾಡುವುದರಿಂದ, ಗ್ರಂಥದ ಆಳವಾದ ಅಭ್ಯಾಸಕ್ಕೆ ಅವಕಾಶವಾಗುತ್ತದೆ; ಪೂರ್ವವಿದ್ವಾಂಸರ ಗಮನಕ್ಕೆ ಬಾರದಿದ್ದ ಎಷ್ಟೋ ಸಂಗತಿಗಳು ಗೋಚರವಾಗುತ್ತವೆ; ಪರಿಹಾರವಾಗದಿದ್ದ ಸಮಸ್ಯೆಗಳಿಗೆ ಪರಿಹಾರ ದೊರಕುತ್ತದೆ, ಹೊಸ ಸಮಸ್ಯೆಗಳೂ ಹುಟ್ಟಿಕೊಳ್ಳುತ್ತವೆ.

ಉದಯಾದಿತ್ಯಾಲಂಕಾರದ ಅಧ್ಯಯನ ಸಂದರ್ಭದಲ್ಲಿ ನನಗೆ ತೋರಿಬಂದ ಮುಖ್ಯವಾದ ಸಮಸ್ಯೆಗಳು ಇವು :

೧. ಉದಯಾದಿತ್ಯನ ಹೆಸರು ಹೊತ್ತ ಅಲಂಕಾರ ಗ್ರಂಥದ ಕರ್ತೃ ನಿಜವಾಗಿ ಉದಯಾದಿತ್ಯನೇ, ಅಥವಾ ಬೇರೊಬ್ಬನೇ?

೨. ಉದಯಾದಿತ್ಯ ಕರ್ತೃವಲ್ಲದಿದ್ದರೆ, ಆ ಬೇರೊಬ್ಬ ಯಾರು?

೩. ಈ ಬೇರೊಬ್ಬ ಕವಿಯ ಕಾಲನಿಷ್ಕರ್ಷೆಗೆ ಉದಯಾದಿತ್ಯ ನೃಪನ ಕಾಲದ ನಿಷ್ಕರ್ಷೆ ಅಗತ್ಯವಾದ್ದರಿಂದ, ಈ ಉದಯಾದಿತ್ಯ ಯಾರು, ಅವನ ಕಾಲ ಯಾವುದು?

ಗ್ರಂಥವನ್ನು ಸ್ಥೂಲವಾಗಿ ಪರಿಶೀಲನೆ ಮಾಡಿದಾಗ ಉದಯಾದಿತ್ಯನೇ ಕರ್ತೃ ಎಂದು ಯಾರಿಗಾದರೂ ಅನ್ನಿಸುವುದು ಸಹಜ. ಆದರೆ, ಉದಯಾದಿತ್ಯನನ್ನು ಹೊಗಳುವ, ಅವನನ್ನು ಹೆಸರು ಹಿಡಿದು ಸಂಬೋಧಿಸುವ, ಉತ್ತಮ-ಮಧ್ಯಮ-ಪ್ರಥಮ ಪುರುಷ ಪ್ರಯೋಗಗಳ ಬೆರಕೆ ಒಂದೇ ಪದ್ಯದಲ್ಲಿ ಒಟ್ಟಿಗೆ ಕಾಣಿಸಿಕೊಂಡಾಗ, ಹೊಗಳಿಕೆಗೆ ಸಂದ ರಾಜನೇ ಬೇರೆ ಹೊಗಳುತ್ತಿರುವ ಕವಿ ವ್ಯಕ್ತಿಯೇ ಬೇರೆ ಎಂಬ ತೀರ್ಮಾನಕ್ಕೆ ಬರಲೇಬೇಕಾಗುತ್ತದೆ. ಉದಯಾದಿತ್ಯಾಲಂಕಾರದ ಪರಿಷ್ಕೃತ ಮುದ್ರಣದ ಪೀಠಿಕೆಯಲ್ಲಿ ಅಂತಹ ಪದ್ಯಪಂಕ್ತಿಗಳನ್ನು ಉದಾಹರಿಸಿ, ವಿವರಿಸಿ, ಕವಿ ಉದಯಾದಿತ್ಯನಲ್ಲ ಬೇರೊಬ್ಬ ಎಂಬ ತೀರ್ಮಾನವನ್ನು ಮುಂದಿಟ್ಟಿದ್ದೇನೆ.

ಈ ಬೇರೊಬ್ಬ ಕವಿ ಛಂದೋಂಬುಧಿಯ ಕರ್ತೃ ನಾಗವರ್ಮನಿರಬಹುದು ಎಂಬ ನನ್ನ ಊಹೆಯನ್ನು ಸೂಚಿಸಿದ್ದೇನೆ; ಊಹೆಯೇ ಹೊರತು ತೀರ್ಮಾನವಲ್ಲ ಎಂಬುದನ್ನು ಸ್ಪಷ್ಟಪಡಿಸಿದ್ದೇನೆ.

ಉದಯಾದಿತ್ಯ ಯಾರು ಎಂಬ ಬಗೆಗೆ, "ವಸುಧಾನಾಥನ **ಸೋಮನಾಥನ ಸುತಂ ಚೋಳೋದಯಾದಿತ್ಯಂ**"—ಎಂಬ ವಾಕ್ಯ ಇದು ಮುಖ್ಯವಾದ ಏಕೈಕ ಆಂತರಿಕ ಪ್ರಮಾಣ. ಈ ಚೋಳೋದಯಾದಿತ್ಯ ಯಾರು ಎನ್ನುವುದನ್ನು ಕಂಡು ಹಿಡಿಯಲು ಇತಿಹಾಸದ ದಾಖಲೆಗಳನ್ನು ಅಧ್ಯಯಿಸಬೇಕಾಗುತ್ತದೆ. ಕಾಕತೀಯ

ರುದ್ರದೇವನ ಅನಮಕೊಂಡ ಶಾಸನದಲ್ಲಿ ‘ಚೋಡೋದಯಕ್ಷ್ಮಾಪತಿ’ಯ ಉಲ್ಲೇಖ ದೊರೆಯುತ್ತದೆ. (ಶಾಸನದ ಕಾಲ ಕ್ರಿ. ಶ. ೧೧೬೨-೬೩). ಈ ಶಾಸನದಲ್ಲಿ ಉದಯಾದಿತ್ಯ ಎಂಬ ಪೂರ್ಣ ನಾಮವಾಗಲಿ, ಉದಯಾದಿತ್ಯನ ತಂದೆಯ ಹೆಸರಾಗಲಿ ಉಲ್ಲೇಖವಾಗಿಲ್ಲ. ಅಲಂಕಾರ ಗ್ರಂಥದಲ್ಲಿ ಉದಯಾದಿತ್ಯನ ಹೆಸರನ್ನು ಸಂಕ್ಷೇಪಿಸಿ ಉದಯ, ಉದೇಗ, ಎಂದು ಹಲವು ಕಡೆ ಹೇಳಿರುವುದರಿಂದ ಶಾಸನದ ಉದಯನನ್ನು ಉದಯಾದಿತ್ಯ ಎಂದು ಎಣಿಸಲು ಅಡ್ಡಿಯಿಲ್ಲ. ಅನಮಕೊಂಡ ಶಾಸನದಲ್ಲಿ ಕಾಕತೀಯ ರುದ್ರ (ಕ್ರಿ. ಶ. ೧೧೫೦-೧೧೯೫) ಮತ್ತು ಅವನ ತಂದೆ **ಪ್ರೋಲ (II) (ಕ್ರಿ. ಶ. ೧೧೧೭-೧೧೫೦)** — ಇವರ ಪರಾಕ್ರಮಗಳ ವರ್ಣನೆಯಿದೆ. **ಪ್ರೋಲನು ಗೋವಿಂದರಾಜನನ್ನು ಸೋಲಿಸಿ ಅವನ ರಾಜ್ಯವನ್ನು** ಉದಯ ಅಥವಾ **ಚೋಡೋದಯನಿಗೆ ಕೊಟ್ಟನೆಂದೂ ಅವನ ತಮ್ಮ** ಗೋಕರ್ಣ ಚೋಡನು ಅವನ **ಸಾಮಂತನಾಗಿ ಪಾನುಗಲ್ಲಿನ ಬಳಿ ಆಳುತ್ತಿದ್ದನೆಂದೂ** ತಿಳಿದುಬರುತ್ತದೆ. ಭೀಮನೆಂಬವನು ಚೋಡೋದಯನ ಇನ್ನೊಬ್ಬ ತಮ್ಮ. ಈ ಭೀಮನು ಗೋಕರ್ಣನನ್ನು **ಕೊಂದು ಚೋಡೋದಯನ ನಗರಿಯನ್ನು ಸುಟ್ಟನೆಂದೂ** ಶಾಸನದ ಹೇಳಿಕೆ. ಉದಯ, ಚೋಡ, ಭೀಮ, ಗೋಕರ್ಣ (ಚೋಡ) ಸಹೋದರರೆಂದು ತಿಳಿದುಬರುವುದು ಪ್ರೋಲನ ಕಾಲದ ಪಾನುಗಲ್ ಶಾಸನದಿಂದ (ಕ್ರಿ. ಶ. ೧೧೨೪); ಈ ಮೂವರ ತಂದೆ ‘ತೊಂಡ’ ಎಂದು ಇದೇ ಶಾಸನದ ಉಲ್ಲೇಖ. ಭೀಮನ ಕಾಲದಲ್ಲಿ (ಕ್ರಿ. ಶ. ೧೧೭೮) ಹುಟ್ಟಿದ ವಾಮುಳ್ಳಪಳ್ಳಿ ಶಾಸನದಲ್ಲಿಯಾದರೋ, ಭೀಮ ಗೋಕರ್ಣರು ಉದಯಾದಿತ್ಯನ ಪುತ್ರರೆಂದೂ ಗೋಕರ್ಣನ ಪೌತ್ರರೆಂದೂ ಹೇಳಿದೆ. ಹೀಗಾಗಿ, ತೊಂಡನ ಮಗ ಒಬ್ಬ ಉದಯಾದಿತ್ಯ, ಗೋಕರ್ಣನ ಮಗ ಒಬ್ಬ ಉದಯಾದಿತ್ಯ ಎಂದು ತಿಳಿಯಬೇಕಾಗುತ್ತದೆ. ಅನಮಕೊಂಡ ಶಾಸನ ‘ಚೋಡ ವಂಶ’ದ ಉಲ್ಲೇಖವಿರುವುದರಿಂದ, ಈ ಮೂರೂ ಶಾಸನಗಳನ್ನು ಕೂಡಿಸಿ ಓದಿಕೊಳ್ಳುವುದರಿಂದ ಎದ್ದುಕಾಣುವ ಉದಯ-ಭೀಮ-ಗೋಕರ್ಣದ್ವಯರುಗಳೆಲ್ಲರೂ ಚೋಡ ವಂಶಕ್ಕೇ ಸೇರಿದವರೆಂಬುದು ಸ್ಪಷ್ಟ. ಚೋಳರ ಪ್ರಾಬಲ್ಯ ಕಾಲದಲ್ಲಿ ಅವರ ಸಾಮಂತರಾಗಿದ್ದ ಕರ್ಣಾಟಕಾಂಧ್ರ ರಾಜರನೇಕರು ತಮ್ಮ ಹೆಸರಿನ ಹಿಂದೆ ಚೋಡ (=ಚೋಳ) ಎಂಬ ಪೂರ್ವ ನಾಮವನ್ನು ಹೆಮ್ಮೆಯಿಂದಲೇ ಸೇರಿಸಿಕೊಳ್ಳುತ್ತಿದ್ದರೆಂದು ಚರಿತ್ರೆಯಿಂದ ತಿಳಿದುಬರುತ್ತದೆ. ದಕ್ಷಿಣ ಭಾರತದ ಇತಿಹಾಸದಲ್ಲಿ ಆಗಿಹೋದ ಅನೇಕ ರಾಜವಂಶಗಳಲ್ಲಿ ಹಲವಾರು ಮಂದಿ ಉದಯಾದಿತ್ಯರಿದ್ದರೆಂಬುದು ಇತಿಹಾಸ ಪ್ರಸಿದ್ಧ ಸಂಗತಿ. ಆದರೆ, ಈ ಯಾವ ಉದಯಾದಿತ್ಯನೂ ಚೋಳ ವಂಶೀಯ ಎಂದು ತಿಳಿದುಬರುವುದಿಲ್ಲ; ಇದು ಅತ್ಯಂತ ಗಮನಾರ್ಹವಾದ ಸಂಗತಿ. ಮೇಲೆ ಹೆಸರಿಸಿದ ಮೂರೂ ಶಾಸನಗಳಲ್ಲಿ ಕಾಕತೀಯ ರಾಜರ ಪರಾಕ್ರಮಗಳನ್ನೂ ಅವರ ಪೂರ್ವಜರನ್ನೂ ಹೊಗಳುವುದೇ

ಶಾಸನಗಳ ಪ್ರಧಾನೋದ್ದೇಶವಾದ್ದರಿಂದ, ಅವರ ಸಾಮಂತರ ಮತ್ತು ವೈರಿಗಳ ವಿಷಯವನ್ನು ಆನುಷಂಗಿಕವಾಗಿ ವರ್ಣಿಸುವುದರಲ್ಲಿ ಲೋಪದೋಷಗಳೂ ವಿಸಂಗತಿಗಳೂ ಕಾಣಿಸಿಕೊಂಡಿದ್ದರೆ ಅದು ತೀರ ಸಹಜ. ಹೀಗಿರುವಲ್ಲಿ ಅಲಂಕಾರ ಗ್ರಂಥದ ಚೋಳೋದಯಾದಿತ್ಯ (= ಚೋಳೋದಯ) ಶಾಸನಗಳ ಚೋಳೋದಯ ಎಂದು ಅನುಮಾನಿಸುವುದಕ್ಕೆ ಧಾರಾಳವಾದ ಅವಕಾಶವಿದೆ. ಎಂದ ಮಾತ್ರಕ್ಕೆ, ಈ ಅನುಮಾನವನ್ನು ಬಲಪಡಿಸುವುದಕ್ಕೆ ಅಗತ್ಯವಾದ ಹೆಚ್ಚಿನ ಪ್ರಮಾಣಗಳ ಅನ್ವೇಷಣೆಯು ಅನಗತ್ಯವಿಲ್ಲ; ಈ ವಿಷಯದಲ್ಲಿ ಇದೇ ಕೊನೆಯ ಮಾತು ಎಂದು ಯಾರೂ ತಿಳಿಯಬಾರದು. "ಈ ಸಮಸ್ಯೆ ಬಹು ಜಟಿಲವಾಗಿದ್ದು, ನಮ್ಮ ಸದ್ಯದ ಎಲ್ಲ ತೀರ್ಮಾನಗಳೂ ತಾತ್ಕಾಲಿಕ (Tentative) ಎಂದಷ್ಟೇ ಭಾವಿಸಿ ಕೊಳ್ಳಬೇಕಾಗಿದೆ" ಎಂಬ ಮಾತನ್ನು ಈಗಾಗಲೇ ಹೇಳಿದ್ದಾಗಿದೆ.[೨]

ನನ್ನ ನಿಲುವು ಹೀಗಿರುವಾಗ, ಮೇಲ್ಕಂಡ ಸಮಸ್ಯೆಗಳ ಇತ್ಯರ್ಥಕ್ಕೆ ಗಮನ ಹರಿಸಿ, ಶ್ರೀ ಸಂಗಮೇಶ ಬಿರಾದಾರರು 'ಕರ್ನಾಟಕ ಭಾರತಿ'ಯಲ್ಲಿ[೩] ನನ್ನ ಹೇಳಿಕೆಗಳೆಲ್ಲವನ್ನೂ ಖಂಡನೆ ಮಾಡಲು ಪ್ರಯತ್ನಿಸಿರುವುದನ್ನು ನಾನು ಸ್ವಾಗತಿಸುವೆನು; ಆದರೆ ಅವರ ವಿಚಾರಧಾರೆ ನನಗೆ ಸಮ್ಮತವಾಗಿಲ್ಲ. ಉದಯಾದಿತ್ಯ ಕರ್ತೃತ್ವದ ಬಗೆಗೆ ಅವರು ಮುಂದಿಟ್ಟಿರುವ ಬೇರೊಂದು ಶಾಸನದ ಸಾಕ್ಷ್ಯಾಧಾರ ಅವರ ನಿಲುವನ್ನು ಎತ್ತಿಹಿಡಿಯಲು ಅಸಮರ್ಥವಾಗಿರುವುದಲ್ಲದೆ, ದೋಷಪೂರ್ಣವೂ ಆಗಿದೆ.

ಉತ್ತಮ-ಮಧ್ಯಮ-ಪ್ರಥಮ ಪುರುಷ ಪ್ರಯೋಗಗಳ ಆಧಾರದ ಮೇಲೆ ಗ್ರಂಥಕರ್ತೃ ಉದಯಾದಿತ್ಯನಲ್ಲ, ಬೇರೊಬ್ಬ ಎಂಬ ನನ್ನ ನಿಲುವನ್ನು ಹಿಂದೆಯೇ ಪ್ರಸ್ತಾಪ ಮಾಡಿರುವೆನಷ್ಟೆ. ಕವಿರಾಜಮಾರ್ಗದ ಕರ್ತೃತ್ವ ವಿಚಾರವಿಮರ್ಶೆಯಲ್ಲಿ ಉತ್ತಮ-ಪ್ರಥಮ ಪುರುಷಗಳ ಪ್ರಯೋಗ ಸಾಂಕರ್ಯ ಹೇಗೆ ಅನ್ಯಕರ್ತೃತ್ವ ವಾದಕ್ಕೆ ದಾರಿಮಾಡಿಕೊಡುತ್ತದೆ ಎಂಬ ಅಂಶವನ್ನು ಕೆ. ಬಿ. ಪಾಠಕರು ಸೂಚಿಸಿದ್ದರು. ಡಾ. ರಂ. ಶ್ರೀ. ಮುಗಳಿಯವರು ಕನ್ನಡಸಾಹಿತ್ಯ ಚರಿತ್ರೆಯಲ್ಲಿ ಹೆಚ್ಚಿನ ನಿದರ್ಶನಗಳೊಡನೆ ಈ ವಾದವನ್ನು ಎತ್ತಿಹಿಡಿದಿದ್ದರು. ನಾನು ಈ ವಾದವನ್ನು ಪುರಸ್ಕರಿಸಿ, ಕವಿರಾಜಮಾರ್ಗದ ಪೀಠಿಕೆಯಲ್ಲಿ ಬಲಪಡಿಸಿದ್ದೇನೆ.

---

೧. 'ಉದಯಾದಿತ್ಯಾಲಂಕಾರ'—ಸಂ: ಎಂ. ವಿ. ಸೀತಾರಾಮಯ್ಯ, ೧೯೭೦, ಪೀಠಿಕೆ (ಪು. ೧೪, ಅಡಿಟಿಪ್ಪಣಿ). ಶಾಸನಗಳ ಸಂಬಂಧವಾದ ವಿವರಪೂರ್ಣ ವಿಚಾರವಿಮರ್ಶೆ ಇದೇ ಪೀಠಿಕೆಯ ೭–೧೬ ಪುಟಗಳಲ್ಲಿ ನಡೆದಿದೆ.

೨. ಸ್ವಾತಂತ್ರ್ಯೋತ್ಸವ ಸಂಚಿಕೆ (೫–೧) ೧೯೭೨, ಪು. ೧೨೧–೧೨೮.

ಉದಯಾದಿತ್ಯಾಲಂಕಾರದಲ್ಲಿರುವುದೋ ಮಧ್ಯಮಪುರುಷ ಪ್ರಯೋಗವೂ ಸಂಕರವಾಗಿ, ಅನ್ಯಕರ್ತೃಕತ್ವವನ್ನು ನಿರ್ವಿವಾದವಾಗಿ ಸ್ಥಾಪಿಸುತ್ತದೆ. ಈ ವಿಷಯವಾಗಿ ದಿವಂಗತ ಡಾ. ಡಿ. ಎಲ್. ನರಸಿಂಹಾಚಾರ್ಯರೊಂದಿಗೆ ನಾನು ಮುಖತಃ ಚರ್ಚಿಸಿ, ಪತ್ರವ್ಯವಹಾರ ಮಾಡಿದ್ದೇನೆ; ನನ್ನ ನಿಲುವನ್ನು ಅವರು ಬಹುಮಟ್ಟಿಗೆ ಒಪ್ಪಿದ್ದಾರೆ. ಲೇಖನ ವಿಸ್ತಾರ ಭಯದಿಂದ ಆ ಸಂಬಂಧದ ವಿವರಗಳನ್ನು ಇಲ್ಲಿ ಪ್ರಸ್ತಾಪಿಸುವ ಗೋಜಿಗೆ ಹೋಗುತ್ತಿಲ್ಲ.[೪] ಸಾರಾಂಶವಾಗಿ ಇಷ್ಟು ಹೇಳಬಹುದು: ಪಂಪ, ಕವಿಕಾಮ, ಮಧುರ ಮುಂತಾದ ಅನೇಕ ಕವಿ ಕೃತಿಗಳಲ್ಲಿ, ಕವಿ ಸ್ವವಿಚಾರವನ್ನು ಹೇಳಿಕೊಳ್ಳುವಾಗ ಉತ್ತಮ ಮತ್ತು ಪ್ರಥಮ ಪುರುಷಗಳ ಪ್ರಯೋಗ ಕಂಡುಬಂದರೂ ಒಂದೇ (ಪದ್ಯ) ವಾಕ್ಯದಲ್ಲಿ ಪುರುಷ ಸಾಂಕರ್ಯ ಕಂಡುಬರುವುದಿಲ್ಲ. ಕರ್ತೃತ್ವ ಸಂದಿಗ್ಧತೆಗೆ ಎಡೆಗೊಡದ ಕವಿರಾಜಮಾರ್ಗ, ಉದಯಾದಿತ್ಯಾಲಂಕಾರಗಳಂತಹ ಕೃತಿಗಳಲ್ಲಿ ಕಂಡುಬರುವ ಈ ಬಗೆಯ ಸಾಂಕರ್ಯ ಅನ್ಯಕರ್ತೃಕತ್ವವಾದಕ್ಕೆ ಪ್ರಬಲವಾದ ಆಂತರಿಕ ಪ್ರಮಾಣವೆಂಬುದನ್ನು ತಳ್ಳಿಹಾಕಲಾಗುವುದಿಲ್ಲ. ಈ ಅಂಶವನ್ನು ಶ್ರೀ ಸಂಗಮೇಶರು ಮನಸಿಟ್ಟು ಪುನಃ ಪರಿಶೀಲನೆ ಮಾಡಲಿ; ನನ್ನ ನಿಲುವನ್ನು ಒಪ್ಪುವುದು ಬಿಡುವುದು ಅವರಿಗೆ ಸೇರಿದ್ದು.

ಉದಯಾದಿತ್ಯಾಲಂಕಾರದ ಕರ್ತೃ ಉದಯನಲ್ಲ, ಬೇರೊಬ್ಬ ಎಂದಾದ ಮೇಲೆ ಅವನನ್ನು ಗೊತ್ತುಹಚ್ಚುವ ಪ್ರಯತ್ನಕ್ಕೆ ತೊಡಗಬೇಕಾಗುತ್ತದೆ. ಈ ಅನ್ಯಕವಿ ಆಶ್ರಯದಾತ ಉದಯಾದಿತ್ಯನನ್ನು ಅನೇಕ ಪದ್ಯಗಳಲ್ಲಿ ಉದಯ, ಉದೆಗ ಎಂದು ಏಕಪ್ರಕಾರವಾಗಿ ಸಂಬೋಧಿಸುತ್ತಾ, ಇದ್ದಕ್ಕಿದ್ದ ಹಾಗೆ ಕೆಳದಿ, ಅಬ್ಜಲೋಚನೆ ಎಂದು ತನ್ನ ಕಾಂತೆಯನ್ನು ಕರೆಯಬೇಕಾದರೆ—ಅಲ್ಲಿ ಬಿಡಿಸಬೇಕಾದ ರಹಸ್ಯ ಗ್ರಂಥಿಯೊಂದು ಸೂಕ್ಷ್ಮ ವೇದಿಗಳಿಗೆ ಗೋಚರವಾಗುತ್ತದೆ; ಥಟ್ಟನೆ, ಛಂದೋಂಬುಧಿಯ ನಾಗವರ್ಮನ ನೆನಪಾಗುತ್ತದೆ. ನನ್ನ ನೆನಹಿಗೆ ನುಡಿಗೊಟ್ಟು ಪ್ರಕಾಶಪಡಿಸಿದ್ದೇನೆ — ವಿಚಾರ ಪ್ರಚೋದನೆಯ ಸಲುವಾಗಿ. ನಾಗವರ್ಮನ ಕಾಲದ ಪ್ರಶ್ನೆ ಈ ಊಹೆಯ ಸಂಬಂಧದಲ್ಲಿ ತೊಡಕಾಗದು.

೪. ಈ ವಿಚಾರವಾಗಿ ಡಿ. ಎಲ್. ನರಸಿಂಹಾಚಾರ್ಯರಿಗೆ ನಾನು ೨೪–೧೦–೧೯೬೯ರಲ್ಲಿ ಬರೆದ ಪತ್ರಕ್ಕೆ ಉತ್ತರವಾಗಿ ಅವರು ೧೨–೧೨–೧೯೬೯ರಲ್ಲಿ ಬರೆದ ಪತ್ರದಲ್ಲಿನ ಪ್ರಸಕ್ತ ಭಾಗ: "ಉದಯಾದಿತ್ಯಾಲಂಕಾರದ ಕರ್ತೃ ಉದಯನಲ್ಲ. ಅವನ ಆಸ್ಥಾನದ ಇನ್ನೊಬ್ಬ ಕವಿ ಎಂಬ ಊಹೆಗೇನೋ ಅವಕಾಶವಿರುವಂತಿದೆ. ಇದಕ್ಕೆ ಆಧಾರವಾದ ಗ್ರಂಥಸ್ಥ ವಾಕ್ಯಗಳನ್ನು ಪರೀಕ್ಷಿಸಿ ನೋಡಬೇಕು— ಈ ರೀತಿಯಲ್ಲಿ ಬೇರೆ ಲೇಖಕರೂ ಕವಿಗಳೂ ಯಾರಾದರೂ ಬರೆದಿರುವರೇ ಎಂದು ಇಲ್ಲಿಯ ವರೆಗೆ ಹೋಗಬಹುದು. ಇನ್ನೂ ಮುಂದಕ್ಕೆ ಹೋಗಿ ಕರ್ತೃ ನಾಗವರ್ಮ ಇತ್ಯಾದಿ ಊಹೆಗಳನ್ನು ಮಾಡುವುದು ನನ್ನ ದೃಷ್ಟಿಯಿಂದ ಸಲ್ಲುವುದಿಲ್ಲ."

ಕಾದಂಬರಿಯ ಕರ್ತೃವೇ ಛಂದೋಂಬುಧಿಯ ಕರ್ತೃ, ಅವನ ಕಾಲ ೯೯೦ ಎಂಬ ನಿರ್ಣಯವನ್ನೇ ಶ್ರೀ ಸಂಗಮೇಶರು ಹಿಡಿದಿದ್ದಾರೆ. ಆದರೆ ಈಚಿನ ಸಂಶೋಧನೆಗಳಿಂದ ಕಾದಂಬರಿಯ ನಾಗವರ್ಮನೇ ಬೇರೆ, ಛಂದೋಂಬುಧಿಯ ನಾಗವರ್ಮನೇ ಬೇರೆ; ಛಂದೋಂಬುಧಿಯ ಕಾಲ ೧೨ನೆಯ ಶತಮಾನದ ಉತ್ತರಾರ್ಧಕ್ಕೆ ಹೋಗುತ್ತದೆ ಎಂದು ಬಹುಮಟ್ಟಿಗೆ ನಿಶ್ಚಿತವಾಗಿ ಹೇಳಲು ಅವಕಾಶವುಂಟಾಗಿದೆ. ಹೀಗೆ ಛಂದೋಂಬುಧಿಯ ನಾಗವರ್ಮನನ್ನೂ ಉದಯಾದಿತ್ಯಾಲಂಕಾರದ ಕರ್ತೃವನ್ನೂ ಅಭಿನ್ನರೆಂದು ಹೇಳಲು ಕಾಲವಿಚಾರದ ತೊಡಕು ಇಲ್ಲದಿದ್ದರೂ ಛಂದೋಂಬು-ಧಿಯ ನಾಗವರ್ಮನೇ ಈ ಗ್ರಂಥದ ಕರ್ತೃವಿರಬಹುದೆಂಬ ಊಹೆಯನ್ನು ತೆರೆದ ಪ್ರಶ್ನೆಯಾಗಿಯೇ ಬಿಡಬಹುದು; ಕೈಬಿಡಲೂಬಹುದು. ಆದರೆ ಕೆಳದಿ, ಅಬ್ಜಲೋಚನೆ ಎಂಬ ಸಂಶೋಧನೋತ್ತೇಜಕ ಸಂದರ್ಭ ಮಾತ್ರ ವಿಚಾರಪರರ ಕುತೂಹಲವನ್ನು ಕೆಣಕುವ ಸಂಗತಿಯಾಗಿಯೇ ಉಳಿದಿರುತ್ತದೆ—ಸಮಾಧಾನಕರ ಉತ್ತರಕ್ಕೆ ಕಾಯುತ್ತ.

ಇನ್ನು ಉದಯಾದಿತ್ಯ ಯಾರು ಎಂಬ ಪ್ರಶ್ನೆ. ನನ್ನ ಮತದ ಸಾರಾಂಶ ಈ ಲೇಖನದ ಪ್ರಾರಂಭದಲ್ಲೇ ಬಂದಿರುವುದರಿಂದ, ಅದನ್ನಿಲ್ಲಿ ಮತ್ತೆ ಎತ್ತಬೇಕಾಗಿಲ್ಲ. ಶ್ರೀ ಸಂಗಮೇಶರು ನಾನು ಉದಾಹರಿಸಿರುವ ಶಾಸನಗಳಲ್ಲಿ ಉದಯಾ-ದಿತ್ಯನ ತಂದೆಯ ಹೆಸರು ಕೃತಿಯಲ್ಲಿರುವಂತೆ 'ಸೋಮನಾಥ' ಎಂದು ಉಕ್ತವಾಗಿಲ್ಲ, 'ಗೋಕರ್ಣ', 'ತೊಂಡ' ಎಂದು ಉಕ್ತವಾಗಿದೆ ಎಂಬ ಕಾರಣದಿಂದ ನನ್ನ ವಾದವನ್ನು ಪೂರ್ತಿ ಅಲ್ಲಗಳೆದಿದ್ದಾರೆ. ಈ ಲೋಪಕ್ಕೆ ಸಮಂಜಸ ಎಂದು ನನಗೆ ತೋರುವ ಪರಿಹಾರವನ್ನು ಈ ಲೇಖನದಲ್ಲಿ ನಾನು ಸೂಚಿಸಿದ್ದೇನೆ. ಆದರೆ ಶ್ರೀ ಸಂಗಮೇಶರು ಉದ್ಧರಿಸಿ ಕೊಟ್ಟಿರುವ ತಾಡಪತ್ರಿ (ಅವರು ಬರೆದಿರುವಂತೆ, ಅಥವಾ ತಪ್ಪಾಗಿ ಅಚ್ಚಾಗಿರುವಂತೆ, ತಾಡಪತ್ರಿ ಅಲ್ಲ) ಶಾಸನದಲ್ಲಿ ಉದಯಾ-ದಿತ್ಯನ ಉಲ್ಲೇಖವಿದ್ದರೂ ವ್ಯಕ್ತಿನಿರ್ಣಯಕ್ಕೆ ಅಗತ್ಯವಾದ 'ಚೋಳ' (ಚೋಡ) ಎಂಬ ವಿಶೇಷಣವೇ ಇಲ್ಲ; ಒಂದು ಪದ್ಯದಲ್ಲಿ ಮಾತ್ರ 'ಸೋಮನೃಪಾಪತ್ಯ' ಎಂಬ ಉಲ್ಲೇಖವೇನೋ ಇದೆ. ಶ್ರೀ ಸಂಗಮೇಶರು ಶಾಸನದ ಪೂರ್ಣಪಾಠವನ್ನು ಕೊಟ್ಟಿದ್ದರೆ ಚೆನ್ನಾಗಿತ್ತು. ಕೆಲವು ಭಾಗಗಳನ್ನು ಅನಗತ್ಯವೆಂದೋ ಇಲ್ಲವೆ ಎತ್ತಿಕೊಟ್ಟರೆ ತಪ್ಪು ವಾದಕ್ಕೆ ಧಕ್ಕೆಯುಂಟಾಗುವುದೆಂದೋ ಕಾರಣ ಏನಾದರೂ ಇರಲಿ—ಕೊಡದೆ ಬಿಟ್ಟಿರುವುದರಿಂದ, ಅವರ ಸಿದ್ಧಾಂತವೇ—ಈ ಶಾಸನದ 'ಸೋಮನೃಪಾಪತ್ಯ'ನಾದ ಉದಯಾದಿತ್ಯಕುಮಾರನೇ ಅಲಂಕಾರ ಗ್ರಂಥದಲ್ಲಿ ಉಕ್ತನಾದ, ಅವರ ಅಭಿಪ್ರಾಯದಂತೆ ಅದರ ಕರ್ತೃವಾದ ಉದಯಾದಿತ್ಯ ಎಂಬ ಸಿದ್ಧಾಂತವೇ ಸರಿ ಎಂದು, ವಿಷಯ ಶೋಧನಾಸಕ್ತರಲ್ಲದ ವಾಚಕರು ವಿಚಾರಮಾಡದೆ ಸ್ವೀಕರಿಸಲು ಅವಕಾಶವಾಗಿದೆ.

ಕೈಬಿಟ್ಟಿರುವ ಆ ಭಾಗಗಳನ್ನು ಪರಿಶೀಲಿಸಿದರೆ, ಈ ತಾಡಪತ್ರಿ ಶಾಸನದಲ್ಲಿ ಎರಡುಕಡೆ ಸೋಮಿದೇವನ ಹೆಸರು ಉಕ್ತವಾಗಿದೆ. ಅಲ್ಲದೆ ಕಲಚುರಿ ವಂಶದ ಆಹವಮಲ್ಲ (?), ಕಲಿದೇವ(?)[೫]ರ ಹೆಸರುಗಳೂ ಉಕ್ತವಾಗಿರುವಂತೆ ಊಹಿಸಲು ಅವಕಾಶವಿದೆ. ಸೋಮಿದೇವನ ಇನ್ನೊಂದು ಹೆಸರು ಸೋಮೇಶ್ವರ. ಆದರೆ ವಂಶಾವಳಿಯ ನಕ್ಷೆಯಲ್ಲಿ ಸೋಮಿದೇವನ ಮಗ ಕಲಿದೇವ (?) ಎಂದಿದೆಯೇ ಹೊರತು, ಉದಯಾದಿತ್ಯ ಎಂದಿಲ್ಲ. ತಾಡಪತ್ರಿ ಶಾಸನದ ಜಾಡು ನಮ್ಮನ್ನು ಕಲಚುರಿ ವಂಶದ ಇತಿಹಾಸದ ಮುಕ್ತಾಯದ ಘಟ್ಟಕ್ಕೆ ಕರೆದೊಯ್ದು, ತಟ್ಟನೆ ಹಿಂದಕ್ಕೆ ಜಗ್ಗಿಸಿ ಎಳೆಯುತ್ತದೆ; ನಾವು ಯಾವ ತೀರ್ಮಾನವನ್ನೂ ಕೈಗೊಳ್ಳಲಾಗದೆ ತಟಸ್ಥರಾಗಬೇಕಾಗುತ್ತದೆ. ಶಾಸನದ ಕಾಲ (ಕ್ರಿ. ಶ. ೧೨೦೭-೮) ಬಹುಮಟ್ಟಿಗೆ ಕಲಚುರಿ ವಂಶದ ಇತಿಹಾಸ ಕೊನೆಮುಟ್ಟಿದ ಕಾಲಕ್ಕೆ (ಕ್ರಿ. ಶ. ೧೧೮೩) ಹೊಂದಿ ಬರುತ್ತದೆ. ಇತಿಹಾಸತಜ್ಞರು ಈ ಶಾಸನವನ್ನು[೬] ಅಧ್ಯಯನ ಮಾಡಿ, ಈ ಶಾಸನೋಕ್ತ ವ್ಯಕ್ತಿಗಳು ಯಾರೆಂಬುದನ್ನು ತಿಳಿಸಿಕೊಟ್ಟರೆ ಉಪಕಾರವಾಗುವುದು. ಇದು ಹೇಗಿದ್ದರೂ ಈ ಶಾಸನದ ಉದಯಾದಿತ್ಯ ಅಲಂಕಾರಗ್ರಂಥದ ಕರ್ತೃ ಎಂದು ತೀರ್ಮಾನಿಸುವುದಕ್ಕೆ 'ಚೋಳ' ಎಂಬ ಪೂರ್ವನಾಮದ ಉಲ್ಲೇಖವಿಲ್ಲದಿರುವುದು ಬಾಧಕವಾಗಿದೆ; ಅಂತೆಯೇ ಅವನು 'ಸೋಮಾನ್ವಯ'ಕ್ಕೆ ಸೇರಿದವನೆಂಬ ಅಂಶವೂ ಅದ್ಧಿಯಾಗಿದೆ. ಅಲಂಕಾರಗ್ರಂಥದ ಉದಯಾದಿತ್ಯ 'ದಿನಕಾಂತ ಕುಲ'ಕ್ಕೆ ಸೇರಿದವನು.

---

೫. ಮೈಸೂರು ಸರ್ಕಾರದ ಪ್ರಕಟನೆ Karnataka Through the Ages (೧೯೬೮), ಪು. ೨೯೫ರಲ್ಲಿ ಕೊಟ್ಟಿರುವ ವಂಶವೃಕ್ಷವನ್ನು ನೋಡಿ.

೬. ಈ ಶಾಸನದ ( SSI IV No. 798 ) ಪೂರ್ಣ ಪಾಠದ ಯಥಾಪ್ರತಿಯನ್ನು ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ಕಚೇರಿಯ ಗ್ರಂಥಭಂಡಾರದ ಶಾಸನಸಂಪುಟದಿಂದ ಪ್ರತಿ ಮಾಡಿ ಒದಗಿಸಿದವರು ನನ್ನ ವಿದ್ಯಾರ್ಥಿಯಾಗಿದ್ದ, ಈಗ ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ಶಾಸನಗಳ ಅಧ್ಯಯನ ವಿಷಯದಲ್ಲಿ ಸಂಶೋಧನಾಧ್ಯಾಯಿಯಾಗಿರುವ, ಶ್ರೀ ಆರ್. ಶೇಷಶಾಸ್ತ್ರಿ, ಎಂ. ಎ. ಅವರು. ಶ್ರೀ ಸಂಗಮೇಶರು ಉದ್ಧರಿಸಿಕೊಟ್ಟಿರುವ ಶಾಸನ ಭಾಗಗಳಲ್ಲಿ ಅನೇಕ ತಪ್ಪುಗಳಿವೆ ಅವು ಅಚ್ಚಿನ ತಪ್ಪುಗಳಾಗಿರಬಹುದು, ಇಲ್ಲವೆ ಪ್ರತಿ ಮಾಡುವಾಗಿನ ಕೈತಪ್ಪುಗಳಾಗಿರಬಹುದು.

ಶಾಸನ ಪಾಠದಲ್ಲಿ ಚೌಕ ಕಂಸದಲ್ಲಿ ಸೂಚಿಸಿರುವ ತಿದ್ದುಪಾಟುಗಳು ಶಾಸನಸಂಪಾದಕರವು; ಸಾಧಾರಣ ಕಂಸದಲ್ಲಿರುವವು ನನ್ನವು. ಶ್ರೀ ಸಂಗಮೇಶರೂ ಈ ಹಲವು ತಿದ್ದುಪಾಟುಗಳನ್ನು ಸೂಚಿಸಿದ್ದಾರೆ.

## ಅನುಬಂಧ

ತಾಡಪತ್ರಿಯ ಶಾಸನ, ಕಾಲ : ಶಕವರ್ಷ ೧೧೩೦ ನೆಯ ಕಾಳಯುಕ್ತ ಸಂವತ್ಸರದ ಮಾಘ ಬ. ೧೫ (=ಕ್ರಿ. ಶ. ೧೨೦೮).

[ಶ್ರೀಮತ್ ಪರಮಗಂಭೀರ... ತಾಳಿಪಾಱಪುರಂ ಸೊಗಯ (ಸಿಕ್ಕುರ್ಗಂ)] (ಶಾಸನದ ಪ್ರಾರಂಭ ಭಾಗದ ಪಾಠವನ್ನು ಇಲ್ಲಿ ಕೊಟ್ಟಿಲ್ಲ. ಪ್ರಸಕ್ತವಾದ ಮುಂದಿನ ಭಾಗ ಕೆಳಗಿನಂತಿದೆ.)

ತತ್ಪುರಾಭ್ಯಂತರದೊ [ಳ್*] ತತ್ಪುರಪ್ರತಿಪಾಳಕರಪ್ಪ ಮಹಾರಾಜರನ್ವಯ ವದೆಂತೆಂದಡೆ

ಭುವನಪ್ರಖ್ಯಾತ ಸೋಮಾನ್ವರ(ಯ?)ಜನಿತ ಮಹಾರಾಜರುತ್ತುಂಗ ಕಂಠೀರವ ವೀತಾಧ್ಯಾಸಿತಕ್ಕ್ರೞ್ಬಲರಕ(ರ?)ಸುಗಳ್ಮುಂನೆ ಸಂದ(ದಿ)ರ್ದ್ದ ರಾಸಾ(ಶಾ)[।*] ವಿವರಾಂತದ[ೞ]ತ್ತ್ರಿ ಕೀರ್ತ್ತಿಧ್ವಜರವರೊಳುದಾತ್ತಪ್ರತಾಪ ಪ್ರಭಾವಪ್ರವಿಭೂತಾನ್ವಾವಲೇಪಂ ನೆಗೞ್ದನವನಿಯಂ ಪಾಳಿಸಲು[ಕ](ಅ)ತ್ತಿ ರಾಜಂ ಅತ್ಯ(ತ್ತ್ಯ)ರಸಂಗೆ ಪುಟ್ಟಿದ ತನೂಭವನಾ[ಹ][ವ*]ಮಲ್ಲದೇವನಾದಿತ್ಯ ಸಮಪ್ರತಾಪನಿಧಿ ತ[ತ್ಸತಿ]ಬಾಗಲದೇವಿ ತಾನದು[।*][ಧತ್ಯು]ದಯಾನೆ ತತ್ರ(ತ್ರಿ)ಯಸುತಂ ಕಲಿಗಂಗ ಮಹಾಭುಜಂ ಪರಾರ್ದ್ಧ್ಯ ವಿಘೇದಿ ತದ್ರಮಣಿತಾಂ ಮಹಾದೇವಿಯೆನಿಸಿ(ಯೆನಿಸಿ)ಪ್ಪಳೊಪ್ಪುವಳು.

ಅರಿಭೂಭ್ರು(ಭೃ)ತ್ಕುಂಭಿಕುಂಭಸ್ಥಳವಿಗಳತ್ರಕ್ತಾರ್ದ್ರಮುಕ್ತಾಫಳಾಳಿ ಸ್ಫುರಿತತ್ರೋ(ತ್ರೋ)ನ್ನೃಪ್ರಂಗವಲ್ಲೀ ವಿಳಸಿತ ರಣರಂಗಾಂಗಣೋದ್ವೃತ್ತಬಾಹಾ [।*] ಪರಿಘಾವಿಘೂರ್ಣಿತವೈರಿಕುರ್ವಣ ವಿವಿಧಭುಜಪ್ರೇಂಕೋಳಭೂತೋದ್ಧುರತಾ ವೀರಶ್ರೀಯಮಾನಾರ್ಜಿತನಿಜವಿಜಯಂ ಸೋವಿದೇವಕ್ಷಿತೀಶಂ.

ಒದವಿದ ರಾಜ್ಯಶ್ರೀಯಿಂ
ಮದಾತ್ತನೆನಿಸಿರ್ದ್ದ ಸೋವಿದೇವನ್ರಿ(ನೃ)ಪಂಗಂ
ಪದಪಿನ ಕಂಚಲದೇವಿಗ
ಮುದಯಿಸಿದಂ ಪ್ರಿಯಕುಮಾರನುದಯಾದಿತ್ಯಂ

ಮದವದ್ವೈರಿನ್ರಿ(ನೃ)ಪಾಳಸ್ವೈಸ್ಯತಿಮಿರಪ್ರಧ್ವಂಸನಂಗೆಯ್ದು ಪೇ(ಪೆ)ರ್ಚ್ಚಿದೆ(ದ)ರಾಗಂ ನಿಜಮಂಡಳಕ್ಕೆಸೆಯೆ ದಿಕ್ಚಕ್ರಾಕ್ರಾಂತಮಂ ತನ್ನ ತೇಜದ ಗುರ್ವ್ವಿಂ ಸಮುಱುತ್ತವಭು(ಭ್ಯು)ದಯಮಂ ಕೈಕೊಂಡ ಸಂಪೂರ್ಣವಿಂಬಮುದಯಾದಿತ್ಯಕುಮಾರನಪ್ರತಿಹತೋದಗ್ರಪ್ರತಾಪೋದಯಂ.

ಪ್ರತ್ಯರ್ಥಿನಿ(ನೃ)ಪತಿ ಬಳತಿಮಿ(ಮಿ)
ರಾತ್ರ್ಯುಯಮಂ [ಪಾ]ಕ್ಟ ತೇಜದಿಂ ಸೋಲಿಸಿ(ನೃ)ಪಾ
ಪತ್ತ್ಯನೆನಿಸಿದ ಕುಮಾರಂ
ಪ್ರತ್ಯಕ್ಷ(ಕ್ಷಂ) ತಾನೆ ನೋಳ್ಪುಡುದಯಾದಿತ್ಯಂ

ಸ್ಮರನಂ ರೂಪಿನೊಳಿಂದ್ರನಂ ವಿಭವದೊಳ್(ಳ್) ಕಾನೀನನಂ ದಾನದೊಳ್(ಳ್) ಹರಿಯುಂ ವಿಕ್ರಮಶಕ್ತಿಯೊಳ್(ಳ್) ಯಮಜನಂ ಸತ್ಯೋಕ್ತಿಯೊಳ್(ಳ್) ಶ್ರೀಪ್ರಭಾಸ್ಕರನಂ ತೇಜದೊಳಂಬುಜಪ್ರಭವನಂ ಚಾತುರ್ಯ್ಯದೊಳ್(ಳ್) ಹೇಮಭೂಧರನುಂ ಧೈರ್ಯದೊಳಿರ್ದ್ದು ಪೋಲ್ವನುದಯಾದಿತ್ಯೋರ್ವ್ವರಾವಲ್ಲಭಂ.

ಉದಯಾದಿತ್ಯ ಕುಮಾರಂ
ಕದನದೊಳಿದಿರಾದ ಮದವದಹಿತ ಮಹೀಭ್ರಿ(ಭೃ)
ತ್ಸುದತಿಯರ ವದನವನಜ
ಕ್ಕವಪೆಂ(ಳ=ಡ)ಲಂ ಮಾಡುವಂದವಿದು ಟ(ಟಿ)ಸಪಂದಂ

# ಅರ್ಥ ಕಳೆದುಳಿದದ್ದು

ಪ್ರೇಮಾ ತಾಶೀಲದಾರ

ಬಿದಿರ ತೂತಿನೊಳಹೊಕ್ಕು ನೀರು ಉಸಿರು
ಗಟ್ಟುವ ಸದ್ದುಗಳು ನನ್ನ ಕೈಕೊಸರಿ
ಜಾರಿದರ್ಥಕ್ಕೆ ತ್ರಾಣವಿಲ್ಲದೆ
ಉಲಿವ ಶಬ್ದಗಳು ಕುದಿ-ಕುದಿಸು
ಕುದಿಗೆ ಬೆಂದು ಪೆತ್ತಗಿನ ಕನಸು
ಗಳು ಜಗ್ಗಿದಂತೆಲ್ಲ ಹಿಗ್ಗುವ-ಕುಗ್ಗುವ
ಮನಸು ಹಸಿದಂತೆಲ್ಲ ತುಂಬುತ್ತ ಹೋಗುವ ನೀರು
ಇಂಗಿ ಒಳಗಿಂದೊಳಗೇ ಹರಡುವದು.
‘ನನ್ನಿಂದ ನಾನೇ ಜಾರುವ ಮಾತು ಬೇರೆ!’ ನಿನ್ನ
ನಲ್ಲಿಯೇ ಬಿಟ್ಟ ನಾ ಬಂದೆನಿಲ್ಲಿ ಜಾರುಗಣಿವೆಯ ಮಗ್ಗುಲಲಿ
ಸಿಲುಕಿ ನರಳುವ ದಾರಿ ಆಸೆ-ಆಮಿಷಗಳ
ಅಂಗೈಲಿಟ್ಟು ನಡೆದವ ನೀ-ನಿನ್ನ ದಾರಿ
ನಿನಗೆ ನನ್ನದೇ ಬೇರೆ !
ಮರಳು ರಾಶಿಯಡಿಯಲ್ಲೇ ಸ್ಪಂದಿಸುವ ಜೀವ,
ಗಾಳಿಯಿಲ್ಲದಾಗ-ಜಾಗ
ಬಿಟ್ಟು ಕದಲದ ಸೈಕತ;
ಬಿರುಗಾಳಿಯಲಿ ಆಗೊಮ್ಮೆ ಈಗೊಮ್ಮೆ ತೋರುವ
ದ್ವೈತಾದ್ವೈತ.
ತೋರಿಕೆಗೆ ಪಾತ್ರ ಅವರಡಿಯ
ಸ್ಪಂದಿಸುವ ಜೀವ, ಬಿಸಿಲು ಹೆಚ್ಚಾದಂತೆ
ಬೀಡ ಕಾ ಹೆಚ್ಚು ಚಡಪಡಿಕೆ, ಧಗೆ
ನೀರಿಲ್ಲದ ಬೇಗೆ.
ಯಾವ ಬಣ್ಣ ಕೊಟ್ಟರೆ ನಾನು ನೀರಾದೇನು? ನೀನು ನಾ
ನಾದೀಯೆ? ನಾನು ನೀನಾದೇನು? ... ...
ಏನಿಲ್ಲದ ಪ್ರಶ್ನೆಗೆ ಇದ್ದದ್ದೇ ಉತ್ತರ.

ಬಣ್ಣವಿಲ್ಲದೆ ಬರೆದು ನಾನು ನಿನ್ನ-
ನುತ್ತರಿಸಿದಂದು ನಾನು ನೀನಾದೇನು! ಅಥವಾ... ...
ನನಗಿಲ್ಲದ ಯಾವುದೋ ಚಿಂತೆ ನಿನಗೆ
ನಾ ನಗುತ ಸಾಗಿರುವೆ ನಿನ್ನೊಳವಿನೊಳಗೆ
ನೀರೊಳಗೆ, ನೀ ನಾನಾಗಿ ನಾ
ನೀರಾಗಿ.
ಏನನುತ್ತರಿಸಿದೆ ನಾನು, ಎಂಥ ಮಾತು! ಯಾವ
ಟಿಪ್ಪಣಿ ಬರೆದೆ? ನೀನಂದುದಕ್ಕೆಲ್ಲ
'ಹೂಂ' ಎಂದು ನನ್ನ ಮೈ-ಮಾಂಸ-ಮಜ್ಜೆ ಶಬ್ದಗಳಲಿ
ನೀನಳಿದು ಅರ್ಥವಿಲ್ಲದ ಕತೆ.
ಏನನುತ್ತರಿಸಿದೆ ನಾನು? ನಿನ್ನ ಕತೆಯೊರೆದೆನೇ?
ಮರಳು ಹಾಸಿನ ತುಂಬ ಕೆದಕಿ
ನೀರು ಬೆರಳಿಂದ ಬರೆವದ್ದು... ...ಶಬ್ದವಾಗಲಿಲ್ಲ.

## ‘ ಪಂಪ : ಒಂದು ಅಧ್ಯಯನ ’

( ಒಂದು ಸಮಾಲೋಚನೆ )

ಗೌರೀಶ ಕಾಯ್ಕಿಣಿ

( ಹಿಂದಿನ ಸಂಚಿಕೆಯಿಂದ ಮುಂದುವರಿದದ್ದು )

ವ್ಯಾಸಭಾರತದ ಹಿನ್ನೆಲೆಯಲ್ಲಿ ಪಂಪಭಾರತದ ವಸ್ತುವಿನ್ಯಾಸದ ಕುರಿತು **ಸುಜನಾ** ಪ್ರಬಂಧವು ಅತ್ಯಂತ ವೇಧಕವೂ, ಬೋಧಕವೂ ಆಗಿದೆ. ಆದರೆ ಇದರ ಮುಖ್ಯ ದೋಷವೆಂದರೆ ಅದರ ಗುಣಾತಿರೇಕವೇ—ಪ್ರಬಂಧಕಾರರಿಗೆ ವ್ಯಾಸನ ವ್ಯಾಮೋಹ—ಅದು ನ್ಯಾಯವಾಗಿಯೇ ಇದ್ದರೂ—ತುಸು ವಿಪರೀತ.
ಪಂಪನು ವ್ಯಾಸನ ಸಂದರ್ಭದಿಂದ ಸಂಕ್ಷೇಪಿಸಿದ ಅಂಶ ಮತ್ತು ರೀತಿಗಳ ಔಚಿತ್ಯವನ್ನು ಆಕ್ಷೇಪಿಸಿ ಅದರ ತೀರ್ಮಾನಕ್ಕೆ ಸುಜನಾ ಎತ್ತಿಕೊಟ್ಟ ಅವತರಣಿಕೆಗಳು ಸ್ವತಃ ಎಷ್ಟೇ ಸ್ವಾರಸ್ಯದವಾಗಿದ್ದರೂ ಸಂದರ್ಭ ಮೀರಿ ಸುದೀರ್ಘವಾಗಿವೆ. ಇಲ್ಲಿ ವ್ಯಾಸನ ಬಗೆಗೆ ಅಭಿಮಾನ ಆಸಕ್ತಿಗಳಷ್ಟೇ ಪಂಪನ ಕುರುಡು ಪಕ್ಷಪಾತಿಗಳ ಖಂಡನೆಯ ಒಂದು ಚಾಪಲ್ಯವೂ ಇದಕ್ಕೆ ಪ್ರಚೋದನೆಯಾಗಿರಬೇಕು. ಪಂಪನು ಸಮಸ್ತ ಭಾರತದಲ್ಲಿ ಮೂಲದ ವಸ್ತುವಿನ್ಯಾಸವನ್ನು ಸರಳಗೊಳಿಸುವಾಗ ವ್ಯಾಸಭಾರತದ ಹಲವು ಹಂತದ ಸೊಬಗನ್ನು ಹೇಗೆ ಕಳೆದುಹೋಗುವಂತೆ ಮಾಡಿದ್ದಾನೆಂಬುದು ಸುಜನಾ ನಿಃಸ್ಸಂದಿಗ್ಧವಾಗಿ, ಯಾವ ದುರ್ವಿದಗ್ಧತೆಯೂ ಇಲ್ಲದೆ ವ್ಯಕ್ತಪಡಿಸಿದ್ದಾರೆ.

ಇದಕ್ಕಾಗಿ ನಾವು ಪ್ರಬಂಧಕಾರರನ್ನು ಪ್ರಶಂಸಿಸಲೇಬೇಕು. ಕರ್ಣನ ಪ್ರಸಂಗ, ಬಕಾಸುರನ ವಧೆ ಮುಂತಾದ ಸಂದರ್ಭಗಳಲ್ಲಿ ಮೂಲದ ಭಾರತದ ತತ್ಸಮ ಕಥಾಭಾಗಗಳನ್ನು ಉದಾಹರಿಸಿ ಅವುಗಳಲ್ಲಿ ವ್ಯಾಸನು ಎಷ್ಟು ರಸವತ್ತಾಗಿ, ನಾಟ್ಯಮಯವಾಗಿ, ಮರ್ಮಸ್ಪರ್ಶಿಯಾಗಿ ಕಾವ್ಯಕೌಶಲವನ್ನು ಕಾಣಿಸಿದ್ದಾನೆಂಬುದನ್ನು ಬಹಳ ಪ್ರಭಾವಿಯಾಗಿ ಪ್ರಬಂಧಕಾರರು ಸ್ಪಷ್ಟಗೊಳಿಸಿದ್ದಾರೆ. ಮೂಲದ ಪಾತ್ರ-ಪ್ರಸಂಗಗಳ ಔನ್ನತ್ಯ ಔಚಿತ್ಯಗಳ ಸೂಕ್ಷ್ಮಸಂವೇದಕ ರೂಪ ಶಿಲ್ಪದ ಮುಂದೆ ಪಂಪನ ಪೆಂಪು ಮಂಕಾದರೆ ಆಶ್ಚರ್ಯವಲ್ಲ. ಇದರಿಂದ ಸುಜನಾರಿಗೆ ಪಂಪನ ಬಗೆಗೆ ಶ್ರದ್ಧೆ ಕಡಿಮೆಯೆಂದಲ್ಲ. ವ್ಯಾಸನ ಬಗೆಗೆ ಅದು ಉಚಿತವಾಗಿ ಹೆಚ್ಚಾಗಿದೆ ಎಂಬುದು ಮನದಟ್ಟಾಗುತ್ತದೆ. ಹಿಮಾಲಯ

ದಂಥ ಮಹಾಭಾರತದ ಉನ್ನತ ಭವ್ಯ ಕೃತಿಯನ್ನು ಪಂಪನು ದೂರದರ್ಶಿಯಾಗಿ ಗಮನಿಸಿದ್ದನ್ನು ಅವರು ಶ್ಲಾಘಿಸಿದ್ದಕ್ಕೆ ಕೊಟ್ಟ ಕಾರಣ ಮಾರ್ಮಿಕವಾಗಿದೆ. ಪಂಪನು ತನ್ನ ಹತ್ತಿರದ ಸಮಕಾಲೀನ ಸಂಸ್ಕೃತ ಕವಿಗಳಿಂದ ಸ್ಫೂರ್ತಿ ಪಡೆದಿದ್ದರೆ ಅವನ ಕಾವ್ಯವೂ—ಆ ಮೂಲಕ ನಿರ್ಮಿಸಿದ ಕನ್ನಡ ಕಾವ್ಯದ ವೇದಿಕೆಯೂ—ಅಶ್ರೀಮಂತವಾಗುತ್ತಿತ್ತು.

ಕವಿಗೆ ವಸ್ತುವಿನ ಆಯ್ಕೆ, ಶಿಲ್ಪಿಗೆ ಶಿಲೆಯ ಆಯ್ಕೆಯಷ್ಟೇ ಅದೃಷ್ಟ, ಪ್ರತಿಭೆ ಮತ್ತು ಪ್ರಯತ್ನಗಳ ಫಲ; ಆ ದೃಷ್ಟಿಯಿಂದ ಪಂಪ ಅದೃಷ್ಟವಂತ. ಏಕೆಂದರೆ ಮೂಲತಃ ಅವನ ಈ ಆಯ್ಕೆ ಅವನ ಪ್ರಯತ್ನದ ಫಲವಲ್ಲ. ಆದಿಪುರಾಣವನ್ನು ಮೆಚ್ಚಿ ಅವನ ದೊರೆ ಅರಿಕೇಸರಿ ಅವನನ್ನು ಕರೆಯಿಸಿ ಸನ್ಮಾನಿಸಿ ಈ ಕಾವ್ಯವನ್ನು ರಚಿಸುವಂತೆ ಸೂಚಿಸಿದನು. ಇತರ ಆಸ್ಥಾನಪಂಡಿತರೂ ಇದನ್ನು ಅವನೇ ಹೇಳಬಲ್ಲನೆಂದು ಹುರಿದುಂಬಿಸಿದರಂತೆ.

ವ್ಯಾಸನಿಗಿಂತ ಪಂಪನೇ ಮಿಗಿಲು ಎಂಬ ಯಾವುದೋ ವಿಕೃತವಾದ ವಾದವನ್ನು ಪ್ರತಿಭಟಿಸುವ ಅನೇಕ ವಾಕ್ಯಗಳಿಂದ ಹೊರಬಂದಿದೆ ಈ ಪ್ರಬಂಧದ ರೂಪ. "ಆದಿಪುರಾಣ"ದ ಕವಿ "ಪೂರ್ವಪುರಾಣ"ದ ಕವಿಗಿಂತ ಹೆಚ್ಚು ತರಬೇತಾದ ಕವಿ. ಆದರೆ ಆ ಕವಿಗಿಂತ ಈತನು ಹೆಚ್ಚು ಧರ್ಮಾನುಭವವುಳ್ಳವನು ಎನ್ನುವದು ಧಾರ್ಷ್ಟ್ಯವಾದೀತು—ಅಂದಿದ್ದಾರೆ ಸುಜನಾ. ಈ ಮಾತಿಗೆ ಡಾ. ವರದರಾಜರು ಏನೆನ್ನುವರೊ!

ಇಲ್ಲಿ ಬಿಟ್ಟಾರೆ ಪಂಪಭಾರತದ ವಸ್ತುವಿನ್ಯಾಸದ ವಿಚಿಕಿತ್ಸೆ ಒಂದು ನಿಮಿತ್ತ. "ಪಂಪ ಭಾರತದ ಕವಿಗಿಂತ ಏನೂ ಕಡಿಮೆ ಇಲ್ಲ. ವ್ಯಾಸನ ಕಾವ್ಯ ಎಷ್ಟಿದ್ದರೂ ಇತಿಹಾಸ ಮಾತ್ರವೆಂದು ಭಾವಿಸಿ ಭಾರತೀಯ ಕಾವ್ಯಮೀಮಾಂಸೆ(ತೀ.ನಂ.ಶ್ರೀ?) ದಾರಿ ತಪ್ಪಿದೆ". ಅಂಥ ಮೀಮಾಂಸಕರಿಗಾಗಿ ಸುಜನಾ ಇಲ್ಲಿ ವ್ಯಾಸನನ್ನು Rediscover ಮಾಡುತ್ತಿದ್ದಾರೆ. ಅದನ್ನು ಸಮರ್ಥವಾಗಿಯೇ ಮಾಡಿದ್ದಾರೆ.

ಯುದ್ಧೋತ್ತರ ಭಾರತ ಕಥಾಸಾರವನ್ನೂ ನರಕ–ಸ್ವರ್ಗ ಯಾತ್ರೆಯನ್ನೂ ವಿಸ್ತಾರವಾಗಿ ಮೂಲದಿಂದ ಸುಜನಾ ಉದ್ಧರಿಸಿದ್ದಾರೆ. ಅದಕ್ಕೆ ಅವರ ಉದ್ದೇಶ, ಇದೆಲ್ಲ ಪ್ರತಿಮೆಗಳಾಗಿ ಬೆಳೆಯಬಲ್ಲ ಜೀವಸತ್ವಪೂರ್ಣ ಘಟನಾವಳಿ. ಇದನ್ನು ತನ್ನ "ಸಮಸ್ತ ಭಾರತ"ದಲ್ಲಿ ಬಿಟ್ಟುಕೊಟ್ಟ ಪಂಪ ಖಂಡದರ್ಶನ, ಪರಿಮಿತದರ್ಶನನಾಗಿದ್ದಾನೆ ಎಂದು ತೋರಿಸುವದು. ಆದರೆ ಇದರಲ್ಲಿ ಇಷ್ಟೊಂದು ಪ್ರದೀರ್ಘವಾದ ಅವತರಣಿಕೆಗಳಿಂದ ಪ್ರಬಂಧದ ಪ್ರಮಾಣಬಂಧವನ್ನು ಕೆಡಿಸಬೇಕಾಗಿದ್ದಿಲ್ಲ. ಆದಾಗ್ಯೂ ಪಂಪನು ಬಿಟ್ಟ ಭಾಗ ನೀರಸ, ಆಯ್ದುಕೊಂಡಿದ್ದು ರಸವತ್ತಾದುದು—ಎಂದು ತಿಳಿಯಬೇಕಾಗಿಲ್ಲವೆಂಬುದನ್ನು ಪ್ರಬಂಧ

ಕಾರರು ಪ್ರಭಾವಿಯಾಗಿ ಪ್ರತಿಪಾದಿಸಿದ್ದಾರೆ. ಪಂಪನು ಮೂಲದಲ್ಲಿ ರಸವತ್ತಾದ ಭಾಗವನ್ನು ನೀರಸವಾಗಿ ಸಂಕ್ಷೇಪಿಸಿದ್ದನ್ನು ಕಾಣಿಸಿದ್ದಾರೆ.

ಆಸ್ಥಾನ ಕವಿ ಪ್ರಭುವಿನ ಸ್ನೇಹಋಣಗಳ ಕತ್ತಿ ಕಠಾರಿಗಳನ್ನು ಹಿಡಿದೇ ಭಾರತೋತ್ತರಣಕ್ಕೆ ಹೊರಟಾಗ, ಈ ಸ್ನೇಹವು ಮಹಾವೇದವಂತೆಯೇ ಸೂಕ್ಷ್ಮ ಹಂಗಿನಿಂದಾಗಿ ವಿಪರೀತ ಪರಿಣಾಮ ಕೊಡುವದೆಂಬುದನ್ನು 'ಸುಜನಾ' ವಿಮರ್ಶಾ ಪ್ರಪಂಚದ ಯಾವ ಸುಜನರೂ ಒಪ್ಪುವಂತೆ ಬಿಂಬಿಸಿದ್ದಾರೆ. ದತ್ತಿಯಿಂದ ಗಿರಣಿಯು ಬೀಡುವಂತೆ ಈ ಸೂಕ್ಷ್ಮ ಎಳೆ ಕೊನೆಗೆ ಕವಿಯ ವ್ಯಕ್ತಿತ್ವದ ಮೂಟೆಯನ್ನೆಲ್ಲ ನೂತು ಹಾಳಿಮಾಡುವುದನ್ನು ಸೋದಾಹರಣ ಸಿದ್ಧಮಾಡಿ ತೋರಿಸಿದ್ದಾರೆ.

ಅಂದರೆ ಅರಿಕೇಸರಿಯ ಸ್ನೇಹ-ಋಣದಿಂದ ಈ ಕಾವ್ಯಕ್ಕೆ ಆದ ಸೂಕ್ಷ್ಮ ನಷ್ಟವನ್ನು ಸುಜನಾ ಪೂರ್ತಿ ಗುರುತಿಸಿದ್ದಾರೆ. ಈ ಸ್ನೇಹ ಸೂತ್ರದಿಂದ ಕಾವ್ಯದ ವಸ್ತುವಿನ್ಯಾಸವೇ ನಿಯಂತ್ರಿತವಾಯಿತು. ಇದರಿಂದ ಅರ್ಜುನನ ಬಗೆಗೆ ವ್ಯಾಸರಿಗಿದ್ದಂತೆ ಪಂಪನಿಗೆ ವಿಶೇಷ ಪಕ್ಷಪಾತವಿಲ್ಲದಿದ್ದರೂ, ಅವನ ಪಕ್ಷಪಾತ ಕರ್ಣನ ಬಗೆಗೆ ವಿಶೇಷವಾಗಿದ್ದರೂ ಅರ್ಜುನನನ್ನು ಬೌದ್ಧಿಕವಾಗಿ ಮೇಲೆತ್ತಿ ಕರ್ಣನನ್ನು ಅಂತಃಕರಣದಿಂದ ಅದಮ್ಯವಾಗಿ ಪ್ರೀತಿಸುವ ಒಡೆಯಲಾರದ ಬಗಟು ಈ ಒಡೆಯನ ಒಗೆತನದಿಂದಾಗಿ ಉಂಟಾಯಿತು! ಇದನ್ನು ಪ್ರಬಂಧಕಾರರು ನಿಚ್ಚಳವಾಗಿ ನಿರೂಪಿಸಿದ್ದಾರೆ. ವ್ಯಾಸನ ಅರ್ಜುನನಷ್ಟು ಸೂಕ್ಷ್ಮ ಸಂವೇದಿಯು ಮಾನುಷ-ಅತಿಮಾನುಷಗಳ ಸಂಗಮವಾಗಿ ಚಿತ್ರವೀಥಿಯೂ ಆಗಿಲ್ಲ. "ರಾಜಕಾರಣಕ್ಕಾಗಿ ಭಾರತವನ್ನು ತಿದ್ದಹೋಗಿ ಬಿದ್ದಿದ್ದಾನೆ ಪಂಪ" ಅಂದಿದ್ದಾರೆ ಸುಜನಾ. ಇದರ ಸಮರ್ಥನೆಗಾಗಿ ಒಂದೊಂದು ಪ್ರಸಂಗವನ್ನು ವಿಸ್ತಾರವಾಗಿ ವ್ಯಾಸಭಾರತದಿಂದ ಪಂಪನಿಗೆ ತುಲನೆಯಾಗಿ ಉದಾಹರಿಸಿದ್ದಾರೆ (ಅವನ್ನು ಪ್ರಬಂಧದಲ್ಲಿಯೇ ಓದಬೇಕು).

ಆದರೆ ಕಿರಾತಾರ್ಜುನೀಯದ ಪ್ರಸಂಗದಲ್ಲಿ ಅರ್ಜುನನು ಶಿವನ ಗಂಟಲನ್ನು ಮೆಟ್ಟಿ ನಿಂತನೆಂದು ಪಂಪನು ಬಣ್ಣಿಸಿ ಔಚಿತ್ಯವನ್ನು ಪಾತಾಳಕ್ಕೆ ಮೆಟ್ಟಿದ್ದಾನೆಂದು 'ಸುಜನಾ' ಆರೋಪಿಸಿದ್ದೂ ಅಷ್ಟೇ ಅನುಚಿತವೆನಿಸುತ್ತದೆ. ಏಕೆಂದರೆ ಬರಿ ಅರ್ಜುನನನ್ನು ಬೆಳ್ಳಂಬೆಳಕಿನಲ್ಲಿ ಇಡಲು ಪಂಪ ಹೀಗೆ ಮಾಡಿದನೆಂದು ಹೇಳಲು ಬರುವಂತಿಲ್ಲ. ಶಿವನೇ ಕಿರಾತನಾಗಿ ಬಂದವನೆಂದು ಅರ್ಜುನನಿಗೆ ಗೊತ್ತಿಲ್ಲ. ಕೇವಲ ಕಾಡುಬೇಡನೆಂದ ಅವನನ್ನು ವಿಜಯೋನ್ಮಾದದಲ್ಲಿ ಹಾಗೆ ಮೆಟ್ಟಿ ನಿಂತಿರಬಹುದು. ಈ ಮಟ್ಟಿಗೆ ಪಂಪ ವ್ಯಾಸನಿಗಿಂತಲೂ ಭಾರವಿಯಿಂದ ಹೆಚ್ಚು ಪ್ರಭಾವಿತನಷ್ಟೇ!

ಒಟ್ಟಾರೆ ಅರಿಕೇಸರಿಯ ಉದಾತ್ತೀಕರಣದಲ್ಲಿ ಅರ್ಜುನನ ಸರಳೀಕರಣವಾದುದನ್ನು 'ಸುಜನಾ' ಚೆನ್ನಾಗಿ ಅಸಂದಿಗ್ಧವಾಗಿ ವಿಶದಪಡಿಸಿದ್ದಾರೆ.

"ಛಲದೊಳ್ ದುರ್ಯೋಧನಂ" ಇತ್ಯಾದಿಯಾಗಿ ಒಂದೊಂದು ಪ್ರಧಾನ ಗುಣಕ್ಕಾತ Type ಮಾಡಲು ಹೋಗಿ ಪಂಪನು ಭೀಷ್ಮ, ಕರ್ಣ, ದುರ್ಯೋಧನಾದಿ ಇತರ ಪ್ರಧಾನ ಪಾತ್ರಗಳನ್ನು ಸರಳೀಕರಿಸಿ ಅವರ ಆಕರ್ಷಕ ಸಂಕೀರ್ಣತೆಯ ಪ್ರಬಲ ಸಂಚಾರಿ ಭಾವಗಳ ವರ್ಣ ವೈಚಿತ್ರ್ಯವೂ ಕಳೆದುಹೋಗುವಂತೆ ಮಾಡಿ ಆಯಾ ಪಾತ್ರ ವೈಚಿತ್ರ್ಯವನ್ನು ಒಂದು ವಿಧದ ಶಿಷ್ಟತೆಯ ಏಕರೂಪತೆಗೆ ಇಳಿಸಿದಂತಾಗಿದೆ ಎನ್ನುತ್ತಾರೆ ಪ್ರಬಂಧಕಾರರು. ಇದನ್ನು ಸಹಸಾ ಅಲ್ಲಗಳೆಯುವಂತಿಲ್ಲ.

"ಪಂಪನ ಎಲ್ಲ ಪಾತ್ರಗಳು ತತ್ತತ್‌ಗುಣ ಸ್ವಭಾವ ನಿರ್ದೇಶಿತರೂ ಹೆಚ್ಚು ಮುಷ್ಟಿಗ್ರಾಹ್ಯ ಆದರ್ಶರೂ ಆದರೂ ಬಹುವರ್ಣದೀಪ್ತರಲ್ಲ"—ಇದನ್ನು ಸುಜನಾ ಬಹಳ ಸೂಕ್ಷ್ಮಸಂವೇದನೆಯಿಂದ ವ್ಯಾಸ ಭಾರತದ ತಾದೃಶ ಸಾದೃಶ್ಯಗಳನ್ನೆತ್ತಿ ಕೊಟ್ಟು ಮಾರ್ಮಿಕವಾಗಿ ಬಿಂಬಿಸಿದ್ದಾರೆ. ಪಂಪ ಭಾರತದ ಪುನರ್ಮೂಲ್ಯಮಾಪನದ ಕಾರ್ಯದಲ್ಲಿ ಇದು ಬಲು ದೊಡ್ಡ ಅಂಶ. ಆದರೂ ಪಂಪನ ವಿದ್ಯಾರ್ಥಿಗಳಿಗೆ ವ್ಯಾಸ ಭಾರತದ ಘನತೆಯನ್ನು ಮನದಟ್ಟಾಗಿಸಲೇ ಈ ಪ್ರಬಂಧ ಹೊರಟಂತಿದೆ.

ಅವರ ಇನ್ನೊಂದು ಆರೋಪವೆಂದರೆ, ಪಂಪನು ವ್ಯಾಸನಂತೆ ಮುಖ್ಯ ಕಥೆಗೆ ಹೊಂದಿಕೊಂಡು ಸಾಮಾನ್ಯ ಸಾಂಸಾರಿಕ ಚಿತ್ರಗಳನ್ನು ಹೃದಯಂಗಮವಾಗಿ ಹೆಣೆಯಲಾರ. ಚಿರಸತ್ಯ ಭಾವನೆಗಳನ್ನು ನೇಯಲಾರ. ಇದಕ್ಕೆಲ್ಲ ಕಾರಣ ಅವನ ಸಂಗ್ರಹದ ಆತುರ ಎಂಬುದನ್ನು ಸುಜನಾ ಪ್ರಾಮಾಣಿಕವಾಗಿ ಪ್ರಮಾಣ ಸಹಿತವಾಗಿ—ಆದರೆ ತುಸು ಪ್ರಮಾಣ ತಪ್ಪಿ—ಸಿದ್ಧಪಡಿಸುತ್ತಾ ಸಾಗಿದ್ದಾರೆ! ಸಂಗ್ರಹದ ಆತುರಕ್ಕೆ ಅರಿಕೇಸರಿಯ ಸ್ನೇಹ ಪಕ್ಷಪಾತವೂ ಸೇರಿ ಕರ್ಣನ ರಂಗಪ್ರವೇಶದಂಥ ಸನ್ನಿವೇಶಗಳ ನಿರೂಪಣೆಗೆ ಹೇಗೆ ಭಂಗ ಬಂದಿದೆ ಎಂಬುದನ್ನು ಪ್ರಬಂಧಕಾರರು ಮೂಲದ ಕರುಣ ಗಂಭೀರ ಪ್ರಸಂಗವನ್ನು ಉದಾಹರಿಸಿ ವಿವೇಚಿಸಿದ್ದಾರೆ. ಇದೇ ಬಗೆಯ ತೌಲನಿಕ ವಿವೇಚನೆ, ಏಕಚಕ್ರದಲ್ಲಿಯ ಬ್ರಾಹ್ಮಣನ ಮನೆಯಲ್ಲಿಯ ದುಃಖ ಪ್ರಸಂಗ, ಉತ್ತರೆಯ ವಿವಾಹ ಸಂದರ್ಭಗಳ ಉದಾಹರಣೆಗಳಲ್ಲಿಯೂ ಸಮರ್ಪಕವಾಗಿ ಬಂದಿದೆ. ಈ ಕೊನೆಯ ಸನ್ನಿವೇಶದಲ್ಲಿ ಭಾಸನಿಗಿಂತ ವ್ಯಾಸನೇ ಮೇಲೆಂಬುದರ ಜತೆಗೆ ಭಾಸನ ಇದಿರು ಪಂಪನು ಒಂದು ಅಭಾಸನೆಂಬಂತೆ ಅವರು ತೋರಿಸಿದ್ದಾರೆ.

ಇಷ್ಟೆಲ್ಲ ಚರ್ಚೆಯ ಉದ್ದೇಶವೇನು? ಎಷ್ಟೇ ದೊಡ್ಡ ಪ್ರತಿಭಾವಂತ ಕವಿಯಾಗಿದ್ದರೂ, ಒಂದು ಉಪಾಧಿಗೆ ಕಟ್ಟುಬಿದ್ದರೆ ಅವನ ಕಾವ್ಯಕ್ಕೆ ಏನೆಲ್ಲ ಪ್ರಮಾದಗಳು ಒದಗುತ್ತವೆಂಬುದನ್ನು ಮನದಟ್ಟು ಮಾಡುವದು. ಹೀಗೆ

ನಷ್ಟಕ್ಕೆ ಪಂಪನ ಸಾಮರ್ಥ್ಯವೋ ಈ ಉಪಾಧಿಗಳೋ ಯಾವುದು ಕಾರಣವೆಂಬುದನ್ನು "ತಣ್ಣನೆ ಯೋಚಿಸಲು" ಪ್ರಬಂಧಕಾರರು ಓದುಗರಿಗೆ ಬಿಟ್ಟಿದ್ದಾರೆ.

ಒಟ್ಟಾರೆ ಯಾವ ಜಿಜ್ಞಾಸುವನ್ನೂ ಅಭ್ಯಾಸುವಾಗಿಯೂ, ಅಭ್ಯಾಸುವನ್ನು ಆಲೋಚನಾಪರನನ್ನಾಗಿಯೂ ಮಾಡುವ ಪ್ರಬಂಧವಿದು. ಪ್ರಶಸ್ತಿ-ಪ್ರಶಂಸೆಗಳ ಸ್ತುತಿ-ಸ್ತೋತ್ರಗಳ ಪರಿಧಿಯನ್ನು ದಾಟಿ ಆಮೂಲಾಗ್ರ ಸಮೀಕ್ಷೆಗೆ ನಮ್ಮ ಜನಪ್ರಿಯ ಮಹಾಕವಿಗಳನ್ನು ಗುರಿಮಾಡಬೇಕಾಗಿ ಬಂದ ಇಂದಿನ ವಿಚಿಕಿತ್ಸೆಯ ಯುಗದಲ್ಲಿ ಇಂಥ ಪ್ರಬಂಧವು ನಿಜವಾಗಿಯೂ ಪಂಪನ ಮೌಲ್ಯಮಾಪನೆ ಮತ್ತೊಮ್ಮೆ ಮಾಡುವ ನಿಟ್ಟಿನಲ್ಲಿ ಒಂದು ಮಹತ್ವದ ಹೆಜ್ಜೆ.

ಸುಜನಾ ಭಾರತದ ಕುರಿತು ಮಾಡಿದ ಕಾರ್ಯವನ್ನೇ **ಶ್ರೀ ಎಂ. ವಿ. ಶ್ರೀನಿವಾಸಮೂರ್ತಿ** ಆದಿಪುರಾಣದ ಕುರಿತು ಮಾಡಿದ್ದಾರೆ. ವಸ್ತುವಿನ್ಯಾಸದ ದೃಷ್ಟಿಯಿಂದ "ಆದಿಪುರಾಣ" ವನ್ನು ಅದರ ಮೂಲವಾದ "ಪೂರ್ವ (ಮಹಾ?) ಪುರಾಣ" ದೊಂದಿಗೆ ತೂಗಿ ನೋಡುವ ಪ್ರಯತ್ನವಿದು. ಪುರಾಣ ರಚನೆಯಲ್ಲಿ ಜಿನಸೇನನ ಮನೋಧರ್ಮ ಆದಿಪುರಾಣದ ಪಂಪನ ಮನೋಧರ್ಮದಿಂದ ಭಿನ್ನವಾಗಿದೆ. ಈ ವ್ಯತ್ಯಾಸವನ್ನು ಲೇಖಕರು ಒಪ್ಪಿಕೊಂಡಿದ್ದಾರೆ. ಜಿನಸೇನ ಅನನ್ಯ "ಜಿನನಿಷ್ಠ". ಅವನದು ಸಾಂಪ್ರದಾಯಿಕ ರೀತಿಯ ಪುರಾಣ. ಧರ್ಮ ಪ್ರತಿಪಾದನೆಯೇ ಅವರ ಉದ್ದೇಶ. ಪಂಪನಲ್ಲಿ ಈ ಧಾರ್ಮಿಕ ಅಭಿನಿವೇಶ ಅಷ್ಟೊಂದಿಲ್ಲ. ಆತ ಧರ್ಮಾಂತರ ಹೊಂದಿಯೂ ಧರ್ಮಾಂಧತೆ ಕವಿಯದ ಕವಿ. ಎರಡೂ ಸಂಸ್ಕೃತಿಗಳ ಸಾರ ಹೀರಿಕೊಂಡ ಸಹೃದಯ. ಪೂರ್ವ ಪುರಾಣದಲ್ಲಿ ಶೃಂಗಾರವೂ ವೈರಾಗ್ಯಕ್ಕೆ ಸಾಧಕ. ಆದರೆ ಆದಿ ಪುರಾಣದಲ್ಲಿ? ವೈರಾಗ್ಯವು ಶೃಂಗಾರದ ಫಲವೋ ತೀವ್ರ ಪ್ರತಿಕ್ರಿಯೆಯೋ? ಅದು ಭುಕ್ತಭೋಗಿಯ ಉಪರತಿಯೋ, ಜುಗುಪ್ಸೆ ಜಿಹಾಸೆಗಳ ನಿವೃತ್ತಿಯೋ? ಜಿನಧರ್ಮಕ್ಕೆ ಯಾವುದು ಪೋಷಕ? ಲೇಖಕರ ಅಂಬೋಣದಂತೆ ಪೂರ್ವಪುರಾಣದಲ್ಲಿ "ಕಾಂತಾಸಮ್ಮಿತಿಯೊಂದಿಗೆ ಪ್ರಭುಸಮ್ಮಿತಿಯೂ ಇದೆ." ಆದರೆ ನಿಜವಾಗಿಯೂ ಪುರಾಣವೆಂಬುದೇ ಪ್ರಭುಸಮ್ಮಿತಿ—ಕೇವಲ ಕಾವ್ಯದ ಇದುರಿಗೆ. ಪಂಪನಲ್ಲಿಯೇ ಪ್ರಭು ಸಮ್ಮಿತಿ ಕಾಂತಾ ಸಮ್ಮಿತಿಯೊಂದಿಗೆ ಪಾಕಗೊಂಡಿದೆ. ಆತ ಧರ್ಮದೊಂದಿಗೆ ಕಾವ್ಯ ಧರ್ಮವನ್ನೂ ಒರೆದಿದ್ದಾನೆ.

ಆದರೆ ಆ ಮಾತ್ರಕ್ಕೆ ಪಂಪನ ಆದಿಪುರಾಣ ಎಲ್ಲ ಕಾಲದ ಎಲ್ಲ ಧರ್ಮದ ಜನರಿಗೆ ಆಕರ್ಷಕವೇ? ಹಾಗೆ ಆಕರ್ಷಿಸುವ ಅದರ ಅಂಶ ಧರ್ಮವೋ ಕಾವ್ಯ ಧರ್ಮವೋ? ಜೈನೇತರ ಧರ್ಮದವರಿಗೆ ಅದು ಕಾವ್ಯವೆಂದು ಆಕರ್ಷಕವಾದರೆ

ಅದು ಅವರನ್ನು ಜಿನಧರ್ಮಕ್ಕೆ ಒಲಿಸಲು ಸಮರ್ಥವಲ್ಲ. ಆ ದೃಷ್ಟಿಯಿಂದ ಅದು ಶುದ್ಧ ಧಾರ್ಮಿಕ ಪುರಾಣವಲ್ಲ. ಅದರಲ್ಲಿಯು 'ಲೌಕಿಕ' ಅಂಶವು ಅಲ್ಲಿಯ 'ಜಿನಾಗಮ'ವನ್ನು ಕಲಬೆರಕೆ ಮಾಡಿದಂತೆ.

ಇನ್ನು ತಾನು 'ಕಾವ್ಯಧರ್ಮ'ವನ್ನು ಹೇಳುವೆನೆಂದನು ಪಂಪ. ಆದರೆ ಇಲ್ಲಿ 'ಕಾವ್ಯಧರ್ಮ'ವೆಂದರೆ ಏನು? ಕಾವ್ಯದ ಧರ್ಮ—ಕಾವ್ಯದ ರೀತಿ ಲಕ್ಷಣಗಳ ನಿರ್ವಚನವೇ? ಅಥವಾ ಕಾವ್ಯದಲ್ಲಿ ಪ್ರಕಟವಾಗುವ ವಿಶ್ವಮಾನವ ಧರ್ಮವೇ?

ವಾಲ್ಮೀಕಿಗೆ 'ಆದಿಕವಿ' ಎನ್ನುವದೇಕೆ? ಆತನ ರಾಮಾಯಣವು ಸಾಕೂತವಾಗಿ ಮಹಾಕಾವ್ಯವಾಗಿ ರಚಿತವಾದ ಪ್ರಥಮ ಕೃತಿ. ಅದು ಸಂಸ್ಕೃತಕ್ಕೆ ರೀತಿ ಲಕ್ಷಣ ಸಮನ್ವಿತವಾದ ಆದಿಕಾವ್ಯ. ಹಾಗೆಯೇ 'ಆದಿಪುರಾಣ'ದಿಂದ ಪಂಪ ಕನ್ನಡದಲ್ಲಿ ಒಂದು ಮಾದರಿಯ ಕಾವ್ಯಕೃತಿಯನ್ನು ರಚಿಸಹೊರಟು ಆ ಅರ್ಥದಲ್ಲಿ ಧರ್ಮದೊಂದಿಗೆ ಕಾವ್ಯಧರ್ಮವನ್ನು ರೂಪಿಸಿದನೇ? ಇಂಥ ಕಾವ್ಯದಲ್ಲಿ ಉದ್ದಕ್ಕೂ ನಮ್ಮಲ್ಲಿ ಜೀವಂತವಾಗಿ ಅಚ್ಚೊತ್ತಿ ನಿಲ್ಲುವದು ಅಲ್ಲಿಯ ಪಾತ್ರ-ಪ್ರಸಂಗಗಳ ಸಂಸ್ಕಾರಕ್ಕಿಂತ ಆ ಕವಿಯ ಪ್ರತಿಭಾವಿಲಾಸ, ಕಲಾಪ್ರೌಢಿಮೆಯ ಸಂಸ್ಮರಣೆ.

ಜೈನಧರ್ಮವೇ ಮಾನವನ ನೈಜಧರ್ಮವಲ್ಲ. ಮಾನವಜಾತಿಯ ಬಗೆಗೆ ಪಂಪ ಅಲ್ಲಲ್ಲಿ ಆಡಿದ ಮಾತು ಸಾಂದರ್ಭಿಕ. ಅದುವೆ ಈ 'ಜಿನಾಗಮ'ದ ಸಂದೇಶವಾಗಲಾರದು. ಆದರೆ ಕಾವ್ಯದ ವಸ್ತುವಿನ್ಯಾಸದ ಮೂಲ ಕಾರಣದ ವಿಚಿಕಿತ್ಸೆಗೆ ಈ ಉದ್ದೇಶಾಭ್ಯಾಸದ ಪ್ರಯೋಜನವೇನು?

ಆದಿಪುರಾಣದ ಆದಿಯಲ್ಲಿ ಪಂಪನು ಆತ್ಮಕಥೆಯ ಕೆಲವು ಅಂಶಗಳನ್ನು ಹೇಳಿಕೊಳ್ಳುವದರಿಂದ ಆತನು "ಬದುಕಿನ ಮೌಲ್ಯಗಳ ಅರ್ಥವನ್ನು ವಾಸ್ತವಿಕ ದೃಷ್ಟಿಯಿಂದ ನೋಡಬಲ್ಲವ"ನೆಂದೂ, ಪಲಾಯನವಾದಿಯಲ್ಲವೆಂದೂ, ಸ್ವಯಂಬುದ್ಧೋಪದೇಶದ ಸಂದರ್ಭದಲ್ಲಿ ಬರುವ "ಮಣ್ಣಿನ ಹಾಡು" ವಾಸ್ತವಿಕತೆಯ ಅರಿವಿನ ಕುರುಹೆಂದೂ, ಅದರಲ್ಲಿಯ ಚಾರ್ವಾಕವಾದದ ಮಾತುಗಳಲ್ಲಿ "ಅಸ್ತಿತ್ವವಾದ" (Existentialism)ದ ಸುಳುಹು ಹೊಳಹುಗಳನ್ನು ಪ್ರಬಂಧಕಾರರು ಕಾಣುವದು ಲಾಭದಾಯಕ ಪುನರಾಲೋಚನೆಯಾದೀತೇ?

ಜಿನಾಗಮದ ಅಂಗವಾದ ಪಂಚಕಲ್ಯಾಣ ವಿಧಿ-ವಿಧಾನ ನಿರೂಪಣೆಗಳಲ್ಲಿ ಕವಿಗೆ ಕೈಕಟ್ಟಿದಂತೆ. ಆದರೆ ಭವಾವಳಿಗಳ ಚಿತ್ರಣದಲ್ಲಿ ಪಂಪನ ಪ್ರತಿಭೆ ಗರಿಗೆದರಿದೆ ಎಂದು ಪ್ರಬಂಧಕಾರರ ಮತ. ಇಲ್ಲಿಯೇ ಜಿನಸೇನರಿಂದ ಪಂಪ ಬೇರೆಯಾಗಿ ತನ್ನ ಸ್ವಂತಿಕೆ ತೋರಿಸಿದ್ದು. ಪೂರ್ವಪುರಾಣದಲ್ಲಿ ಆದಿನಾಥನ ದತ್ತು

ಹಿಂದಣ ಜನ್ಮಗಳು ಪರಸ್ಪರ ಸಂಬಂಧವಿಲ್ಲದಂತೆ. ಆದರೆ ಪಂಪ ಅವುಗಳಲ್ಲಿ ಒಂದು ಕ್ರಮವಿಪಾಕದ ಸು-ಸೂತ್ರತೆಯನ್ನು ತಂದಂತಿದೆ. ಶ್ರೀನಿವಾಸಮೂರ್ತಿಗಳ ಅಭಿಪ್ರಾಯದಂತೆ ಮೊದಲಿನ ಜನ್ಮದಲ್ಲಿ ಭೋಗಕ್ಕೆ ಪ್ರಾಧಾನ್ಯ. ಮುಂದಿನ ಜನ್ಮದಲ್ಲಿ ಭೋಗ ಅಷ್ಟು ಕ್ಷೀಣವಾಗುತ್ತ ಅದು ಸಾಕ್ಷಾತ್ಕಾರಕ್ಕೆ ಸಾಧನವಾಗುವ ತ್ಯಾಗದಲ್ಲಿ ಪರ್ಯವಸಾನ ಹೊಂದುತ್ತದೆ. ಆದಿಪುರಾಣದ ಈ ಕಲಾತ್ಮಕ ಅನುಬಂಧದ ಕಲ್ಪನೆ ಪ್ರಬಂಧಕಾರರು ಡಾ. ಡಿ. ಎಲ್. ಎನ್. ರಿಂದ ಎರವಲು ಪಡೆದಂತಿದೆ. (ಈ ಗ್ರಂಥವಲ್ಲಿಯ ಅನೇಕ ಪ್ರಬಂಧಗಳು ಸ್ವೋಪಜ್ಞತೆಗಿಂತ ಹೆಚ್ಚು ಅಂಥ "ಪೂರ್ವ ಸೂರಿ"ಗಳ ಋಣವನ್ನೆ ಮತ್ತೆ ಮತ್ತೆ ಹೊತ್ತಂತೆ ಕಾಣುತ್ತದೆ.)

ಆದಿನಾಥನ ಭವಾಂತರಗಳನ್ನು ಒಂದುಗೂಡಿಸುವ ತತ್ವವನ್ನು ಪಂಪನು ಅನುಸರಿಸಿದನು. ಆದರೆ ಮೂಲದಲ್ಲಿ ಜಿನಸೇನಾಚಾರ್ಯರು ಹಾಗೆ ಮಾಡಿಲ್ಲ ಎಂಬುದರ ಪುಷ್ಟಿಗೆ ಪ್ರಬಂಧಕಾರರು ದಾಖಲೆಗಳನ್ನು ಕೊಟ್ಟಿಲ್ಲ. ಆದರೆ ಪಂಪನು ಪೂರ್ವಪುರಾಣದಲ್ಲಿಯ ಅಭಿಪ್ರಾಯಗಳನ್ನು ಸ್ವೀಕರಿಸಿಯೂ ಅಲ್ಲಿಯ ಕಥಾಂಶಗಳನ್ನು ತನಗೆ ತಕ್ಕಂತೆ ಸಂಕ್ಷೇಪಿಸಿ, ವಿಸ್ತರಿಸಿ ಸಂಗ್ರಹ-ಅನುವಾದಗಳ ಸ್ವೋಪಜ್ಞತೆ ಕಾಣಿಸಿದ್ದು ಪ್ರಬಂಧಕಾರರು ಉಭಯಕೃತಿಗಳ ತುಲನಾತ್ಮಕ ಸಮೀಕ್ಷೆಯಿಂದ ಮನದಟ್ಟಾಗಿಸಿದ್ದಾರೆ.

ಅತಿಬಲನ ಆಕಸ್ಮಿಕ ವೈರಾಗ್ಯಕ್ಕೆ ಕಾರಣವಾದ ನರೆಗೂದಲಿನ ವರ್ಣನೆಯಲ್ಲಿ ಭರ್ತೃಹರಿಯ ಪ್ರತಿಧ್ವನಿ ಇದೆ. ಆತ ನರೆಗೂದಲನ್ನು "ಕೃತಾಂತ ಕಟಕಾಮಲಧ್ವಜಜರು" ಎಂದು ಬಣ್ಣಿಸಿದ್ದಾನೆ. "ಪಂಪನಿಗೆ ನಾಲಿಗೆ ಇಲ್ಲ" ವೆಂಬುದನ್ನು ಲಲಿತಾಂಗ-ಸ್ವಯಂ ಪ್ರಭೆಯರ ಉನ್ಮೋದಕ ಶೃಂಗಾರ ರಸದ ಭೋಗಜೀವನ ಪ್ರಸಕ್ತಿಯಲ್ಲಿ ಕವಿಯು ಹೇಗೆ ಸುಳ್ಳಾಗಿಸಿದ್ದಾನೆಂಬುದನ್ನು ಪ್ರಬಂಧಕಾರರು ಒತ್ತಿ ಹೇಳಿದ್ದಾರೆ. ಪೂರ್ವ ಪುರಾಣದಲ್ಲಿ ನಾಟಕೀಯತೆಗೆ ಲವಲೇಶವೂ ಅವಕಾಶವಿಲ್ಲದ ಪ್ರಸಂಗಗಳನ್ನು ಪಂಪ ಆದಿಪುರಾಣದಲ್ಲಿ ನಾಟಕೀಯ ವ್ಯಂಗ್ಯದಿಂದ ಹೇಗೆ ಸಿಂಗರಿಸಿರುವನೆಂಬುದನ್ನು ಹೇಳಿದ್ದಾರೆ. ಉದಾ: ವಜ್ರಜಂಘ ಶ್ರೀಮತಿಯನ್ನು ಬೀಳ್ಕೊಡುವ ಪ್ರಸಂಗದ ಮೇಲೆ ಶಾಕುಂತಲದ ೪ನೆಯ ಅಂಕದ ಪ್ರಭಾವ ಬಿದ್ದಿರುವುದನ್ನು ತೋರಿಸಿದ್ದಾರೆ. ವಜ್ರಜಂಘ ಶ್ರೀಮತಿಯರ ಸಾವಿನ ಸನ್ನಿವೇಶ, ಜಿನಮಜ್ಜನದ ಭವ್ಯ ಚಿತ್ರಣ—ಇತ್ಯಾದಿ ಜಿನಸೇನನ ಕಥಾವಸ್ತುವಿನ ಅಪೂರ್ವ ಪರಿಷ್ಕೃತ ರಸೋತ್ಕಟ ವಿನ್ಯಾಸ— ಎಂಬುದಾಗಿ ಪ್ರಬಂಧಕಾರರು ಸಾರಿದ್ದಾರೆ. ಸಂಗ್ರಹದಲ್ಲಿದ್ದ ಔಚಿತ್ಯ ಪ್ರಜ್ಞೆ ಕಳೆದುಕೊಂಡನೆಂದು ಸುಮ್ಮನೆ ಪಂಪನನ್ನು ಆಕ್ಷೇಪಿಸಿದರೆ, ಕಥಾಂಶಗಳ ವಿಸ್ತರಣೆಯಲ್ಲಿ ಅಂಥ ಪ್ರಜ್ಞೆಯನ್ನು ಆತ ಮಾರ್ಮಿಕವಾಗಿ ಮಹನೀಯವಾಗಿ

ಕಾಣಿಸಿದ್ದನೆಂದು ಈ ಪ್ರಬಂಧಕಾರರ ಪ್ರತಿಪಾದನೆ! ಇದಕ್ಕೆ ಉಜ್ವಲ ನಿದರ್ಶನ ನೀಲಾಂಜನೆಯ ನೃತ್ಯ-ಪ್ರಸಂಗ ಮತ್ತು ಪುಷ್ಪಾಪಚಯದ ಪ್ರಸಂಗ.

ಆದರೆ ಇವೆರಡು ಪ್ರಸಂಗಗಳಲ್ಲಿ ಕವಿ ತನ್ನ ಈ ಮೋಹಿನಿ, ಮಾವು ಮಲ್ಲಿಗೆಗಳ ಹುಚ್ಚು-ಮೆಚ್ಚಿನ ಸ್ವಾನುಭವದ ಅಂಶಗಳನ್ನು ಮೆಲುಕು ಹಾಕಿರಬಹುದಷ್ಟೇ? ಇಲ್ಲಿಯ ಔಚಿತ್ಯ ಉತ್ಪ್ರೇಕ್ಷೆಗಿಂತ ಉತ್ತಮ ಸಂದರ್ಭವನ್ನು ಗುರುತಿಸಿ ಅಲ್ಲಿ ಈ ಆತ್ಮಕಥನದ ಛಾಯೆ ರಂಗುರಂಗಾಗಿ ಕಾಣಿಸುವದರಲ್ಲಿಯೇ ಇದೆ ಎನ್ನಬಹುದು. (ಪಂಪನು ವೆಂಗಿಮಂಡಳಕ್ಕೆ ಮರಳಿದ ಮೇಲೆ ತನ್ನ ಪ್ರೇಯಸಿ 'ನೀಲಾಂಜನೆ'ಗೆ ಕಳುಹಿಸಿದ ಸಂದೇಶವೆಂದು ಕವಿವರ್ಯ ಬೇಂದ್ರೆ ಒಂದು ಹೃದ್ಯವಾದ ಕವನವನ್ನು ಬರೆದಿದ್ದಾರೆ—ಅವರ "ಮರ್ಯಾದಾ" ಸಂಕಲನದಲ್ಲಿದೆ!)

"ಘಟಐದ್ಗ ಮಂಡಲೋತ್ಪಲ ವಿಭ್ರಮಭ್ರಮರಿ"ಯಪ್ಪ ರಾಜ್ಯಲಕ್ಷ್ಮಿಯ ಈ ವರ್ಣನೆ ಪಂಪನು ಬಾಣನ ಕಾದಂಬರಿಯಿಂದ ಎತ್ತಿಕೊಂಡಿದ್ದು!

"ಸಂಸ್ಕೃತದಲ್ಲಿ ಆ ಕಾಲಕ್ಕೆ ಪ್ರಚಲಿತವಾಗಿದ್ದ ಕಾವ್ಯ ಪ್ರಕಾರಕ್ಕಿಂತ ತೀರ ಭಿನ್ನವಾದ ಕಾವ್ಯ ಮಾರ್ಗವನ್ನು ತೆರೆದು ತನ್ನ ಪ್ರತಿಭೆಯನ್ನು ಬೆಳಗಿದ್ದಾನೆ" ಎಂದು ಶ್ರೀ ಕುರ್ತಕೋಟಿ ಪಂಪನ ಬಗೆಗೆ ಉಲ್ಲೇಖಿಸಿದ್ದು ಈ ಸಂದರ್ಭದಲ್ಲಿ ಬಂದಿದೆ. ಆದರೆ ಪಂಪನ ಈ ಭಿನ್ನ ಮಾರ್ಗೀಯತೆ ಏನು, ಹೇಗೆ? ಚಂಪೂ ಪ್ರಕಾರಕ್ಕೆ ಪಂಪನೇ ಮೂಲನೇ?

ಕೊನೆಯದಾಗಿ, 'ಆಗಮ' ವೆನ್ನುವ ಮಟ್ಟಿಗೆ ಜೈನರ ಸಿದ್ಧಾಂತ ಸಂಪ್ರದಾಯ ಆಚಾರ ಪ್ರಕ್ರಿಯೆಗಳ ಸಮಾವೇಶ ಈ 'ಆದಿಪುರಾಣ'ದಲ್ಲಿ ಸಾಕಷ್ಟು ಆಗಿದೆಯೇ?—ಈ ಪ್ರಶ್ನೆಗೆ ಸಮರ್ಪಕ ಉತ್ತರ ಈ ಪ್ರಬಂಧದಲ್ಲಿ ಸಿಗುವದಿಲ್ಲ. ಚಾರ್ವಾಕ ಮತವೆಂದು ಉದಾಹರಿಸಿದ ಮಾತುಗಳಂತೂ ಪಂಪನ ಸ್ವಂತ ಜೀವನ ದರ್ಶನದ ಸೂತ್ರವೋ—ಎಂಬಂತಿದೆ. ಶೃಂಗಾರದ ಬಗೆಗೆ ಪಂಪನ ದೃಷ್ಟಿ ಜೈನರ ಜಿನಸೇನರ ಮತೀಯ ದೃಷ್ಟಿಯಿಂದ ಹೇಗೆ ಭಿನ್ನವೆಂಬುದನ್ನು ಪ್ರಬಂಧಕಾರರು ವಿಶದಗೊಳಿಸಿದ್ದಾರೆ—ಪ್ರಶ್ನೋತ್ತರದಲ್ಲಿ.

"ಪಂಪನ ದೇಸಿ" **ಶ್ರೀ ಕೆ. ವಿ. ನಾರಾಯಣರ** ಪ್ರಬಂಧದ ವಿಷಯ.

"ದೇಸಿ" ಅಂದರೇನು? ಅದು ದೇಶ್ಯ—ಭೌಗೋಲಿಕ ಪ್ರದೇಶ ವಿಶಿಷ್ಟ ಭಾಷಿಕ ರೀತಿ. ಅದೊಂದು ಜನಪದದ ಉದ್ದೇಶೀಯ ವ್ಯತ್ಯಾಸಗಳುಳ್ಳ ಉಪಭಾಷೆ—ಬಾಯ್ನುಡಿ. ಸಂಸ್ಕೃತದ ಪ್ರಮಾಣಪತ್ರ (norm) ಗಳಿಗೆ ಸಲ್ಲದ ವಾಕ್ ಪ್ರಯೋಗಗಳೆಲ್ಲ ದೇಸಿ. (ಇನ್ನು ದೇಸಿ ಅಂದರೆ ಚೆಲುವು. ದೇಸಿ

ಸಂಗೀತದಲ್ಲಿ ಒಂದು ರಾಗ. ಇತ್ಯಾದಿ ಅರ್ಥ ಅವಾಂತರ). ಈ ಅರ್ಥದಲ್ಲಿ ದೇಸಿಯನ್ನು "ಸಂಸ್ಕೃತದ ಸಂದರ್ಭದಲ್ಲಿಯೇ ವಿವರಿಸುವುದು ಅನಿವಾರ್ಯ" ವೆಂದಿದ್ದಾರೆ ಪ್ರಬಂಧಕಾರರು. ಈ ವ್ಯಾಖ್ಯೆಯ ವ್ಯಾಪ್ತಿ ಸಯುಕ್ತಿಕವೇ? ಸಂಸ್ಕೃತೇತರ ಒಂದು ಪರಿಷ್ಕೃತ ಶಿಷ್ಟಭಾಷೆ (standard language)ಯ ಸಂದರ್ಭದಲ್ಲಿ ಆ ಭಾಷೆಯ ಉಪಮಾದರಿಗಳು 'ದೇಸಿ'ಯಾಗಲಾರವೇ?

ಆದರೆ ಕಾವ್ಯಮೀಮಾಂಸೆಯಲ್ಲಿ ದೇಸಿ × ಮಾರ್ಗ. ಅಭಿವ್ಯಕ್ತಿಗೆ ಶೈಲಿ ವಿಶೇಷಕ್ಕೆ ಸಂಬಂಧಿಸಿದ್ದು. ಆದರೆ ದ್ರಾವಿಡ ಸಹಜವಾದದ್ದು (?) ಇಲ್ಲಿ ದೇಸಿ ಎಂದೂ ಹೇಳಿದೆ. ಸಂಸ್ಕೃತ ಕನ್ನಡಗಳ ಮಿಶ್ರಣಕ್ಕೆ ಇರುವ ವಿರೋಧ ಬಗೆಹರಿಸುವುದೇ ಅಂದಿನ ಕವಿಗಳು ಎದುರಿಸಬೇಕಾದ ಸವಾಲು. ಆದರೆ ದೇಸಿ ಯಿಂದಲೇ ಸಹೃದಯ ಓದುಗರಲ್ಲಿ ನಿಜವಾದ ಪ್ರತಿಕ್ರಿಯೆ. ಮುಂದೆ ದೇಸೀ × ಗ್ರಾಮ್ಯ ಮುಂತಾದಾಗಿ ೪೫ ಪುಟ ಈ ಭಾಷಾಶಾಸ್ತ್ರೀಯ ಚರ್ಚೆ ಇಲ್ಲಿ ಬೆಳೆದಿದೆ.

ಕಾವ್ಯವೇ ಇಡಿಯಾಗಿ ಕನ್ನಡದಲ್ಲಿರುವಾಗ, ಅದರಲ್ಲಿ ಒಂದು ನಾಣ್ನುಡಿ ಲೋಕಾನುಭವದ ಆಡುವ ಮಾತು ಎತ್ತಿ ದೇಸಿಯೆಂದು ಉದಾಹರಿಸುವುದು ಯುಕ್ತವೇ? ಆದರೆ ಶೈಲಿಯ ದೃಷ್ಟಿಯಿಂದ ಮಾರ್ಗಶೈಲಿಯ ಕವಿಯಾಗಿ ಭಾಷೆಯ ಲಕ್ಷಣ ವಿಶೇಷಗಳನ್ನು ಉಳಿಸಿಕೊಂಡು ಬಂದ ಸಂದರ್ಭಗಳನ್ನು ದೇಸಿಯ ಉದಾಹರಣೆಯಾಗಿ ನಾವು ನೋಡುತ್ತೇವೆ. ಹಾಗೆ ನೋಡಿದಾಗ ಪಂಪನದು ಸುವರ್ಣಮಾಧ್ಯಮ, ಸಮನ್ವಯವಾದಿ ಸಾಪೇಕ್ಷ ನಿಲುವು ಎಂದು ಹೇಳಲಾಗುತ್ತದೆ. ಈ ದೃಷ್ಟಿಯಿಂದ ಸಂಭಾಷಣೆಯಲ್ಲಿಯ ಕಾಕು intonation ಮಾತಿನಲ್ಲಿಯೇ ಆಡುವದು, ಬರಹದಲ್ಲಿ ಬರಲಾರದು. ಆದರೂ ಇದರ ದನಿ, ನುಡಿಸುವಿಕೆ, ಆಡುವ ಮಾತಿನ ಧಾಟಿ–ಎಲ್ಲ ಪ್ರಬಂಧಕಾರರು ಸೋದಾಹರಣವಾಗಿ ಎತ್ತಿ ತೋರಿಸಿದ್ದಾರೆ. ಹಾಗೆಯೇ ವಾಕ್ಯದ ಪದಕ್ರಮವನ್ನು ಭಾವಪರಿಪೋಷಕ್ಕಾಗಿ ಒದಗಿಸಿಕೊಳ್ಳುವದು, ಕ್ರಿಯಾಪದ ಮೊದಲಾಗಿ ರಚಿಸುವದು—ಇತ್ಯಾದಿ ಮಾರ್ಗ ಛಂದಸ್ಸಿನಲ್ಲಿಯೂ ಪಂಪ ದೇಸಿಯ ಅಂಗವನ್ನು ಸಾಧಿಸಿದ್ದು ಇಲ್ಲಿ ಕಾಣಿಸಲಾಗಿದೆ (ಪ್ರಬಂಧಕಾರರು realisation ಅವತಾರ, choice ಅವಕಾಶ ಹೀಗೆಲ್ಲ ಅನುವಾದಿಸಿದ್ದು ಸೋಜಿಗ).

ಹಾಗೆಯೇ ಇದರ ಅರ್ಥವೇನು?—"ಒಂದೇ ಲಯದಲ್ಲಿ ಬರೆದ ಗೀತೆಗಳಿವೆ. ಎಂದರೆ ಆ ಗೀತೆಗಳ ಭಾವಗಳಿಂದ ಒಂದು ಸಾಮಾನ್ಯ ಅಂಶವನ್ನು ಗುರುತಿಸಿ ಲಯಕ್ಕೂ ಅಸಾಮಾನ್ಯ ಅಂಶಕ್ಕೂ ಸಾಹಚರ್ಯವನ್ನು ಕಲ್ಪಿಸುತ್ತೇವೆ." ಈ ವಾಕ್ಯಗಳಲ್ಲಿ ಏನೇನೋ ವ್ಯಕ್ತಮಾಡಲು ಹೋಗಿ ಪ್ರಬಂಧಕಾರರು ತಮ್ಮನ್ನೂ ನಮ್ಮನ್ನೂ ಕೂಡಿಯೇ ಮೋಸಗೊಳಿಸಿದಂತಿದೆ!

ದೇಸಿ ಕವಿಯು ವ್ಯುತ್ಪತ್ತಿಯ ಭಾಗವಂತೆ. ಪಂಪ ಆಸ್ಥಾನದಲ್ಲಿ ಪಂಡಿತರ ನಡುವೆ ಬದುಕಿದವನಂತೆ. ಹಾಗೆಂದ ಮಾತ್ರಕ್ಕೆ ಆತ ದೇಸಿಯ ಬದುಕಿನ ಬಗೆಗೆ ಬಾಹಿರನಾಗಬೇಕಿತ್ತೇ? ಹಾಗೆ ಆಗಿಲ್ಲವೆಂದು ಅವನ ಬಗೆಗೆ ಪ್ರಬಂಧಕಾರರಿಗೆ ಕಾತುರ! ಆದರೂ ವ್ಯುತ್ಪತ್ತಿಯು ಪರಿಕರ ಅವಶ್ಯವಾದರೂ ಗೌಣವೆಂಬುದನ್ನು ಆನಂದವರ್ಧನನ ದಾಖಲೆಯಿಂದ ಪ್ರಬಂಧಕಾರರು ಬೇರೆ ಒಪ್ಪುತ್ತಾರೆ.

ಚಾರಿತ್ರಿಕ ಕಾರಣಗಳಿಂದಲೂ ಪಂಪನ ದೇಸಿಯನ್ನು ಅಭ್ಯಸಿಸಬಹುದು. ಆತ ತನ್ನ ಎಳವರಯವನ್ನು ಬನವಾಸಿಯ ಪರಿಸರದಲ್ಲಿ ಕಳೆದಿದ್ದರೆ ಆ ಮೂಲಕ ಅವನ ದೇಸಿಯಲ್ಲಿ ಇಂದಿಗೂ ಹವ್ಯಕರ ಮನೆಮಾತಿನಲ್ಲಿ ಬಳಕೆಯಲ್ಲಿರುವ ಅನೇಕ ಶಬ್ದಗಳು ಪ್ರಚಲಿತವಿರುವದು ಕಂಡರೆ ಸೋಜಿಗವಲ್ಲ, ಇರಲಿ.

ದೇಸಿಯಿಂದ ಮಾರ್ಗಕ್ಕೆ ಹೋಗಲು ವ್ಯುತ್ಪತ್ತಿಯೇ ಪ್ರಧಾನ. ಆದರೆ ಮಾರ್ಗದಿಂದ ದೇಸಿಗೆ ಬರಲು ಮಹಾ ಕವಿಗೇ ಸಾಧ್ಯ—ಅಂದರೆ ಆ ಮೂಲಕ ಲಘುತ್ವಕ್ಕೆ ಇಳಿಯುದಂತೆ. ಅಲ್ಲದೆ ಪಂಪನ ಕಾಲದಲ್ಲಿ ಶಾಸನಗಳಿಂದ ಸಾಹಿತ್ಯಕ್ಕೆ ತಿರುಗುವ ಗದ್ಯವು ಅತ್ತ ಮಾರ್ಗ ಇತ್ತ ದೇಸಿ ಇವೆರಡರ ಕಡೆಗೂ ವಾಲುತ್ತಿತ್ತು. ಆದ್ದರಿಂದ ಪಂಪ ಮಾರ್ಗದಿಂದ ದೇಸಿಗೆ ತಿರುಗಿದನೆಂದು ಹೇಳುವದು ಸರಿಯಲ್ಲ. ಆತ ಸಂಸ್ಕೃತದಿಂದ ಕನ್ನಡಕ್ಕೆ ತಿರುಗುವವರ ಅನಿವಾರ್ಯ ಆನುಷಂಗಿಕ ಸಾಧನೆಯದು.

ಪಂಪನಂಥ ಪಂಡಿತ ಕವಿಯಲ್ಲಿ ಈ ಮಾರ್ಗ–ದೇಸೀ, ಸಂಸ್ಕೃತ–ಕನ್ನಡ ಸಮನ್ವಯ ಕೃಷಿಯ ಫಲವೇ ಸರಿ. ಕುಮಾರವ್ಯಾಸನಲ್ಲಿಯಂತೆ ಅದೊಂದು ಆವೇಶದ ಉತ್‌ಸ್ಫೂರ್ತಿ ಕ್ರಿಯೆಯಲ್ಲ. ಆದಾಗ್ಯೂ ಸಮನ್ವಯದ ಪರಿ ಏನು? ಈ ವಾದಕ್ಕೆ ಆಧಾರ ಪಂಪನ ಸುಪ್ರಸಿದ್ಧ ಪದ್ಯ. "ಬಗೆ ಪೊಸದಪ್ಪುದಾಗೆ..." ಈ ಪದ್ಯದ ಅರ್ಥವಿವರಣೆ ಬಿಟ್ಟರೆ ಸರಿ. ಆದರೆ "ದೇಸಿಯೊಳ್ ಪೊಕ್ಕು, ಪೊಕ್ಕ ಮಾರ್ಗದೊಳ್ ತಳ್ವುದು".. ಈ ಪಂಕ್ತಿಯ ಸ್ಪಷ್ಟೀಕರಣ? ಅದೊಂದು ಹಂತಹಂತವಾದ ವಿನ್ಯಾಸ. ೧. ಬಗೆ ಪೊಸದಪ್ಪುದು. ೨. ಮೃದುಬಂಧದೊಳೆ ಒಂದುವುದು. ೩. ಬಂದಿ ದೇಸಿಯೊಳ್ ಪುಗುವದು. ೪. ಪೊಕ್ಕ ಮಾರ್ಗದೊಳ್ ತಳ್ವುದು"— ಹೀಗೆ ಈ ಹಂತಗಳು ಸಾಗುತ್ತವೆ— ಕಾವ್ಯಬಂಧಂ ಒಪ್ಪುಗುಮುಂ ಎಂಬ ಪ್ರಯೋಜನಕ್ಕೆ. ಇಲ್ಲಿ ಬಂದ 'ಮಾರ್ಗ' ಶಬ್ದ ಹಿಂದೆ ಬಂದ 'ದೇಸಿ'ಗೆ ಪ್ರತಿಯಾಗಿ ಅರ್ಥಭಾವನೆ ಕೊಡುತ್ತಿದ್ದರೂ, ಅದು ಒಟ್ಟು ಕಾವ್ಯ ಒಪ್ಪುವ ಬಗೆ ಅಥವಾ ರೀತಿಯ ಸಾಗಾಣಿಕೆಯ ಹೆಸರಾಗಿದೆ. ಏಕೆಂದರೆ 'ದೇಸಿ'ಯಲ್ಲಿ ಪುಗುವುದು ಅಂದಮೇಲೆ ಮುಂದೆ 'ಪೊಕ್ಕ ಮಾರ್ಗದೊಳ್' ಅಂದಾಗ ಆ ದೇಸಿಯ ದಾರಿಯಲ್ಲಿಯೇ ಎಂಬ ಅರ್ಥವೇ ಇಲ್ಲಿ ತೋರುತ್ತದೆ.

(ಅಲ್ಲಿ 'ಒಂದಿ' 'ತಳ್ತೊಡೆ' ಎಂಬಂತೆ 'ಪೊಕ್ಕು' ಎಂದಿಲ್ಲ. 'ಪೊಕ್ಕ' ಎಂದಿದೆ. ಅದು ದೇಸಿಯೇ ಆ ಪೊಕ್ಕ ಮಾರ್ಗ. ದೇಸಿಯನ್ನು ಆಕ್ರಮಿಸಿ ಅದೇ ರೀತಿ-ಶೈಲಿಯಲ್ಲಿ ಮುಂದುವರಿದು ತಳ್ತೊಡೆ—ಇಲ್ಲಿ 'ತಳ್' ಶಬ್ದ ನಿಜವಾಗಿಯೂ ಚಮತ್ಕಾರಿಯಾಗಿದೆ. ದೇಸಿಯ ಬಳಕೆಯಿಂದಲೇ ಕವಿಯ ಭಾಷಾ ಶೈಲಿ ತಳಿರುಬಿಟ್ಟು ಕೊನರಿ ಅದರ 'ಬಗೆ ಹೊಸತಪ್ಪುದು' ಎಂಬ ಅರ್ಥಛಾಯೆ ನಿಜವಾಗಿಯೂ ವಿಸ್ಮಯಕಾರಿ.) ಇಲ್ಲಿ ದೇಸಿ-ಮಾರ್ಗ ಇವೆರಡೂ ಶೈಲಿಗೇ ಸಂಬಂಧಪಟ್ಟ ಪಾರಿಭಾಷಿಕ ಪದಗಳನ್ನು ಒಂದೆಡೆಗೆ ಪ್ರಯೋಗಿಸಿದ್ದರಿಂದ ಅವೆರಡರ ಸಮನ್ವಯವೆಂಬ ಸೂಚನೆ ಬರಬೇಕೇ ಹೊರತು ಈ ಪದ್ಯಪಂಕ್ತಿಯಲ್ಲಿ ಅದು ಹಾಗೆ ಅರ್ಥವಿಸುವದಿಲ್ಲ. ಅಲ್ಲಿ ದೇಸಿಯ ಜಾಡನ್ನು ಹಿಡಿದು ಮುನ್ನಡೆದು ಕಾವ್ಯಬಂಧದ ಬಗೆ ಹೊಸದಾಗುವ ರೀತಿಯ ವರ್ಣನೆ ಇದೆ.

"ವೃತ್ತಗಂಧಿ ಚೌಕಟ್ಟಿನಲ್ಲಿ ಸಂಭಾಷಣೆಯ ಧಾಟಿ ತರುವಾಗಲೇ ಪಂಪನು ದೇಸಿಯ ಸಾಮಗ್ರಿಯಿಂದ 'ಧ್ವನಿಪೂರ್ಣ ಸೇಂದ್ರಿಯ ಘಟಕ' ರಚಿಸಿದ್ದಾನೆ." ಸರಿ, ಆದರೆ ಇದೇನು 'ಸೇಂದ್ರಿಯ ಘಟಕ'? ಅದರ ಇಂದ್ರಿಯಗಳು ಯಾವವು? ಹಾಗೆಯೇ ಮಾರ್ಗಶೈಲಿಯ 'ಗಂಭೀರ ಮೌನ'ವೇನು? ಅರ್ಥಗೌರವದ ವಾಗ್ಮಿತೆಯೆನ್ನಿ ಆದರೆ ಅದು 'ಮೌನ' ಹೇಗೆ?

ಪ್ರಬಂಧಕಾರರೇ ಒಪ್ಪುವಂತೆ ಪಂಪನ ದೇಸಿಯ ಅಭ್ಯಾಸಕ್ಕೆ ಈ ಪ್ರಬಂಧ ಒಂದು ಆರಂಭ ಮಾತ್ರ. ಈ ಅಭ್ಯಾಸ ಅತ್ಯಂತ ಮಹತ್ವದ್ದು. ಆ ಮಾನದಲ್ಲಿ ಈ ಆರಂಭ ಇನ್ನೂ ಆಳ, ಇನ್ನೂ ವ್ಯಾಪಕವಾಗಬಹುದಿತ್ತು.

"ಪಂಪನ ಅಭಿವ್ಯಕ್ತಿ"ಯಲ್ಲಿ **ಪ್ರೊ. ಜಿ. ಎಚ್. ನಾಯಕರು** ಆ ಮಹಾಕವಿಯ ಕಾವ್ಯಶಕ್ತಿಯ ಸ್ಥಾಯಿ-ಸಂಚಾರಿ ಸ್ಥಿತಿಗಳನ್ನು ಗುರುತಿಸಲು ಯತ್ನಿಸಿದ್ದಾರೆ. (ಭಾವಲೋಕಕ್ಕೆ ಸಂಬಂಧಿಸಿದ ಈ ಸ್ಥಾಯಿ-ಸಂಚಾರಿಗಳ ನಂಟು ಕಾವ್ಯಶಕ್ತಿ ಅಭಿವ್ಯಕ್ತಿಯ ಸಾಮರ್ಥ್ಯದೊಂದಿಗೆ ಗಂಟಿಕ್ಕಿದ್ದು ಹೇಗೆ? ಶಕ್ತಿ-ಸಾಮರ್ಥ್ಯ ಕವಿಗೆ ಹೆಚ್ಚು ಕಡಿಮೆ ಇರುತ್ತದೆ ಇಲ್ಲವೆ ಇರುವದಿಲ್ಲ. ಅದು ಸ್ಥಾಯಿಯೇ-ಸಂಚಾರಿಯಲ್ಲ. ಅದನ್ನು ಬಳಸುವ 'ಮೂಡು' ಸಂಚಾರಿ.)

ಶ್ರೀ ನಾಯಕರ ಈ ಪ್ರಬಂಧದ ತಾತ್ವಿಕ ಭಾಗಕ್ಕಿಂತ ಸಾನ್ವಯ ವಿಮರ್ಶೆಯ ಭಾಗ ಹೆಚ್ಚು ಸ್ಫುಟವಾಗಿ, ದಿಟವಾಗಿ ಬಂದಿದೆ. ತಾತ್ವಿಕ ಭಾಗವು ಬಹುಮಟ್ಟಿಗೆ ತಾತ್ವಿಕ ಗೊಂದಲದಲ್ಲಿ ಸಿಲುಕಿದೆ. ಈ ಗೊಂದಲ ಪ್ರಾಚೀನ ಕಾವ್ಯ ಒಂದನ್ನು ತೀರ ಆಧುನಿಕ ವಿಮರ್ಶಾದೃಷ್ಟಿಯಿಂದ ನೋಡಿ ಒರೆಗೆ ಹಚ್ಚುವ ಪ್ರಯತ್ನದಿಂದ ಉಂಟಾಗಿದೆ—'ಡಬ್' ಮಾಡಿದ ಚಿತ್ರದ ಸಂಭಾಷಣೆಯಂತೆ ಸುಸಂವಾದವನ್ನು ಕೊಡುವದಿಲ್ಲ.

ಪಂಪನು ತನ್ನ ಕಾವ್ಯಕ್ರಿಯೆಯನ್ನು ಒಂದು ಇಕ್ಕಟ್ಟಿನಲ್ಲಿ, ಸಂಕೋಚದ ಸ್ಥಿತಿಯಲ್ಲಿ ನಡೆಯಿಸಿಕೊಂಡು ಹೋದವನು—ಎಂಬ ಪ್ರಪ್ರಥಮ ವಿಧಾನವೇ ಸುಲಭವಾಗಿ ಸ್ವೀಕರಿಸುವಂತಿಲ್ಲ. ಏಕೆಂದರೆ ಈ 'ಇಕ್ಕಟ್ಟಿ'ನ ಅರಿವು ಆ ಕವಿಗೇ ಮೊದಲು ಇಲ್ಲ. ಆತ ತನ್ನ ಉಭಯಕೃತಿಗಳಲ್ಲಿ ಬಹುಮಟ್ಟಿಗೆ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ತನ್ನದಾಗಿ ಇಟ್ಟುಕೊಂಡು ಪೂರ್ವಪುರಾಣ ವ್ಯಾಸಭಾರತಗಳಿಗೆ ಒಟ್ಟಾರೆ ವಿಧೇಯನಾಗಿ ಬರೆಯುವ ಬದಲು, ತಾನಾಗಿಯೇ ಮಾಡಿಕೊಂಡ ಆಯ್ಕೆ, ಉಭಯ ಮಹಾಕಾವ್ಯಗಳನ್ನು ತನ್ನ ಪ್ರತಿಭೆ-ಪಾಂಡಿತ್ಯಗಳ ಬಲದಿಂದ ಲೀಲಾಜಾಲವಾಗಿ ಈಜುವ ಕೆಚ್ಚು ಮೆಚ್ಚು ಅವನದು. ಅವನಿಗೇ ಅನಿಸದ್ದ ಇಕ್ಕಟ್ಟು ವಿಮರ್ಶಕರಿಗೆ ಅನಿಸಿದೆ!

ಜಿನಸೇನಾಚಾರ್ಯರ ಕೃತಿ ಮತ್ತು ಜೀವನದೃಷ್ಟಿಗಳಿಗೆ ವಿಧೇಯನಾಗಿದ್ದರಿಂದ ಪಂಪ ತನ್ನ 'ಜವಾಬುದಾರಿಗಳನ್ನು ಸವಾಲುಗಳನ್ನು' ಗೌಣ ನೆಲೆಯಲ್ಲಿ ನಿಂತು ಎದುರಿಸಬೇಕಾಗುತ್ತದೆ ಎಂಬ ಅಭಿಪ್ರಾಯ ಆ ಕವಿಗೆ ನ್ಯಾಯ ಕೊಡುವುದಿಲ್ಲ. ಇಲ್ಲಿ ಈ ವಿಧೇಯತೆ ಒಂದು ನಿರ್ಬಂಧವಲ್ಲ, ಬಂಧನವಲ್ಲ, ಗುರು-ಶಿಷ್ಯ ಬಾಂಧವ್ಯ. ಧರ್ಮದ ಋಣಾನುಬಂಧ. ಇಷ್ಟಾಗಿಯೂ ಕವಿ ಪೂರ್ವಪುರಾಣದಿಂದ ಆದಿಪುರಾಣವನ್ನು ಅರಳಿಸಿಕೊಳ್ಳುವಲ್ಲಿ ತುಂಬ ಸ್ವಂತಿಕೆ ತೋರಿದ್ದಾನೆ. ಮೂಲದ ಧಾರ್ಮಿಕ ಪೌರಾಣಿಕ ದೃಷ್ಟಿಯನ್ನು ಮೀರಿ ತನ್ನ ಕೃತಿಯನ್ನು ರಸಮಯ ಕಾವ್ಯವಾಗಿಸಿದ್ದಾನೆ. ಇದು ಇಕ್ಕಟ್ಟಿನಲ್ಲಿ ಸಿಲುಕಿದ ಲಕ್ಷಣವಲ್ಲ.

ಮೂಲದ ಕಥಾಂಶಗಳಲ್ಲಿ ಅರ್ಥಪೂರ್ಣವಾದ, ಸೂಕ್ಷ್ಮಸಂವೇದಿಯಾದ ಮಾರ್ಪಾಟುಗಳನ್ನು ಮಾಡುವುದರಲ್ಲಿ ಪ್ರಬಂಧಕಾರರೇ ಮೆಚ್ಚುವಂತೆ, ಔಚಿತ್ಯ ಪ್ರಜ್ಞೆ, ರಸಗ್ರಹಣವಿವೇಕ, ವಸ್ತು ನಿರ್ವಹಣದಲ್ಲಿ ತಕ್ಕ ಅಧಿಕಾರ, ಪ್ರತಿಭಾ ಸ್ವಾತಂತ್ರ್ಯ—ಎಲ್ಲವನ್ನೂ ಮೆರೆದಿದ್ದಾನೆ.

ಯಾವ ಕಲಾವಿದನಿಗೂ ತಾನು ಅವನು ಆಯ್ದುಕೊಂಡ ವಸ್ತು (theme) ಮತ್ತು ಮಾಧ್ಯಮಗಳ ಕೆಲವೊಂದು ಪರಿಮಿತಿ(limitation)ಗಳು ಇದ್ದೇ ಇರುತ್ತವೆ. ಅವುಗಳಿಂದ ಅವನಿಗೆ ಒಂದು ಸಂಕೋಚ ಸ್ಥಿತಿ ಉಂಟಾಗುವುದಿಲ್ಲ-ಹೊರಗಿನ ಅವರ ಬಂಧನಗಳಿಂದ ಸಂಕೋಚವಿಲ್ಲ. ಈ ಪರಿಮಿತಿಗಳು ಸಂಗೀತಕ್ಕೆ ತಾಳವಿದ್ದಂತೆ. ಪಂಪನೊಬ್ಬನವೇ ಅಲ್ಲ, ಆ ಕಾಲದ ಆಸ್ಥಾನ ಕವಿಯೆನಿಸಿಕೊಂಡವರ ಜಾಯಮಾನವೇ ಇದು—ವಸ್ತು ಪರಾರ್ಜಿತ, ತನ್ನ ಆಶ್ರಯದಾತನಿಗೆ ತನ್ನ ಕೃತಿ ನಿವೇದಿತ, ಇವೆರಡೂ ಬಂಧನಗಳನ್ನು ಕಟ್ಟಿಕೊಂಡೇ ಅವರ ಕಾವ್ಯವಾಹಿ

ಹರಿಯಬೇಕು! ಕವಿಗೆ ಸ್ವಯಾರ್ಜಿತ ಅವನ ಕಥನ ಗ್ರಥನ ಕೌಶಲ. ಅಭಿವ್ಯಕ್ತಿಯ ರೀತಿ ಅದುವೆ ಪಂಪನಂಥ ಪ್ರಾಚೀನ ಕವಿಗಳ ಮುಖ್ಯ ಲಕ್ಷಣ.

ಆದರೆ ಈ "ಬದ್ಧಸ್ಥಿತಿ"ಯು ಪಂಪನಂಥ ಕವಿಗೆ ದುರದೃಷ್ಟಕರವೆಂದು ಪ್ರಬಂಧಕಾರರು ಕನಿಕರಪಟ್ಟಿದ್ದಾರೆ. ಅದರಿಂದ ಕವಿಗೆ ಶ್ರೇಷ್ಠ ಕವಿಯಾಗುವ ಸಾಧ್ಯತೆಯೇ ಇಲ್ಲವಾಗಿದೆ ಎಂದು ಮರುಗುತ್ತಾರೆ! ಕವಿಯು ಯಾವದನ್ನು ಮಾಡಲು ಹೊರಟಿಲ್ಲವೋ ಅದನ್ನು ಆತ ಮಾಡಲಿಲ್ಲವೆಂದು ಆಪಾದಿಸುವದಾಗಲಿ, ಸಂತಾಪಿಸುವದಾಗಲಿ ಯಾವ ವಿಚಕ್ಷಣತೆ?

ಆದಿಪುರಾಣ ವಿಕ್ರಮಾರ್ಜುನ ವಿಜಯಗಳ ಜೀವನ ದೃಷ್ಟಿ ಬೇರೆ ಬೇರೆ. ಜೀವನಾನುಭವದಲ್ಲಿ ಈ ಬಗೆಯ ವಿಭಜನೆ ಒಂದೇ ಪ್ರಜ್ಞಾಕೇಂದ್ರದಿಂದ ಬರಬೇಕಾದದ್ದು—ಎಂಬುದರ ಅರಿವು ಪಂಪನಿಗೆ ಇದ್ದಿಲ್ಲವೆಂದು ಪ್ರಬಂಧಕಾರರ ಆಕ್ಷೇಪ. ಇದರ ಅರ್ಥವೇ ಸರಿಯಾಗಿ ಆಗುವದಿಲ್ಲ. ಮಹಾಕವಿಗಳು ತಾವು ಆಯ್ದುಕೊಂಡ ವಸ್ತುವಿನೊಂದಿಗೆ ಸಮರಸವಾಗಿ ಅದರಿಂದ ಹೊಮ್ಮುವ ಭಾವಗಳಿಗೆ ಅಭಿವ್ಯಕ್ತಿ ಕೊಡುವಾಗ ಅದರ ಪ್ರಜ್ಞಾಮೂಲ ಒಂದೇ ಆದಮಾತ್ರಕ್ಕೆ ಈ ಭಾವ ವಿನ್ಯಾಸವೆಲ್ಲವೂ ಏಕಾಕಾರವಾಗಬೇಕೆಂದು ಅಪೇಕ್ಷಿಸುವದೇ? ಇಷ್ಟಾಗಿಯೂ ಪಂಪನ ನೈಜ ಅನುಭವಕ್ಕೆ ಹೊಂದಿಬಂದ ರಸಿಕತೆ ಹೂವು-ಹಣ್ಣುಗಳ ಮೆಚ್ಚು, ಸಂಯತ ಸಂಸ್ಕೃತ ಕಾಮುಕತೆ, ಭೋಗಪ್ರವಣತೆ ಇತ್ಯಾದಿ ಉಭಯ ಕಾವ್ಯಗಳಲ್ಲಿಯೂ ಅಲ್ಲಲ್ಲಿ ಕಾಣಿಸಿಕೊಂಡಿದ್ದುಂಟು. ಅಂದಾಗ ಇಲ್ಲಿ ಕೃತಕ ವಿಭಜನೆ ಏನು ಬಂತು? ಪಂಪ ಮಾಡಲು ಹೊರಟದ್ದು ಆತ್ಮಾನುಭವದ ಶೋಧನೆ, ಅರ್ಥಪೂರ್ಣ ಆವಿಷ್ಕರಣ ಅಲ್ಲ. ಒಂದರಲ್ಲಿ ಲೌಕಿಕ ಇನ್ನೊಂದರಲ್ಲಿ ಜಿನಾಗಮವನ್ನು ನೆಗಳುವ ಸಂಕಲ್ಪ ಅವನದು. ಆ ಕುರಿತು ಆತ ತಟಸ್ಥ. ಅದು ಅಂದಿನ ಜೈನ ಕವಿಗಳ ಮಾರ್ಗ. ಆದರೂ ತುಂಬ ಆತ್ಮಸಂಮೋಹಿತನಾದ ಪಂಪ ತನ್ನ ಅನುಭವದ ಅರ್ಕವನ್ನು ಉಭಯ ಕೃತಿಗಳಲ್ಲಿಯೂ ಅಲ್ಲಲ್ಲಿ ತುಂಬಿದ್ದಾನೆ. ಅದಕ್ಕೂ ಹೆಚ್ಚು ನಾವು-ಅವನಿಂದ ಅವನ ಕಾಲದ ಕವಿಗಳಿಂದ-ಅಪೇಕ್ಷಿಸುವಂತಿಲ್ಲ.

ಅಂದರೆ ತತ್ವತಃ ಪಂಪನ ಉಭಯ ಕಾವ್ಯಗಳಲ್ಲಿ ಅನುಭವದ ವಿಭಜನೆಯಾಗಲಿ, ಮೂಲತಃ ವೈದೃಶ್ಯವಾಗಲಿ ಇರುವದಿಲ್ಲ. ಧರ್ಮಾರ್ಥಕಾಮಗಳ ಕುರಿತು ಅವನು ಇಟ್ಟುಕೊಂಡ ಜೀವನ ಸೂತ್ರದಲ್ಲಿಯೇ ಎರಡೂ ಕಾವ್ಯಗಳನ್ನು ಆತ ಪೋಣಿಸಿದ್ದಾನೆ—ಆಯಾ ಕಾವ್ಯದ ವಸ್ತು-ಸಂವಿಧಾನ-ಮೌಲ್ಯಗಳಿಗೆ ಪ್ರಾಶಸ್ತ್ಯ ಕೊಟ್ಟು. ಏನೇ ಬರೆದರೂ ತನ್ನನ್ನೇ ತೋಡಿಕೊಳ್ಳಲು ಪಂಪನೇನು ಆಧುನಿಕ ಆತ್ಮನಿಷ್ಠ ಕವಿಯಲ್ಲ. ಪಂಪನ "ಮೂಲಭೂತ ಕಾವ್ಯ ಧೋರಣೆ" ಏನೆಂಬುದು ಸ್ಪಷ್ಟವಾಗುವದಿಲ್ಲವೆಂಬ ಟೀಕೆಯೇ ನ್ಯಾಯವಲ್ಲ. ಆತ ಅಂಥ

ಒಂದು ಧೋರಣೆ ಇಟ್ಟುಕೊಂಡು ಕಾರ್ಯ ನಿರ್ಮಿತಿಗೆ ಹೊರಡುವನೇ? ಒಂದೆರಡು ವಿಶಿಷ್ಟ ವಸ್ತುನಿಷ್ಠ ಉದ್ದೇಶಗಳಿಂದ ಆತ ಕಾವ್ಯಪ್ರವೃತ್ತನಾದದ್ದು. ಆದ್ದರಿಂದ ಅವನಲ್ಲಿ ಸಮಗ್ರ ಧೋರಣೆಯ ಅಭಾವವಿದ್ದರೆ ಅದು ಅವನ ಮೇಲೆ ಅಂಥ ಆಪಾದನೆ ಆಗಲಾರದು.

ಅನೇಕ ಸಲ ಅನೇಕ ಕವಿಗಳು ಪ್ರತಿಜ್ಞಾಪೂರ್ವಕವಾಗಿ ತಮ್ಮ ಕೃತಿಯ ಸಂದೇಶವೆಂದು ಸಾರಿದ ತತ್ವವೋ ವಚನವೋ ಆ ಕಾವ್ಯದ ಒಟ್ಟಂದದ ಧ್ವನಿಯಾಗಿ ಮೊಳಗುವದೇ ಇಲ್ಲ!

ಒಂದು ಅಂಶದಲ್ಲಿ ಪ್ರಬಂಧಕಾರರ ಮಾತು ಸತ್ಯ. ನಮ್ಮ ವಿಮರ್ಶಕರು ತಮತಮಗೆ ಯೋಗ್ಯ ಕಂಡಂತೆ ಪಂಪನ ಉಕ್ತಿಗಳನ್ನು ಸಂದರ್ಭದಿಂದ ಬೇರ್ಪಡಿಸಿ ಅವನ್ನು ಅವನ ಸಂದೇಶವೆಂಬುದಾಗಿ ಸಾಕಷ್ಟು ಹೆಣಗಾಡಿದ್ದಾಗಿದೆ. (ಕೆ. ವಿ. ಸುಬ್ಬಣ್ಣರೂ ಈ ಅಂಶವನ್ನು ತಮ್ಮ ಪ್ರಬಂಧದಲ್ಲಿ ಚೆನ್ನಾಗಿಯೇ ವಿಶದಗೊಳಿಸಿದ್ದಾರೆ.) ಅದೇ ರೀತಿ ಇವರೂ ಅತ್ಯಾಧುನಿಕ ವಿಮರ್ಶಾದೃಷ್ಟಿಯಿಂದ ಈ ಪೌರಾಣಿಕ ಕಾವ್ಯಗಳಲ್ಲಿ ವಿಶಿಷ್ಟ ಕಾಲಖಂಡದ ಕಲಾಕೃತಿಗಳಲ್ಲಿ, ಕವಿಯ ಅನುಭವದ ಸ್ವಂತಿಕೆಯ ಅಭಿವ್ಯಕ್ತಿಯನ್ನು ಹುಡುಕಲು ಹೋಗಿ ನಿರಾಶೆಪಟ್ಟು ಅದೊಂದು ನ್ಯೂನವೆಂಬ ನಿರ್ಣಯಕ್ಕೆ ಬಂದಂತಿದೆ! ಏಕೆಂದರೆ ಅನ್ಯೋನ್ಯ ವಿರುದ್ಧ ಮಾತುಗಳನ್ನು ಪಂಪನ ಉಕ್ತಿಗಳಿಂದಲೇ ಎತ್ತಿಕೊಡುವದು ಸಾಧ್ಯವಿದ್ದಾಗ ಅವನ ಜೀವನದೃಷ್ಟಿಯ ಬಗೆಗೆ ಒಂದು ಸಮಗ್ರತೆ ಮೂಡದಿದ್ದರೆ ಆಶ್ಚರ್ಯವಿಲ್ಲ. ಅಂಥ ಕಾವ್ಯಕ್ಕೆ ಅದೊಂದು ಕುಂದೂ ಅಲ್ಲ.

ಪ್ರಬಂಧಕಾರರ ಒಂದು ಮಹತ್ವದ ಪ್ರತಿಪಾದನೆ ಕಲಾದೃಷ್ಟಿಯಿಂದ 'ವಿಕ್ರಮಾರ್ಜುನವಿಜಯ'ಕ್ಕಿಂತ 'ಆದಿಪುರಾಣ'ವೇ ಮಿಗಿಲೆಂಬುದರ ಕುರಿತು. ಅಂದಿನ ಯುಗಧರ್ಮಕ್ಕೆ ವಿಧೇಯವಾಗಿ ಪಂಪನು 'ವೀರ'ವನ್ನೇ ಸ್ಥಾಯಿಯಾಗಿ ಸಮಗ್ರ ಭಾರತವನ್ನು ರೂಪಿಸಿದ್ದರೂ ಆ ವೀರ 'ನಮ್ಮ ಗೂಢ'ವನ್ನು ಸ್ಪರ್ಶಿಸುವದಿಲ್ಲ. ಸಾರ್ವಕಾಲಿಕ ಮೌಲ್ಯಗಳ ನಿರೂಪಣೆ ಆದಿಪುರಾಣದಲ್ಲಿಯೇ ಹೆಚ್ಚು ಕಲಾತ್ಮಕವಾಗಿ ಬಂದಿದೆ ಎಂಬುದನ್ನು ಪ್ರಬಂಧಕಾರರು ಪ್ರಾಮಾಣಿಕವಾಗಿ ಪ್ರತಿಪಾದಿಸಿದ್ದಾರೆ. ವಿಕ್ರಮಾರ್ಜುನವಿಜಯಕ್ಕಿಂತ ಆದಿಪುರಾಣದಲ್ಲಿಯ ಪ್ರಸಂಗಗಳು ಹೆಚ್ಚು ಅಂತರ್ಮುಖಿ. ಅವು ನಮ್ಮ ಅಂತರ್ಯವನ್ನು ಹೆಚ್ಚು ಆಳಕ್ಕೆ ತಟ್ಟುತ್ತವೆ ಎಂದು ಅವರು ಒತ್ತಿಹೇಳಿದ್ದಾರೆ.

ಪ್ರಬಂಧಕಾರರ ವಿಮರ್ಶಾವೈಖರಿಯ ಒಂದು ಪರಿಯನ್ನು ನೋಡಿರಿ: "ಪಂಪ ಕಾವ್ಯಾನುಭವವನ್ನು ನಿಜವಾಗಿಯೂ ಮಹತ್ವದ್ದಾಗಿಸುವ ಪ್ರಕ್ರಿಯೆಯ ಅಗತ್ಯವನ್ನು ಉನ್ನತಮಟ್ಟದಲ್ಲಿ ಅಥವಾ ಸೃಜನಾತ್ಮಕ ಸಂದರ್ಭದಲ್ಲಿ ತನ್ನ

ವ್ಯಕ್ತಿತ್ವ ಸಿದ್ಧತೆ, ಸತ್ವವನ್ನು ಸಾಮರ್ಥ್ಯತೆ(!)ಗಳಲ್ಲಿ ಮಡಿಸಿಕೊಳ್ಳುವ ಅಗತ್ಯವನ್ನು ಅರಿಯದಿರುವದೇ ಇದಕ್ಕೆ ಕಾರಣ.”

ಆದರೆ ಈ ಅರಿವು ಅಗತ್ಯ ಅನಿಸದ ಕವಿಗಳ ಪರಂಪರೆಯಲ್ಲಿ ಪಂಪ ಮೊದಲಿಗನೂ ಅಲ್ಲ, ಕೊನೆಯವನೂ ಅಲ್ಲ. ಇರಲಿ. ಆದರೆ ಹೀಗೆ ತೀರ್ಪು ಕೊಟ್ಟ ಪ್ರಬಂಧಕಾರರೇ ಮುಂದೆ ಹೀಗೂ ತಿಳಿಸುತ್ತಾರೆ: ‘ಆದರೆ ತಾನು ಯಾವುದನ್ನು ಎಷ್ಟನ್ನು ಅಭಿವ್ಯಕ್ತಿಸಲು ಎತ್ತಿಕೊಂಡಿದ್ದಾನೆಯೋ ಅದರ ಮಟ್ಟಕ್ಕೆ ಮಾತ್ರ ಉನ್ನತಮಟ್ಟದ ತಿಳುವಳಿಕೆ ಮತ್ತು ಅಧಿಕಾರವನ್ನು ತೋರುತ್ತಾನೆ.’ ಪಂಪನಂಥ ಪ್ರಾಚೀನ ಮಹಾಕವಿಯಿಂದ ಇದಕ್ಕೂ ಹೆಚ್ಚು ಇನ್ನೇನು ಅಪೇಕ್ಷಿಸಬಲ್ಲೆವು? ‘ಭಾಷೆಯ ಮೇಲೆ ಅದ್ವಿತೀಯ ಪ್ರಭುತ್ವ ತೋರಿಸುತ್ತಾನೆ’ ಎಂದೂ ಯಾವ ರಿಯಾಯತಿಯನ್ನು ತೋರಿಸಲೊಲ್ಲದ ಈ ವಿಮರ್ಶಕರು ಪಂಪನ ಕುರಿತು ನಿರ್ಧಾರವಾಗಿ ಹೇಳುತ್ತಾರೆ. ಆದರೆ ಮತ್ತೆ ಈ ‘ಮಿತಿ’ ಮತ್ತು ‘ಮಹತ್ವ’ಗಳುಳ್ಳ ಈ ಕವಿಗೆ ಶ್ರೇಷ್ಠ ಕವಿಯೆನ್ನಲು ಇವರಿಗೆ ಅನುಮಾನ! ಈ ಶ್ರೇಷ್ಠತೆಯ ಅರ್ಥವ್ಯಾಪ್ತಿಯ ಬಗೆಗೇ ಇವರಿಗೆ ಶಂಕೆ! ಅಂದರೆ ಬಟ್ಟು ಇಲ್ಲವೆಂದಂತೆ? ನಮ್ಮ ಮಟ್ಟಿಗೆ ಮಹತ್ವ ಶ್ರೇಷ್ಠತ್ವಗಳ ಅರ್ಥ ಯಾವಾಗಲೂ ಸಾಪೇಕ್ಷ—ಕವಿಕೃತಿಗಳ ಗುಣಮೌಲ್ಯಗಳ ಸಂದರ್ಭ ಪರಿಮಿತಿಗೆ ಇರಲಿ.

ಸ್ವಯಾರ್ಜಿತ ಅನುಭವ, ಅಭಿವ್ಯಕ್ತಿ, ಅದರ ಬಗೆಗೆ ಶೋಧನೆ ಗೆಲುವುಗಳನ್ನು ಅಳೆಯುವದು ಅರ್ಥಪೂರ್ಣತೆ, ಜವಾಬುದಾರಿ, ಸವಾಲು, ಕಾಳಜಿ, ಸರ್ವಸಾಧ್ಯತೆಗಳ ಮಿಡಿತ ಇತ್ಯಾದಿ ಹೊಸ ಹೊಸ ತೂಕದ ಕಲ್ಲುಗಳಿಂದ ಪಂಪನನ್ನು ತೂಗಿನೋಡಲು ಹೊರಟೂ ಕೊನೆಗೂ ಅವನು ಇಷ್ಟಪಟ್ಟ ಅಭಿವ್ಯಕ್ತಿಯ ಮಟ್ಟದಲ್ಲಿ ಪಂಪನು ಪ್ರಭುತ್ವವನ್ನು ಸ್ಥಾಪಿಸಿದ್ದಾನೆಂತಲೇ ಪ್ರಬಂಧಕಾರರು ತೀರ್ಮಾನಿಸಿದ್ದು ಸಂತೋಷದ ಸಂಗತಿ.

ಆದಾಗ್ಯೂ ಪ್ರಬಂಧದ ಎರಡನೆಯ ಭಾಗದಲ್ಲಿಯ ಸಾನ್ವಯ ವಿಮರ್ಶೆಯೇ ಮೊದಲನೆಯದಕ್ಕಿಂತ ಹೆಚ್ಚು ಯಶಸ್ವಿಯೆನ್ನಬಹುದು. ಬಾಣಭಟ್ಟನು ರಾಜ್ಯಲಕ್ಷ್ಮಿಯನ್ನು ಬಣ್ಣಿಸಿದ ಪ್ರಸಿದ್ಧ ಪದಾವಲಿಯನ್ನು ಪಂಪನು ವಿಶೇಷ ಔಚಿತ್ಯದಿಂದ ಹೊಸ ಹೊಳಪಿನ ಸಾರ್ಥಕತೆಯಿಂದ ಪ್ರಯೋಗಿಸಿದ ಪರಿಯನ್ನು ಮಾರ್ಮಿಕವಾಗಿಯೇ ಎತ್ತಿತೋರಿಸಿದ ಪ್ರಬಂಧಕಾರರು, ‘ಮನೋಹರಿ ರಾಜ್ಯಲಕ್ಷ್ಮಿ’ ಎಂಬ ಪದದಲ್ಲಿ ‘ಹರಿ-ಲಕ್ಷ್ಮಿ’ಯರನ್ನು ಗುರುತಿಸಲು ಹೆಣಗಿದ್ದು ತೀರ ದೂರಾನ್ವಯ (far fetched)ವಾಗಿ ಕಾಣುತ್ತದೆ. ರವಿ ಕಾಣದ್ದನ್ನು ಕವಿ ಕಾಣುವನಂತೆ. ಆದರೆ ಕವಿ ಕಾಣದಿದ್ದನ್ನು ವಿಮರ್ಶಕ ಕಾಣಬಲ್ಲನೆಂಬುದಕ್ಕೆ ಇದೊಂದು ಆ ಮಾದರಿ!

ಆದರೆ ‘ಅಂ’ ಎಂಬುದರ ಸೂಚನೆ (ಅಹಂಕಾರ ನಿರಸನವಾಗಿಲ್ಲವೆಂಬುದಕ್ಕೆ) ಪ್ರಾ. ನಾಯಕರು ಚೆನ್ನಾಗಿಯೇ ವಿಶದೀಕರಿಸಿದ್ದಾರೆ. ಒಂದು ಪದ್ಯದಲ್ಲಿ ಪಂಪನ ಅರ್ಥಭಾರ ಹಾಗೂ ಒಂದು ಪದ್ಯದಲ್ಲಿ ಸನ್ನಿವೇಶ ನಿರ್ವಹಣ—ಇವೆರಡನ್ನು ಅವರು ಮನಮುಟ್ಟುವಂತೆ ವ್ಯಾಖ್ಯಾನಿಸಿದ್ದಾರೆ. ಪ್ರಬಂಧಕಾರರ ಪ್ರಾಯೋಗಿಕ ವಿಮರ್ಶಾ ವಿಚಕ್ಷಣತೆಗೆ ಇಂಥ ಪದ್ಯಗಳ ರಸಪರಿಚಯವೇ ಉತ್ತಮ ಸಾಕ್ಷಿ. ನಿಜವಾಗಿಯೂ ಈ ಬಗೆಯ ವಿಮರ್ಶಾಸಮೀಕ್ಷೆ ಇನ್ನೂ ವಿಪುಲವಾಗಿ ಬರಬೇಕಾಗಿತ್ತು. ಪಾಂಡು-ಮಾದ್ರಿಯರ ಸಂಯೋಗಕ್ಕೆ ಹಿನ್ನೆಲೆಯಾಗಿ ವಸಂತಾಗಮನದ ವರ್ಣನೆ ತನ್ನ ಸಂಕೀರ್ಣ ನೆಯ್ಗೆಯಿಂದ, ಪ್ರಕೃತಿಯೊಳಗಿನ ಸಂಭೋಗಕ್ರಿಯೆಯನ್ನು ಹೇಗೆ ವಿವರವಾಗಿ ತೋರಿಸುವದೆಂಬುದನ್ನು ಪ್ರಬಂಧಕಾರರು ಅತ್ಯಂತ ಹೃದ್ಯವಾಗಿ ವ್ಯಾಖ್ಯಾನಿಸಿದ್ದಾರೆ. ಅವರ ಸಮಗ್ರ ಪ್ರಬಂಧದ ಉತ್ತಮಾಂಶವೇ ಈ ವ್ಯಾಖ್ಯಾನ. ಅಲ್ಲಿಯೂ ಪದಪ್ರಯೋಗ ಪರಿಣತಿಯು ಆಯಾ ಸಂದರ್ಭಕ್ಕೆ ತುಂಬುವ ಅರ್ಥದೀಪ್ತಿಯನ್ನು ಪ್ರಬಂಧಕಾರರು ಪರಿಸ್ಫುಟವಾಗಿ ನಿರೂಪಿಸಿದ್ದು ಪ್ರಾಯೋಗಿಕ ವಿಮರ್ಶೆಗೆ ಒಂದು ಮಾದರಿಯ ವಸ್ತುಪಾಠ. ಪ್ರಥಮದರ್ಜೆಯ ಗ್ರಥನಕೌಶಲ ಮತ್ತು ಅಭಿವ್ಯಕ್ತಿ ಸಾಮರ್ಥ್ಯ ಪಂಪನವೆಂದು ಇಲ್ಲಿ ಪ್ರಬಂಧಕಾರರು ಒಪ್ಪಿಕೊಂಡಿದ್ದಾರೆ.

ಪಂಪನ ಕಲಾಪ್ರೌಢಿಮೆಯ ದೃಷ್ಟಿಯಿಂದ ಈ ಪಾಂಡು-ಮಾದ್ರಿಯರ ಸನ್ನಿವೇಶವನ್ನು ನಮ್ಮ ವಿಮರ್ಶಕರು ತಕ್ಕ ಆಸಕ್ತಿಯಿಂದ ಗುರುತಿಸಿಲ್ಲವೆನ್ನುವಾಗ, ಪಂಪನೂ ಅದನ್ನು ಭಾರತದ ಮಹತ್ವದ ಸನ್ನಿವೇಶಗಳಲ್ಲಿ ಒಂದಾಗಿ ತನ್ನ ಕಾವ್ಯದ ಕೊನೆಗೆ ಪಟ್ಟಿ ಕೊಡುವಾಗ ಸೇರಿಸಿಲ್ಲವೆಂದೂ ಪ್ರಬಂಧಕಾರರು ಟಿಪ್ಪಣಿಸಿದ್ದಾರೆ. ಆದರೆ ಪಂಪನ ಪಟ್ಟಿಯ ಆಯ್ಕೆ ತನ್ನ ಕಲಾಪ್ರೌಢಿಮೆ ಗ್ರಥನಕೌಶಲದ ಬೆಲೆಗೆ ಅನುಗುಣವಾಗಿ ಮಾಡಿದ್ದಲ್ಲ—ಎಂಬುದನ್ನು ಪ್ರಬಂಧಕಾರರು ಮರೆತಂತಿದೆ.

(ಸಶೇಷ)

# ಕವಿ ರುದ್ರಭಟ್ಟನ ರಸಕಲಿಕೆ

ಬೆಟಗೇರಿ ಕೃಷ್ಣಶರ್ಮ

'ಜಗನ್ನಾಥವಿಜಯ' ಎಂಬ ಹೆಸರಿನಿಂದ ಭಾಗವತ ಚಂಪೂಗ್ರಂಥವನ್ನು ರಚಿಸಿದ ಕವಿ ರುದ್ರಭಟ್ಟನು, ಕನ್ನಡ ಪ್ರಾಚೀನ ಕವಿಗಳ ಶ್ರೇಣಿಯಲ್ಲಿ ಮೇಲಿನ ಸ್ಥಾನವನ್ನೇ ಪಡೆದು ನಿಂತವನು; ಆದರೆ ಅವನ ಸ್ಥಳ, ಕಾಲ, ಕುಲ, ಆಶ್ರಯಿತ ರಾಜ ಇವೆಲ್ಲ ವಿಷಯಗಳು ಇದುವರೆಗೂ ಊಹೆಯ ಮೇಲೆಯೇ ನಿಂತಿವೆ. ಕನ್ನಡ ಕವಿಚರಿತ್ರಕಾರರಾದ ದಿವಂಗತ ಆರ್. ನರಸಿಂಹಾಚಾರ್ಯರು, ತಮಗೆ ದೊರೆತ ಕೆಲವು ಐತಿಹಾಸಿಕ ಆಧಾರಗಳಿಂದ ಈ ಕವಿಯ ಕಾಲವು ಕ್ರಿ. ಶ. ೧೧೮೫ ಇರಬಹುದೆಂದು ಹೇಳಿದ್ದಾರೆ. ಅವರಿಗೆ ಈ ಕವಿಯ ಸ್ಥಳ-ಕಾಲಗಳ ಬಗೆಗೆ ವಾಸ್ತವಪ್ರಮಾಣಗಳು ದೊರೆತಂತಿಲ್ಲ. ಷಡಕ್ಷರಿ, ರುದ್ರಭಟ್ಟ, ಲಕ್ಷ್ಮೀಶ ಈ ಮೂವರು ಕವಿಗಳೂ ಸಮಕಾಲೀನರೆಂದು ಸೃಷ್ಟಿತವಾದ ಒಂದು ಕವಿ ಕಥೆಯು, ಪ್ರಕ್ಷಿಪ್ತವು ಪ್ರಮಾಣವೆಂಬುದನ್ನೂ ಕವಿಚರಿತ್ರಕಾರರು ಸಿದ್ಧ ಗೊಳಿಸಿದ್ದಾರೆ.

ಕವಿ ರುದ್ರಭಟ್ಟನು **'ರಸಕಲಿಕೆ'** ಎಂಬ ಹೆಸರಿನ ಲಕ್ಷಣಗ್ರಂಥವನ್ನು ರಚಿಸಿರುವುದಾಗಿ ತಾನಾಗಿ ಹೇಳಿಕೊಂಡ ಮಾತುಗಳು, ಇದುವರೆಗೆ ಎಲ್ಲಿಯೂ ದೊರೆತಿಲ್ಲವಾದರೂ ಕ್ರಿ. ಶ. ೧೫೫೦ರಲ್ಲಿ ಬದುಕಿದ್ದನೆಂದು ತಿಳಿದಿರುವ ಜೈನ ಕವಿ ಸಾಳ್ವನು, ತಾನು ರಚಿಸಿದ **'ರಸರತ್ನಾಕರ'** ಎಂಬ ಗ್ರಂಥದಲ್ಲಿ, ತಾನು ಬಳಸಿಕೊಂಡ ಬೇರೆಬೇರೆ ಕೃತಿಗಳ ಹೆಸರನ್ನು ಹೇಳುವಾಗ, ಕವಿ ರುದ್ರಭಟ್ಟನ ರಸಕಲಿಕೆಯ ಹೆಸರನ್ನೂ ಸೂಚಿಸಿರುವನು. ರುದ್ರಭಟ್ಟನ ತರುವಾಯ ಅನೇಕ ಕವಿಗಳು ಅವನನ್ನು 'ಉಭಯಭಾಷಾಕವಿ'ಯೆಂದು ಹೊಗಳಿದುದರಿಂದ, 'ರಸಕಲಿಕೆ' ಎಂಬ ಅವನ ಗ್ರಂಥವು ಸಂಸ್ಕೃತಭಾಷೆಯಲ್ಲಿ ರಚಿತವಾದುದೆಂದು ಅನೇಕರು ಭಾವಿಸಿದ್ದಾರೆ. ಇದುವರೆಗೂ ಅದನ್ನು ಯಾರೂ ಕಾಣದೆ ಇರುವುದ ರಿಂದ, ಅದರ ಬಗೆಗೆ ಯಾರೂ ಹೇಗೂ ತಮ್ಮ ಊಹೆಗಳನ್ನು ಕುಣಿದಾಡಿಸಿರ ಬಹುದು. ದಿವಂಗತ ಆರ್. ನರಸಿಂಹಾಚಾರ್ಯರ ತರುವಾಯ, ಕನ್ನಡ ಸಾಹಿತ್ಯಪರಿಷತ್ತು ೧೯೬೧ರಲ್ಲಿ ಪರಿಶೋಧಿಸಿ ಪ್ರಕಟಿಸಿದ **ಕರ್ಣಾಟಕ ಕವಿಚರಿತೆಯ ಪ್ರಥಮಸಂಪುಟ**ದಲ್ಲಿಯೂ ರಸಕಲಿಕೆ ನೋಡಲು ದೊರೆತುದುದರ

ಬಗೆಗೆ ಉಲ್ಲೇಖವಿಲ್ಲ. ಅದರಂತೆಯೇ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯು ಸಂಪಾದಿಸಿ ೧೯೭೭ನೆಯ ಇಸ್ವಿಯಲ್ಲಿ ಬೆಳಕಿಗೆ ತಂದ 'ಕರ್ಣಾಟಕ ಕವಿಚರಿತೆಯ ಅನುಕ್ತ ಕೃತಿಸೂಚಿ' ಎಂಬ ಪಟ್ಟಿಯಲ್ಲಿ ಕೂಡ 'ರಸಕಲಿಕೆ'ಯ ಹೆಸರು ಸೇರಿಕೊಂಡಿಲ್ಲ. ಇದೆಲ್ಲವನ್ನೂ ನೋಡಿದರೆ 'ರಸಕಲಿಕೆ' ಕೃತಿಯನ್ನು ಕನ್ನಡ ಸಾಹಿತ್ಯ ಸಂಶೋಧಕರಾರೂ ಕಣ್ಣಾರೆ ಕಂಡಿಲ್ಲವೆಂಬುದು ಸಿದ್ಧವಾಗುವುದು.

ಆದರೆ **'ಷಾಷ್ಟಿಕ ನಾಮಾವಳಿ'** ಎಂಬ ಹೆಸರಿನ ಪುಟ್ಟ ಪುಸ್ತಕವೊಂದನ್ನು ನಾನು ಓದಿದಾಗ, 'ರಸಕಲಿಕೆ' ಎಂಬ ಕವಿ ರಾಮಭಟ್ಟನ ಕೃತಿಯು ಕನ್ನಡದಲ್ಲಿಯೇ ರಚಿತವಾದುದೆಂಬುದೂ ಅದರ ಹಸ್ತಪ್ರತಿಯು ಇನ್ನೂ ಜೀವಿಸಿ ಇರುವುದಾಗಿಯೂ ತಿಳಿದು ನನಗೆ ತುಂಬ ಸಂತೋಷ-ಆಶ್ಚರ್ಯಗಳು ಉಂಟಾದುವು. ಜಗನ್ನಾಥವಿಜಯದಿಂದ ತಿಳಿಯುವ ಕವಿಯ ಜೀವನ ವಿಷಯಕವಾದ ಅನೇಕ ವಾಸ್ತವ ಸಂಗತಿಗಳನ್ನು ರಸಕಲಿಕೆಯಿಂದ ನಾವು ಅರಿತುಕೊಳ್ಳಬಹುದೆಂದು ಮನಸ್ಸು ಆತುರದಿಂದ ಕುಣಿದಾಡಿತು. 'ಕಾವ್ಯಾಲಂಕಾರ' ಎಂಬುದೊಂದು ಮೂರನೆಯ ಕೃತಿ ಕೂಡ ರಾಮಭಟ್ಟಕೃತವೆಂದೂ ಇದರಲ್ಲಿ ಹೇಳಲಾಗಿದೆ.

'ಷಾಷ್ಟಿಕ ನಾಮಾವಳಿ' ಎಂಬ ಪುಟ್ಟ ಪುಸ್ತಕವನ್ನು ಬೆಂಗಳೂರವರೇ ಆದ ಶ್ರೀಮಾನ್ ಬಿಟ್ಟದ ಅನಂತಕೃಷ್ಣಾಚಾರ್ಯರೆಂಬವರು ಬರೆದು ೧೯೫೫ರಲ್ಲಿ ಪ್ರಕಟಿಸಿರುವರು. 'ವಿದ್ವಾನ್' ಮುದ್ರಣಾಲಯದಲ್ಲಿ ಅದು ಅಚ್ಚಾಗಿದೆ. ಮೈಸೂರ ಕರ್ನಾಟಕ ಪ್ರದೇಶದಲ್ಲಿ ಅಲ್ಲಲ್ಲಿ ಹರಡಿಕೊಂಡು ವಾಸಿಸುವ 'ಅರುವತ್ತೊಕ್ಕಲ' ಎಂಬ ಬ್ರಾಹ್ಮಣ ವಿಭಾಗದ ಪೂರ್ವೇತಿಹಾಸದ ಬಗೆಗೆ ಒಂದು ಚಿಕ್ಕ ಪ್ರಬಂಧವನ್ನು ಇದರಲ್ಲಿ ಬರೆದು ಪ್ರಕಟಿಸಿರುವರಲ್ಲದೆ, ತಮ್ಮ ಪಂಗಡಕ್ಕೆ ಸೇರಿದವರಾದ ಕ್ರಿ. ಶ. ೧೮೦೦ರಲ್ಲಿ ಬದುಕಿದ್ದ ಮಲ್ಲಾಬಂಡೆ ಎಂಬ ಮನೆಯ ಹೆಸರಿನ ರಾಘವೇಂದ್ರಪ್ಪ ಎಂಬವರು ರಚಿಸಿದ **'ಸಾರಸ್ವತ ಪರಿಣಯ'** ಎಂಬ ವಿಲಕ್ಷಣ ಪದ್ಯಕಾವ್ಯದ ಪ್ರಾರಂಭದ ಭಾಗವನ್ನೂ ಇದರಲ್ಲಿ ಸೇರಿಸಿದ್ದಾರೆ.[೧] ಕವಿ ರಾಮಭಟ್ಟನು ಷಾಷ್ಟಿಕ ಎಂದರೆ 'ಅರುವತ್ತು ಒಕ್ಕಲ' ಬ್ರಾಹ್ಮಣ ಪಂಗಡಕ್ಕೆ ಸೇರಿದವನೆಂದು ಸಿದ್ಧಮಾಡಲು ಲೇಖಕರು 'ರಸಕಲಿಕೆ' ಕೃತಿಯ ಕೊನೆಯ ಗದ್ಯದ ಅವತರಣಿಕೆಯನ್ನು ಹೀಗೆ ಕೊಟ್ಟಿದ್ದಾರೆ :

---

೧. ಈ ಕಾವ್ಯಭಾಗದಿಂದ ಕವಿಯು ಸಮಕಾಲದ ಅನೇಕ ವ್ಯಕ್ತಿಗಳ ಸಂಗತಿಗಳ ಪರಿಚಯ ನಮಗೆ ದೊರೆಯುತ್ತದೆ.

ಇಲ್ಲಿಯ ವರೆಗೆ ನಿಯಮಬದ್ಧ ಚಂಪಕಮಾಲಿನೀ ವೃತ್ತವಾಗಿದ್ದು ಮುಂದಿನ ಭಾಗ ಗದ್ಯರೂಪದಲ್ಲಿದೆ :

> "ಷಾಷ್ಟಿಕ ಕುಲವಿಭೂಷಣ ಆರಾಧ್ಯಕುಲಕಮಲಮಾರ್ತಾಂಡ
> ರುದ್ರಭಟ್ಟಂ ಪೆಸರ್ವೆತ್ತನುರ್ವಿಯೊಳ್ ವಿದ್ಯುತ್ ಪ್ರಭಾಲಹರಿಯಂತೆ-
> ಸೆಗುಮಾವಗಂ"

(ಈ ಅವತರಣಿಕೆಯಲ್ಲಿ ಏನೇನೋ ಕೈಚಳಕ ನಡೆದಂತೆ ಕಾಣುವುದು. ಮೂಲವನ್ನು ಹುಡುಕಿ ನೋಡಬೇಕು.)

'ಚಕ್ರೇಶ್ವರ ಕುಲದುಹಿತಾ ಮಾಳಲ(ಮಾಲತೀ) ಗರ್ಭಸುಧಾಂಭೋಧಿ ರಾಕಾಸುಧಾಯಮಾನ' ಎಂದಿರುವ ಮೇಲಿನ ಗದ್ಯೋಕ್ತ ವಿಶೇಷಣವು, ಕವಿಯ ತಾಯಿಯ ಹೆಸರು 'ಮಾಳಲದೇವಿ' ಎಂದು ಸೂಚಿಸುತ್ತದೆ. ಈ ಮಾಳಲದೇವಿಯು ಚಕ್ರೇಶ್ವರ ಎಂಬ ಕುಲನಾಮದವನೊಬ್ಬನ ಮಗಳೆಂದು ತಿಳಿಯುತ್ತದೆ. ಬಲ್ಲಾಳನ ಮಾಂಡಲಿಕನಾದ ಮಾಕಿದೇವ ಎಂಬವನು ಕ್ರಿ.ಶ. ೧೨೦೫ರಲ್ಲಿ ಹೊಳಲಕೆರೆ ನಾಡಿಗೆ ಒಡೆಯನಾಗಿದ್ದನೆಂದು ಐತಿಹಾಸಿಕ ಪ್ರಮಾಣಗಳಿವೆ. ಈ ಮಾಕಿಮಯ್ಯನು ಚಕ್ರಿಕುಲಕ್ಕೆ ಸೇರಿದ ಬ್ರಾಹ್ಮಣ(ಷಾಷ್ಟಿಕ)ನಾಗಿದ್ದು ಈತನ ಮಗಳೇ ರುದ್ರಭಟ್ಟನ ತಾಯಿಯೆಂಬುದನ್ನು ಷಾಷ್ಟಿಕ ನಾಮಾವಳಿಯ ಲೇಖಕರು ನಂಬುಗೆಯಿಂದ ಹೇಳಿರುತ್ತಾರೆ; ಈ ಸಂದರ್ಭದಲ್ಲಿ **'ಮೈಗಣ್ಣದೇವ'** ಎಂಬ ಅಜ್ಞಾತಕವಿಯ 'ರನ್ನಗನ್ನಡಿ' ಎಂಬ ಕಾವ್ಯದಲ್ಲಿಯ ಮಾತುಗಳನ್ನು ಪ್ರಮಾಣವಾಗಿ ಕೊಟ್ಟಿದ್ದಾರೆ. ಈ ಮಾಕಿಮಯ್ಯನು ಚಕ್ರದವರು ಎಂಬ ಅಡ್ಡ ಹೆಸರಿನವರಂತೆ.

'ಆರಾಧ್ಯಕುಲಪ್ರದೀಪ' ಎಂಬ ವಿಶೇಷಣವು ಕವಿ ರುದ್ರಭಟ್ಟನ ವಂಶದ ಹೆಸರನ್ನು ಸೂಚಿಸುತ್ತದೆ. 'ಹರಿತಸಕುಲಪಂಕೇರುಹಪದ್ಮಮಿತ್ರ' ಎಂಬ ಮಾತು ಕವಿಯ ಗೋತ್ರವನ್ನು ಹೇಳುತ್ತದೆ. ('ಆರಾಧ್ಯ' ಎಂಬ ಅಡ್ಡ ಹೆಸರಿನ ಅರುವತ್ತೊಕ್ಕಲು ಬ್ರಾಹ್ಮಣರೆಲ್ಲರೂ ಈಗಲೂ ಹರಿತಸ ಗೋತ್ರದವರೇ ಇದ್ದಾರೆ.) 'ಸೋಮಾತ್ಮಜಂ' ಎಂಬುದು ಈತನ ತಂದೆಯ ಹೆಸರನ್ನು ಸಾರುತ್ತದೆ. ಹಿಂದಿನ ಗದ್ಯಾವತರಣಿಕೆಯಿಂದ ಕವಿಯ ಆಶ್ರಿತರಾಜನ ಹೆಸರು, ತಂದೆ-ತಾಯಿಗಳ ಹೆಸರು, ವಂಶ-ಗೋತ್ರಗಳ ಹೆಸರು ಎಲ್ಲವೂ ತಿಳಿದಂತಾಗುವುದು. ರುದ್ರಭಟ್ಟನ ಆಶ್ರಯದಾತನೂ ಅಧಿರಾಜನೂ ವೀರಬಲ್ಲಾಳನೆಂಬುದೂ ದೃಢಪಡುವುದು.

ರುದ್ರಭಟ್ಟನು ತನ್ನ ಜಗನ್ನಾಥವಿಜಯವನ್ನು 'ಚಂದ್ರಮೌಳಿ ಪ್ರಮುಖ ನಿಖಿಲ ವಿದ್ವಜ್ಜನಂ ಮೆಚ್ಚೆ ಪೇಳ್ದೆಂ' ಎಂದು ಘೋಷಿಸಿದ್ದಾನೆ. ರುದ್ರಭಟ್ಟನ

ಕಾಲದ ‘ಚಂದ್ರಮೌಳಿ’ ಎಂಬ ವಿದ್ವಾಂಸನೆಂದರೆ, ಅವನು ವೀರಬಲ್ಲಾಳನ ಮಂತ್ರಿಯಾಗಿದ್ದ ‘ಚಂದ್ರಮೌಳಿ’ ಎಂಬ ಬ್ರಾಹ್ಮಣನೇ ಸರಿ. ಆತನ ಯೋಗ್ಯತೆ ಎಂತಹದೆಂಬುದನ್ನು ಕ್ರಿ. ಶ. ೧೧೮೧ರ ಶ್ರವಣಬೆಳಗೊಳದ ೩೨೭ನೆಯ ಶಾಸನ ಹೀಗೆ ಬಣ್ಣಿಸುತ್ತದೆ:

“ವರತರ್ಕಾಂಬುಜಭಾಸ್ಕರಂ ಭರತಶಾಸ್ತ್ರಾಂಭೋಧಿಚಂದ್ರಂ ಸಮು-
ದ್ಧರಸಾಹಿತ್ಯಲತಾಲವಾಲನೆಸೆದಂ ನಾನಾ ಕಳಾಕೋವಿದಂ
ಸ್ಥಿರಮಂತ್ರಂ ದ್ವಿಜವಂಶಶೋಭಿತನಶೇಷಸ್ತುತ್ಯನುದ್ಯದ್ಯಶಂ
ಧರೆಯೊಳ್ ವಿಶ್ರುತ ಚಂದ್ರಮೌಳಿ ಸಚಿವಂ ಸೌಜನ್ಯಜನ್ಮಾಲಯಂ”

ಚಂದ್ರಮೌಳಿಯು ಬಲ್ಲಾಳರಾಜನ ಸಚಿವನಾಗಿದ್ದನೆಂಬುದು ಐತಿಹಾಸಿಕ ಪ್ರಮಾಣಗಳಿಂದ ಸಿದ್ಧವಾಗಿರುವ ಸಂಗತಿಯೇ ಸರಿ; ಆದರೆ ಈ ಚಂದ್ರಮೌಳಿಯ ಮಗಳಾದ ಶಾರದೆ ಎಂಬವಳು ಕವಿರುದ್ರಭಟ್ಟನ ಹೆಂಡತಿಯೆಂದು, ಪಾಷ್ಟಿಕ ನಾಮಾವಳಿ ಲೇಖಕರು ಖಂಡಿತವಾದ ಮಾತಿನಲ್ಲಿ ಹೇಳಿರುವುದು ಆಶ್ಚರ್ಯವನ್ನು ಉಂಟುಮಾಡುವಂತಹ ಮಾತಾಗಿದೆ. ಇದಕ್ಕೆ ಬಲವಾದ ಐತಿಹಾಸಿಕ ಪ್ರಮಾಣಗಳಾವುವೂ ಇದ್ದಂತಿಲ್ಲ. ಶ್ರೀ ಬೆಟ್ಟದ ಅನಂತಕೃಷ್ಣಾಚಾರ್ಯರು ಇಷ್ಟೊಂದು ಧೈರ್ಯದಿಂದ ಹೇಳಲು ಅವರಿಗೆ ಯಾವ ಪ್ರಮಾಣಗಳು ಬಲವನ್ನಿತ್ತಿವೆಯೋ ಏನೋ! ಪ್ರಮಾಣಕ್ಕಾಗಿ ಅವರು ಚಂದ್ರಮೌಳಿಯ ರಚನೆಗಳೆಂದು ಉಲ್ಲೇಖಿಸಿರುವ ಎರಡೂ ಪದ್ಯಗಳು ಸುಬದ್ಧವಾಗಿಲ್ಲವಾದುದರಿಂದ, ಆವೆರಡೂ ಪದ್ಯಗಳು ಕೃತಕವಾಗಿ ತೋರುತ್ತವಲ್ಲದೆ ಅವರ ವಿಧಾನದ ಬಗೆಗೆ ವಿಚಾರಿಗಳಲ್ಲಿ ಸಂದೇಹ ಹುಟ್ಟಿಸುತ್ತವೆ. ಶ್ರೀ ಬೆಟ್ಟದವರು ಬರೆದುದು ಹೀಗೆ :

“ರುದ್ರಭಟ್ಟನು...ಚಂದ್ರಮೌಳಿಯ ಮಗಳು ಶಾರದಾದೇವಿಯನ್ನು ವಿವಾಹವಾಗಿದ್ದನು. ಚಂದ್ರಮೌಳಿಯು ತನ್ನ ಅಳಿಯನ ವಿದ್ಯಾಪ್ರೌಢಿಮೆಯನ್ನು ಈ ರೀತಿ ಕೊಂಡಾಡಿ ಆಶೀರ್ವದಿಸಿದ್ದಾನೆ :

“ಸಿದ್ಧಾಂತಾದ್ಯಖಿಳಾಗಮಾರ್ಥನಿಪುಣ ವ್ಯಾಖ್ಯಾನ ಸಂಶುದ್ಧಿಯಿಂ
ಶುದ್ಧಾಧ್ಯಾತ್ಮಿಕ ತತ್ತ್ವನಿರ್ಣಯ ವಚೋವಿನ್ಯಾಸದಿಂ ಪ್ರೌಢಿಸಂ
ಬದ್ಧವ್ಯಾಕರಣಾರ್ಥಶಾಸ್ತ್ರ ಭರತಾಲಂಕಾರ ಸಾಹಿತ್ಯದಿಂ
ಬದ್ಧಾತ್ಮೀಯ ಮನೋವಿಕಾಸಬುಧಾಗ್ರಣಿ ರುದ್ರಂ ಜಾಮಾತಾ
ವಿಲಸತ್‌ಕಾಂತಾಸಮೇತಮಿರ್ಕುಂ ಚಿರಂ”

ಚಂದ್ರಮೌಳಿಯು ಕೆಳಗಿನ ವೃತ್ತದಿಂದ ತನ್ನ ಮಗಳು ಶಾರದೆಯ ಜಾಣ್ಮೆಯನ್ನು ಮುಕ್ತಕಂಠದಿಂದ ಹೊಗಳಿದ್ದಾನೆ :

"ಏವಂ ವಿಧಾಸ್ವದೇಶಕಮುಖಸನ್ನುತ ಸನ್ಮತಿ × × ಪ್ರಕಾರಸು-
ತ್ರಮುಚರಿತಾಂಚಿತಂ ಸಕಲಜೀವಹಿತಾಗಮವರ್ಧನೀ ಕೃತೋ-
ತ್ತಮಸಮಲಾತ್ಮಸಪ್ರತಿಪತಂ ವಿಬುಧೇಂದ್ರಮೌಳಿಮಣಿಪ್ರಯೋ
ಕಮಂಭವಾಸ್ಯಪದ್ಮವೇನೆ ಪ್ರೋರ್ವಿದಕೀಂ ಗಡ ಜಾರವೆ (ಪಾಪಿ)
ಮತ್ಸುತೆಯೋಂ ಜಾಣೆಯೋ"

ಮೇಲೆ ಅವತರಣಿಕೆಯಾಗಿ ಬಂದಿರುವ ವೃತ್ತಗಳೆರಡೂ ಯಾವ ಆಕರದಿಂದ ತೆಗೆದುಕೊಂಡವೆಂಬುದನ್ನು ಲೇಖಕರು ಹೇಳಿಲ್ಲ; ಅಲ್ಲದೆ ಎರಡೂ ಪದ್ಯಗಳ ಕೊನೆಯ ಭಾಗಗಳು ಛಂದೋನಿಯಮವನ್ನು ಭಂಗಮಾಡಿದುವಾಗಿವೆ. ರುದ್ರಭಟ್ಟನ ಮಾವ–ಹೆಂಡತಿಯರ ಬಗೆಗೆ ಇಲ್ಲಿ ಹೇಳಿರುವ ವಿಷಯವು ಯುಕ್ತ ಪ್ರಮಾಣಗಳಿಂದ ಕೂಡಿದುದಾಗಿದ್ದರೆ, ಶ್ರೀ ಆಚಾರ್ಯರು ಹೊಸ ರಹಸ್ಯವೊಂದನ್ನು ಹೊರಗೆ ಹಾಕಿದಂತಾಗುತ್ತಿತ್ತು.

ಏನೇ ಆಗಲಿ, ಬಹುಕಾಲಗಳಿಂದ ಕಣ್ಮರೆಯಾಗಿದ್ದ 'ರಸಕಲಿಕೆ'ಯ ಮಾತೃಕೆಯೊಂದು ಈಗಲೂ ಇದೆಯೆಂಬುದನ್ನು ಶ್ರೀ ಬೆಟ್ಟದ ಅನಂತಾಚಾರ್ಯರು ತಮ್ಮ 'ಪಾಷ್ಟಿಕನಾಮಾವಳಿ' ಎಂಬ ಪುಟ್ಟ ಪುಸ್ತಕದ ಮೂಲಕ ಲೋಕದ ಕಣ್ಣೆದುರು ತಂದಿದ್ದಾರೆ. ಈಗ ನಮ್ಮ ಸಂಶೋಧಕ ಪಂಡಿತರು ಆ ಮಾತೃಕೆಯನ್ನು ಹುಡುಕಿ ಹೊರದೆಗೆದು ಲೋಕದ ಕಣ್ಣೆದುರು ಇರಿಸುವುದು ಮುಖ್ಯ ಕರ್ತವ್ಯವಾಗಿದೆ.[೨]

೨. 'ಪಾಷ್ಟಿಕ ನಾಮಾವಳಿ' ಎಂಬ ಪುಸ್ತಕವು ನನ್ನ ಕಣ್ಣಿಗೆ ಬೀಳುವುದಕ್ಕೆ ಕಾರಣರಾದ ನಿವೃತ್ತ ತಹಸೀಲ್ದಾರ್ ಶ್ರೀಮಾನ್ ನರಸಿಂಹ ಆಚಾರ್ಯ ಅವರಿಗೆ ಕೃತಜ್ಞತೆಗಳು.

# ಲಾವಣಿಯ ಸೃಷ್ಟಿ ಮತ್ತು ಪ್ರಸಾರ

ಶ್ರೀರಾಮ ಇಟ್ಟಣ್ಣವರ

ಜನಪದಗೀತೆಗಳಲ್ಲಿ ವೈಯಕ್ತಿಕ ಸೃಷ್ಟಿಯೋ ಸಾಮೂಹಿಕ ಸೃಷ್ಟಿಯೋ ಎಂಬ ವಾದ ಬಹಳ ದಿನಗಳಿಂದ ನಡೆದುಬಂತು. ಅದರಲ್ಲೂ ತುಂಬ ಕ್ಲಿಷ್ಟವಾದ ಈ ಲಾವಣಿಸಾಹಿತ್ಯ ಹೇಗೆ ಸೃಜನಗೊಂಡಿದೆ ಎಂಬ ಬಗೆಗೆ ಕುತೂಹಲ ಸಹಜ. ನಾನು ಲಾವಣಿಗಳನ್ನು ಸಂಗ್ರಹ ಮಾಡುತ್ತಿರುವಾಗ ನನ್ನ ಸಂಗ್ರಹದಲ್ಲಿಯ ಲಾವಣಿಗಳನ್ನು ಓದಿದ ಕೆಲವು ಸಹೃದಯರು ಇವು ಸಾಮೂಹಿಕ ಸೃಷ್ಟಿ ಎಂಬ ಸಂಶಯವನ್ನು ವ್ಯಕ್ತಪಡಿಸಿದರು. ಲಾವಣಿಯ ಕೊನೆಯಲ್ಲಿ ಬರುವ ಹಲವಾರು ಹೆಸರುಗಳು ಈ ಸಂಶಯವನ್ನು ಊರಿದವು. ಸಾಮೂಹಿಕ ಸೃಷ್ಟಿಯೆಂದರೆ ಇವರೆಲ್ಲರೂ ಒಂದೆಡೆ ದುಂಡಗೆ ಕುಳಿತುಕೊಂಡು ಸಮಾಲೋಚಿಸಿ ಕಾವ್ಯ ಕಟ್ಟುತ್ತಿದ್ದರು ಎನ್ನಬಹುದು. ಹಾಗಾದರೆ ಈ ಸಮಯದಲ್ಲಿ ಒಬ್ಬನಿಗೆ ಒಂದು ಶಬ್ದ ಸರಿ ಬರದಿದ್ದರೆ ಮತ್ತೊಬ್ಬ ಕತೆಯ ಒಟ್ಟು ವಸ್ತುವಿನಲ್ಲಿಯೇ ಬದಲಾವಣೆ ಬಯಸಿದರೆ, ಬೇರೊಬ್ಬ ರಸ ನಿರೂಪಣೆಯಲ್ಲಿ ಮಾರ್ಪಾಡು ಸೂಚಿಸಿದರೆ, ತತ್ತ್ವವಿವೇಚನೆಯಲ್ಲಿ ಒಬ್ಬೊಬ್ಬರದು ಒಂದೊಂದು ದಾರಿಯಾದರೆ ಹೆಜ್ಜೆ ಹೆಜ್ಜೆಗೂ ಅಪರಿಹಾರ ಸಮಸ್ಯೆ ತಲೆದೋರಿ ಕಾವ್ಯವೆನ್ನುವುದು ಕಗ್ಗಂಟಾಗಿ ತುತ್ತಿಗೊಂದಾವರ್ತಿ ನೀರು ಬೇಡುವ ಊಟದ ಗತಿಯಾಗಬಹುದಿತ್ತು.

ಲಾವಣಿ ಖಂಡಿತವಾಗಿ ವೈಯಕ್ತಿಕ ಸೃಷ್ಟಿ. ಈ ಲಾವಣಿಗಳಲ್ಲಿರುವ ವಸ್ತು ತಾದಾತ್ಮ್ಯತೆಯನ್ನು ಗಮನಿಸಿದರೆ ಇವು ಸಾಮೂಹಿಕ ಸೃಷ್ಟಿ ಹೇಗಾದಾವು ಅನ್ನಿಸುತ್ತದೆ. ಹಾಡು ಕಟ್ಟುವಲ್ಲಿ ಪಳಗಿದ ಕೈಯ ಕೈವಾಡ ಲಾವಣಿಯುದ್ದಕ್ಕೂ ತೋರುತ್ತದೆ. ಪೂರ್ವಭಾವಿಯಾಗಿ ಕರ್ತೃ ಅನೇಕ ಜನರೊಂದಿಗೆ ಚರ್ಚಿಸಿರಬಹುದು, ತರ್ಕಿಸಿರಬಹುದು. ಅದಕ್ಕೆ ಕಾರಣವೂ ಇದೆ. ಲಾವಣಿಗೆ ಒಳಗೊಳ್ಳುವ ವಸ್ತು ಒಂದೇ ಅಲ್ಲ, ಮೂರು ವಿಧ. ಸಮಕಾಲೀನ ಸಂಗಟ್ಟಿನ ಮೇಲೆ ಕಥಾಲಾವಣಿ ರಚಿಸುವಾಗ ಮಾತ್ರ ಕರ್ತೃ ಒಬ್ಬನೇ ಪೂರೈಸಬಲ್ಲ. ಆದರೆ ಅನುಭಾವ ಲಾವಣಿಗಳ ಮಾತು ಬಂದಾಗ, ಒಂದೇ ಸಂಗತಿ ಬೇರೆಬೇರೆ ಪುರಾಣಗಳಲ್ಲಿ ಹಲವು ತೆರನಾಗಿ ಆಲೋಚನೆಯ ದಾರಿ ತಪ್ಪಿಸುತ್ತಿರುವಾಗ, ಸವಾಲ್-ಜವಾಬ್‌ಗಳ ಸಮಸ್ಯೆ ಹುಟ್ಟಿಕೊಂಡಾಗ ವಿಚಾರ ವಿನಿಮಯ ಅನಿವಾರ್ಯವಾಗುತ್ತದೆ. ನಾವಿಂದು ಒಂದು ಕಾದಂಬರಿಯನ್ನೋ ನೀಳ್ಗತೆಯನ್ನೋ ಬರೆಯಲು ಅನೇಕ ಕಡೆಗಳಿಂದ

ವಿಷಯ ಸಂಗ್ರಹಿಸುತ್ತೇವೆ, ಚರ್ಚಿಸುತ್ತೇವೆ. ಅಷ್ಟೇ ಏಕೆ ಅನೇಕ ವೇಳೆ ಬೇರೆಯವರ ಹಲವಾರು ಯೋಚನೆಗಳು ನಮ್ಮ ಕಾವ್ಯ-ಕಾದಂಬರಿಗಳಲ್ಲಿ ಸೇರಿಕೊಂಡು ಅಲ್ಲಿ ಕೇವಲ ಶಬ್ದಸಂಯೋಜನ, ವಾಕ್ಯವಿನ್ಯಾಸ ಮಾತ್ರ ನಮ್ಮದಾಗಬಹುದು. ವಸ್ತುಸ್ಥಿತಿ ಹೀಗಿದ್ದರೂ ನಾವು ಅದಕ್ಕೆ ಸಾಮೂಹಿಕ ಅನ್ನುವುದಿಲ್ಲ. ಅದು ನಮ್ಮ ಸ್ವಂತದ್ದು, ವ್ಯಕ್ತಿಗತ.

ಲಾವಣಿಕಾರ ಅನೇಕ ಪರಿಕರಗಳ ಮುಖಾಂತರ ಒಬ್ಬನೇ ಕಾವ್ಯ ನಿರ್ಮಿಸುತ್ತಾನೆ. ಲಾವಣಿ ನಿರ್ಮಾಣಗೊಂಡರೆ ಮುಗಿಯಲಿಲ್ಲ ಅಥವಾ ಕೇವಲ ವಾಚನ ಮಾಡಿದರೆ ಲಾವಣಿ ಏನನ್ನೂ ಸಾಧಿಸಿದಂತಾಗಲಿಲ್ಲ. ಇದು ಕೃತಾರ್ಥವಾಗುವುದು ಒಬ್ಬರ ಬಾಯಲ್ಲಿ ಹಾಡಾಗಿ ಮೂಡಿನಿಂತಾಗ. ಲಾವಣಿಯ ಒಂದು ಪ್ರಮುಖವಾದ ಲಕ್ಷಣವೆಂದರೆ ಇದು ಹಾಡುಗಬ್ಬ. ಕಂಠದಿಂದ ಕಂಠಕ್ಕೆ ಊರಿನಿಂದ ಊರಿಗೆ ಪ್ರಸಾರವಾಗುತ್ತ ಹೋದಾಗ ಹುಟ್ಟಿದ್ದಕ್ಕೆ ಸಾರ್ಥಕ. ಲಾವಣಿ ಹುಟ್ಟಿಕೊಳ್ಳುವುದು ಎಂಥ ಒಂದು ಪ್ರಮುಖವಾದ ಘಟ್ಟವೋ ಅದನ್ನು ಹಾಡಿ ಅದರ ಅಂತಿಮ ಅವಸ್ಥೆ ಕಾಣಿಸುವುದೂ ಅಷ್ಟೇ ಪ್ರಮುಖವಾದ ಮತ್ತೊಂದು ಘಟ್ಟ. ಈ ಸಂಬಂಧದಲ್ಲಿ ಕೃತಿಕಾರನ ಸುತ್ತ ಅನೇಕ ಹಾಡುಗರಿರುತ್ತಾರೆ. ದಿನವೂ ಇವನೊಂದಿಗೆ ಕೂಡಿ ವಾದವಿವಾದಗಳನ್ನು ಮಾಡುವುದರಿಂದ, ಇವನ ಹಾಡುಗಳನ್ನು ಅವರು ಸಭೆಗೆ ಒಯ್ಯುವುದರಿಂದ ನಾನು-ತಾನೆಂಬ ಭೇದ ಕಲ್ಪನೆ ಹೋಗಿ ಅವರ ಹೆಸರನ್ನೂ ಕೊನೆಯಲ್ಲಿ ಪವಣಿಸುತ್ತಾನೆ. ಹೆಚ್ಚಾಗಿ ನಮಗೆ ಸಿಗುವುದು ಜೋಡಿ ಕವಿಗಳ ಹೆಸರುಗಳು. ಯಂಕ-ಅಣ್ಣಾರಾಮ, ಮಾದು-ಪುಲ್ಲಾರಾಮ, ರುದ್ರ-ಇರಪಣ್ಣ, ಎಲ್ಲ-ಅಣ್ಣಾರಾಮ ಮುಂತಾದವರನ್ನಿಲ್ಲಿ ಉದಾಹರಿಸಬಹುದು. ಇಲ್ಲಿಯೂ ಅಷ್ಟೆ, ಒಂದೊಂದು ಹಾಡು ಕಟ್ಟುವಾಗಲೂ ಒಬ್ಬೊಬ್ಬರದು ಸಿಂಹ ಪಾಲು ಇದ್ದೇ ಇರುತ್ತದೆ ಎಂಬ ಮಾತನ್ನು ಮರೆಯಬಾರದು. ಒಂದು ಹಾಡನ್ನು ಯಂಕಣ್ಣ ಕಟ್ಟುವಾಗ ಅಣ್ಣಾರಾಮ ಪರಿಕರಗಳನ್ನು ಒದಗಿಸಿರಬಹುದು ಅಥವಾ ಅಣ್ಣಾರಾಮ ಕಟ್ಟುವಾಗ ಯಂಕಣ್ಣ ಪರಿಕರಗಳನ್ನು ಒದಗಿಸಿರಬಹುದು.

ಇನ್ನು ಹಾಡಿನ ಕೊನೆಯಲ್ಲಿ ಬರುವ ಗುರುವಿನ ಹೆಸರನ್ನು ಗಮನಿಸಬೇಕು. ಒಂದೊಂದು ಗುಂಪಿಗೆ ಗುರುವಾಗಿ ಒಬ್ಬ ವ್ಯಕ್ತಿ ಇರುತ್ತಿದ್ದು, ಅವನಿಗೆ 'ವಸ್ತಾದ' ಎಂದೂ ಕರೆಯುತ್ತಿದ್ದರು. ಅವನು ಜೀವಿಸಿರಲಿ ಬಿಡಲಿ, ಅವನ ಹೆಸರನ್ನು ಉಳಿಸಿಕೊಂಡು ಋಣಶೇಷವನ್ನು ತೋರಿಸಿಕೊಡುವ ಭಕ್ತಿಯ ಭಾವ ಇವರದು. ಇನ್ನು ಆಧಾರಗಳಿಂದ ಮೇಲಿನ ಎಲ್ಲ ಮಾತುಗಳನ್ನು ಸಮರ್ಥಿಸಬಹುದು.

ತಾಳ ಮೇಳ ಒಳೆ ಸುದ್ದ ಹೊಂದಿಸಿ
ಗುರಪಾದ ಮಾಡಿದ ಹೊಸಕವಿತಾ

ಭಾವದಿಂದ ಬಸಲಿಂಗ ಜಾವಜಾವಕ ಬಲಭೀಮನ್ನ
ಸೇವಾ ಮಾಡಿ ಸದ್ಗತಿ ಹೊಂದಿದ

ಅಚ್ಚ ಒತ್ತಿದಾಂಗ ಕಾಸ ಮುನಸೂರ ಸಾಬ
ಮಾಡಿದ ಕವಿ ಚೆಂದಾ

ಮೇಲಿನ ಮೂರೂ ಹಾಡುಗಳಲ್ಲಿ ಕರ್ತೃ ಒಬ್ಬನೇ ತೋರುತ್ತಾನೆ. ಇದು ಕೇವಲ ಒಬ್ಬನ ಸೃಷ್ಟಿ.

ಮಮದಾಪೂರಾ ದಕ್ಕಣದೊಳಗ ರಾಜಸಿರಿಯ ಹವಳಾ
ಲಾಡ್ಲೆ ಸಾಯಿಬ ಗುರುವ ಸ್ವಾಮಿ ಪ್ರಸನ್ನಾದ ನಿವಳಾ
ಗುಲಾಬಸ್ಯಾ ವಸ್ತಾದ ಅಮೀಸ್ಯಾ ಗುರುವ ರತ್ನದ ಕಳಾ
ನೂರಕ್ಕೊಬ್ಬ ಭಕ್ತ ಸಾವಿರಕೊಬ್ಬ ಶರಣ ಇರತದಾನ ವಿರುಳಾ
ಮಲ್ಲಾಲಾಡು ಹಿಂಗ ಹೇಳತಾರ ಜಮಾಸ್ಯಾವ ತಾಳಾ
ಪೀರಸಾಹೇಬನ ಅಕ್ಷರ ಕೇಳಿ ವೈರಿ ಆದ ಹೋಳಾ
ಗೋವಿಂದಗೂಳಿ ಕವೇಸುರನ ದಾಟ
ನಿಮ್ಮ ಉತ್ತ್ರಾ ಕೊಡತೀವ ಆಗಿಂದಾಗ ಕಟ್ಟಿ
ಮಮ್ಮದ ಜೀರು ಸಂತ ಪರಸುರಾಮ ಶಂಭು ಅಂದ ಸ್ವಾಮಿಯ ಲೀಲಾ

ಮಮದಾಪೂರದ ಲಾವಣಿಯಲ್ಲಿ ಇಷ್ಟದೇವತೆಯ ಹೆಸರು, ಕವಿಯ ಹೆಸರು, ಹಾಡುವವರ ಹೆಸರು ಉಕ್ತಗೊಂಡಿವೆ. ಗೋವಿಂದಗೂಳಿ, ಕವಿಯಾಗಿ ತನ್ನ ಹೆಸರು ಉಳಿಸಿಕೊಂಡು ಕೊನೆಯಲ್ಲಿ ತನ್ನ ಗುಂಪಿನವರ ಹೆಸರನ್ನೂ ಉಲ್ಲೇಖಿಸಿದ್ದಾನೆ.

ಇನ್ನು ಕೆಳಗಿನ ಲಾವಣಿಗಳಲ್ಲಿ ಕೇವಲ ಗುರುವಿನ ಹೆಸರು ಮತ್ತು ಅವನ ಶಿಷ್ಯರ ಹೆಸರುಗಳು ಹೇಳಲ್ಪಟ್ಟಿವೆ :

ಯಾದವಾಡ ಸ್ಯಾರ ಜಾಯಿರ
ನೆನದ ಬಸವೇಸೂರ
ಭಕ್ತಿಯಿಟ್ಟ ಪೂರಾ
ಧರ್ಮಣ್ಣಾ ವಸ್ತಾದಗ ಯಾರು ಇಲ್ಲ ಎದುರಾ
ರಾಮಚಂದ್ರ ಹುಸೇನಿ ಕವಿ, ಕಲ್ತ ಹಾಡು ಮಂದಿ ರಗಡ ಒಟ್ಟೇತಿ!

ಮದರಕಂಡಿ ಕರ್ನಾಟಾ
ಹುಸೇನಸಾಬ ಮತಿಯ ಕೊಟ್ಟಾ
ಕವಿ ಎಲ್ಲ ಅಣ್ಣಾರಾಮ ಸಬಾದಾಗ ಹೇಳತಾರ ಹಿಂಗ

ಗುರು ಇರಬದ್ರಪ್ಪನ ಶಿಷ್ಯಾ
ರುದ್ರ-ಇರಪಣ್ಣ-ಚನಬಸೂನ
ಹಾಡಾ ಕೇಳಿದರ ಬಹು ಹಸನಕಟ್ಟಾ

ಗಮನಿಸಬೇಕಾದ ಮತ್ತೊಂದು ಪ್ರಮುಖವಾದ ಮಾತೆಂದರೆ, ಗುರುವಿನ ಪಕ್ಷವನ್ನೇ ಶಿಷ್ಯ ಸ್ವೀಕರಿಸುತ್ತಾನೆ. ಗುರು ಹರದೇಶಿ ಇದ್ದರೆ ಶಿಷ್ಯನೂ ಹರದೇಶಿ ಅಥವಾ ಅವನು ನಾಗೇಶಿ ಇದ್ದರೆ ಇವನೂ ನಾಗೇಶಿ. ಈ ಸಂಪ್ರದಾಯವನ್ನು ಮೀರಿ ಮತ್ತೊಂದು ಪಕ್ಷವನ್ನು ಹಿಡಿಯುವುದೆಂದರೆ ಗುರುವಿಗೆ ದ್ರೋಹಮಾಡಿದಂತೆ ಎಂಬ ನಂಬಿಗೆ. ಹೀಗೆ ಕಟ್ಟುನಿಟ್ಟಾಗಿ ಒಂದು ಪಕ್ಷ ಹಿಡಿದು ಹಾಡು ಕಲಿಯುತ್ತಿರುವಾಗ ಆಯಾ ಪಕ್ಷದ ಒಂದೊಂದು ಗುಂಪೇ ನಿರ್ಮಾಣವಾಗುತ್ತವೆ. ಅಷ್ಟೇ ಏಕೆ ಈ ಊರು ಹರದೇಶಿ ಪಕ್ಷದ್ದು, ಈ ಊರು ನಾಗೇಶಿ ಪಕ್ಷದ್ದು ಎನ್ನುವಷ್ಟರ ಮಟ್ಟಿಗೆ ಪ್ರಖ್ಯಾತವಾದುವು.

ಕಾಕತಿ ಊರ ವೋಜಿನ ಶಾರ ಸಿದ್ದೇಸೂರ ಜ್ಞಾನಕೊಟ್ಟ
ಕವಿಮಾಡಿ ಹಾಡೂದ ದರ ಯಾವತ್ತು
ನಾಗೇಶಿ ಮ್ಯಾಳ ನಾವು ಕೂಡಿ ನಿತ್ಯೇವು ನಿಮ್ಮ ಜ್ಞಾನ ಮಾಡಿ
ನಿಮ್ಮ ಕಡಿ ಬೇಡ್ತೀವ ಜ್ಞಾನದ ಗಣಿ

ತೇರದಾಳ ಊರ ಗಂಡ ಮೆಟ್ಟಾ
ನಾಗೇಶವರದ ನಡ್ಯಾದಿಲ್ಲ ಆಟಾ
ನಾಗೇಶವರ ಬರತಾರ ಒಳೆತಾಟಾ
ಬರಿ ಹತ್ತಾಣ ಹೋಗತಾರ ಹೊಂಟಾ

ಇವೆರಡೂ ಅಗಮಗಳಲ್ಲಿ ಕಾಕತಿ ಮತ್ತು ತೇರದಾಳಗಳು ಕ್ರಮವಾಗಿ ನಾಗೇಶಿ ಮತ್ತು ಹರದೇಶಿ ಪಕ್ಷಗಳಿಗೆ ಮೆಟ್ಟುಗಳಾಗಿವೆ. ಒಂದೇ ಊರಿನಲ್ಲಿ ಹರದೇಶಿ–ನಾಗೇಶಿ ಎರಡೂ ಪಕ್ಷಗಳಿದ್ದುದುಂಟು. ಅಥಣಿ ಇದಕ್ಕೆ ಒಳ್ಳೆಯ ಉದಾಹರಣೆ.

ಹರಿಹರದಾಸರ ದಪ್ಪ ನುಡುವತಾವ ಅಥಣಿಪುರ ತಾಲುಕದೊಳಗ
ಯಂಕ-ಅಣ್ಣಾರಾಮ ಮಾಡು-ಪುಲ್ಲಾರಾಮ ರುದ್ರಮುದ್ರ ಸುದ್ದ ಅಂದ್ರೊ ಕವಿ
ಅಥಣಿ ಮುಂದ ಕಟ್ಟತೊ ಪರಸಿ
ದಡಾ ತುಂಬಿ ಹರುವತಾಳ ಕಾಸಿ
ಸಿದ್ರಾಮ ಭೈರಿ ಮುತ್ತಿನ ರಾಶಿ
ವಿದ್ದೆ ಕೊಡಾಂವ ನನ್ನ ಮೇಲೆ ಆಶಿ
ಕ್ಯಾಮ ಸತ್ತೆಣ್ಣಾ ಅಕ್ಷರ ಸೂಸಿ
ನೀ ಕೇಳಾಕೊ ಹರದಾಸಿ
ಕ್ಯಾಮ, ಸತ್ತೆಣ್ಣಾ,ಅಪ್ಪಣ್ಣಾ ಮೂರುಮಂದಿ ಹರದಾಸಿದ ಎಬಸ್ಯಾರ ಗೋಳಾ

ಮೊದಲಿನ ಅಗಮ ಹರದೇಶಿ ಪಕ್ಷವನ್ನು ಹೇಳುತ್ತಿದ್ದರೆ ತರುವಾಯ ಬಂದುದು ನಾಗೇಶಿಯನ್ನು ಸಾರುತ್ತಿದೆ. ಲಕ್ಷಿಸಿ ನೋಡಿದರೆ ಯಾವೊಬ್ಬ ವ್ಯಕ್ತಿಯ ಹೆಸರೂ

ಎರಡೂ ಪಕ್ಷಗಳಲ್ಲಿ ವ್ಯಕ್ತವಾಗಿಲ್ಲ. ಇವರೆಲ್ಲ ಒಂದೊಂದು ಪಕ್ಷಕ್ಕೆ ಗಟ್ಟಿ ಮುಟ್ಟಾಗಿ ಅಂಟಿಕೊಂಡವರು.

'ಆತಿ ನಾಡದ ಆರ್‍ಯಾರ ಪೋರಿ ಮೀರಿದಾಕಿ ಜಗಳಾ ತಗವುದಕ' ಎಂಬ ಬನ್ಹಟ್ಟಿಯ ಲಾವಣಿಯಲ್ಲಿ ಜಗಳಗಂಟಿ ನಾಗೇಶಿ 'ಆರ್‍ಯಾರ ಪೋರಿ' ಯಾಗಿದ್ದಾಳೆ. ಇವಳ ಸೊಕ್ಕನ್ನು ಯಾರು ಮುರಿದರು ಎಂದುವನ್ನು ಕವಿ ಕೊನೆಯ ಭಾಗದಲ್ಲಿ ಉಲ್ಲೇಖಿಸಿರುವುದರಿಂದ ನಮ್ಮ ಪ್ರಸ್ತುತ ಚರ್ಚೆಗೆ ಇದು ತುಂಬ ಸಹಾಯಕ.

**ಸರಬಿ ತುಳದ ಹರದಾರ ಹುಡಗೂರ**
**ಗೋಕಾಂವಿ ಹರದೇಶವರ ನಾಡಾಗ ಜಾಜಿರ**
**ಹಾಡೂದರೊಳಗ**
**ಕವಡಿ ಪೋಣಿಸ್ಯಾರ ಇವಳ ಮೂಗಿನ್ಯಾಗ ॥**
**ತೇರದಾಳ ಹುಡಗೂರ ಆಗ್ಯಾರ ಒಳೆ ಹುರಿ**
**ನೋಡಿ ಇವಳ ಮಾರಿ**
**ಒದ್ದಾರ ಕುಂಡಿ ಮ್ಯಾಗ**
**ಜಗಳಾ ಬಿಟ್ಳ ಅಂತ ಆಣೆಕೊಡತಾಳ ಲಗು ಆಗ ॥**
**ಬನ್ನಟ್ಟಿ ಊರ ಮೋಜಿನ ಸ್ಯಾರ**
**ಕಾಡದೇವರ**
**ಬಿದ್ದಾಳ ಪಾದ ಮ್ಯಾಗ**
**ಸಂಬಾ ಕಡ್ಯಾಕ ಮೂಡ ಇದರಾಗ**
**ಹುಸೇನಸಾಬ ವಸ್ತಾದ ಕವಿಮಾಡಿ ನಾಗಿನ ಒದ್ದ ಒಡ್ಯಾನ ತಮ್ಮ ರಾಜೇಕ**

ಮೇಲಿನ ಈ ಲಾವಣಿ ಭಾಗದಿಂದ ತಿಳಿದುಬರುವ ಸಂಗತಿಯೆಂದರೆ ಗೋಕಾಕ, ತೇರದಾಳ, ಬನ್ಹಟ್ಟಿ ಊರುಗಳು ಹರದೇಶಿ ಪಕ್ಷವನ್ನು ವಹಿಸಿ ಸುತ್ತಲೆಲ್ಲ ಪ್ರಸಿದ್ಧಿ ಪಡೆದಿದ್ದವು.

ಈ ರೀತಿ ಸಾಹಿತ್ಯಕೃಷಿ ಮಾಡುವ ಇವರು ಒಂದು ಜಾತಿಯವರಲ್ಲ. ಎಲ್ಲ ಜಾತಿಯ ಜನರಿಗೂ ಇಲ್ಲಿ ಸ್ಥಳಾವಕಾಶವುಂಟು ಲಿಂಗಾಯತ, ಹರಿಜನ, ಬ್ರಾಹ್ಮಣ, ಮುಸಲ್ಮಾನರು ಇವರೆಲ್ಲ ನೀಡಿದ್ದು ತಮ್ಮದೇ ಆದ ಕೊಡುಗೆ. ಹೀಗೆ ಯಾವುದೇ ರೀತಿಯ ಜಾತ್ಯಾಂಧತೆಗೆ ಮನಸ್ಸುಮಾಡದೆ ಹಗಲಿರುಳು ದುಡಿದುದರಿಂದ ಇಷ್ಟೊಂದು ಫಸಲು ನಾಡಿನತುಂಬ ದೊರೆಯಲು ಸಾಧ್ಯವಾಯಿತು. ಲಾವಣಿಯ ತೀರ ಪ್ರಾರಂಭದ ಕಾಲದಲ್ಲಿ ಹೆಣ್ಣುಮಕ್ಕಳು ಸಭೆಗೆ ಹೋಗಿ ಹಾಡುತ್ತಿರಲಿಲ್ಲ ವಂತೆ, ಇವರು ಹಾಡಲು ಪ್ರಾರಂಭಿಸಿದ್ದು ಇತ್ತೀಚೆ (ಅಂದರೂ ೫೦ ವರ್ಷಗಳಿಂದ ಈಚೆ). ಈಗ ಸುಮಾರು ೫೦ ವರ್ಷಗಳ ಹಿಂದೆ ಯಂಕಂಚಿಯ ರುಕುಮಾ ಬಾಯಿ ಎಂಬವಳು ಚೆನ್ನಾಗಿ ಹಾಡುತ್ತಿದ್ದಳು ಎಂದು ಯಾದವಾಡದ ರಾಮಚಂದ್ರ

ಸೇಂದಮಾನೆ ಹೇಳುತ್ತಾರೆ. ಒಡೆಯರ ಹೆಣ್ಣುಮಗಳೊಬ್ಬಳು (ಹೆಸರು ನೆನಪಿಲ್ಲ) ಅದೇ ಸುಮಾರಿಗೆ ಹಾಡುತ್ತಿದ್ದಳಂತೆ. ಈಗಲೂ ಕೃಷ್ಣಾ, ಘಟಪ್ರಭಾ ನದಿಗಳ ದಂಡೆಗುಂಟ ಸಾಕಷ್ಟು ನಾಗೇಶಿಯರಿದ್ದಾರೆ. ಬಬಲೇಶ್ವರ, ಕೆಸರಗೊಪ್ಪ, ಮಹಾಲಿಂಗಪೂರ, ಮಾಚಕನೂರ ಮುಂತಾದ ಊರುಗಳಲ್ಲಿ ನಾಗೇಶಿ ಪಕ್ಷವನ್ನು ವಹಿಸಿ ಹೆಣ್ಣುಮಕ್ಕಳು ಹಾಡುತ್ತಾರೆ. ಗಂಡು-ಹೆಣ್ಣು, ಉಚ್ಚಕುಲ-ನೀಚಕುಲ ಇವೆಲ್ಲವುಗಳಿಗೆ ಸಾಹಿತ್ಯದ ಹೆಸರಿನಲ್ಲಿ ಬೆಲೆಯಿಲ್ಲ. ಕಲೆಗೆ ಯಾರಾದರೇನು? ಯೋಗ್ಯತೆ ಮುಖ್ಯ. ಅರ್ಹತೆಯುಳ್ಳವರೆಲ್ಲರಿಗೂ ಈ ಮನೆಯಲ್ಲಿ ಪ್ರವೇಶವುಂಟು.

*　　　*　　　*

ಜನಪದದ ಬಹಳಷ್ಟು ಸಾಹಿತ್ಯ ಪ್ರಕಾರಗಳಂತೆ ಲಾವಣಿಯೂ ಅನಕ್ಷರಸ್ಥರಿಂದಲೇ ಜನ್ಮತಾಳಿತೆ? ಎಂಬುದು ಮತ್ತೊಂದು ಪ್ರಶ್ನೆ. "ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್" ಎಂದು ಒಂಬತ್ತನೆಯ ಶತಮಾನದಲ್ಲಿ ಕವಿರಾಜಮಾರ್ಗಕಾರ ಹೇಳಿದ್ದು ಜನಪದ ಕವಿಗಳನ್ನು ಕುರಿತಾದರೂ ಈ 'ಪರಿಣತ ಮತಿಗಳಲ್ಲಿ' ಲಾವಣಿಕಾರರೂ ಇದ್ದಾರೆಯೇ ಎಂಬುದು ಆಲೋಚಿಸಬೇಕಾದ ವಿಷಯ. ಕವಿರಾಜಮಾರ್ಗ ಉತ್ಪತ್ತಿಯಾದ ಹೊತ್ತಿನಲ್ಲಿ ಲಾವಣಿಯು ಜನಪದ ಸಾಹಿತ್ಯದ ಒಂದು ಗೀತರೂಪವಾಗಿತ್ತು ಎಂಬುದಕ್ಕೆ ಆಧಾರಗಳಿಲ್ಲ. ಎಷ್ಟೇ ಪ್ರಯತ್ನಪಟ್ಟರೂ ಲಾವಣಿಯ ಹುಟ್ಟು ೯ನೆಯ ಶತಮಾನಕ್ಕೆ ಹೋಗಲಾರದು ಎಂದಾಗ, ಕವಿರಾಜಮಾರ್ಗಕಾರನ ದೃಷ್ಟಿಯಲ್ಲಿದ್ದವರು ಬೇರೆ ಜನಪದಕವಿಗಳೇ ಹೊರತು ಲಾವಣಿಕಾರರಲ್ಲ.

ಜನಪದಕವಿಗಳೆಲ್ಲ ಅನಕ್ಷರಸ್ಥರು ಎಂಬ ತೀರ್ಮಾನವನ್ನು ಅನೇಕ ವಿದ್ವಾಂಸರು ಕೊಟ್ಟಿದ್ದಾರೆ. "ಜನಪದ ಗೀತಗಳು ಅನಕ್ಷರಸ್ಥ ಸಮಾಜದ ಕಾವ್ಯ ಮತ್ತು ಸಂಗೀತಗಳ ಸಮಾಗಮವಾಗಿವೆ. ವಾಕ್‌ಸಂಪ್ರದಾಯದಲ್ಲಿ ಉಳಿದುಬಂದ ಈ ಪ್ರಕಾರದಲ್ಲಿ ಗೀತಗಳು ಹಾಗೂ ಲಾವಣಿಗಳು ಬಹು ಮುಖ್ಯವಾದ ವಿಭಾಗಗಳು"೧, "ಜನಪದ ಕಾವ್ಯ ಚಿರಂಜೀವವಾಗಿರುವುದು ಪ್ರತಿಭೆಯ ಗುರುಬಲದಿಂದ. ಜಾನಪದಕವಿಗಳು ಕುಳಿತಾಗಲಿ ಕುರಿತಾಗಲಿ ಓದಿದವರಲ್ಲ; ಓದಿದವರೇ ಅಲ್ಲ. ವ್ಯಾಕರಣಾಲಂಕಾರ ಛಂದಶ್ಶಾಸ್ತ್ರಗಳ ಅಭ್ಯಾಸವಂತೂ ದೂರವೇ ಉಳಿಯಿತು. ಅವರದು ದಿಟವಾಗಿ ಹಂಗೆ ಬಳಪದ ಹಿಡಿಯದೊಂದಗ್ಗಳಿಕೆ, ಪದಪಿಟ್ಟುಳಿಪದೊಂದಗ್ಗಳಿಕೆ! ಇಷ್ಟಾದರೂ ಅವರಿಂದ ಬಂತು ನಿರ್ಮಲವಾದ ಅದ್ಭುತವಾದ ಕಾವ್ಯ, ಇದರಂಥ ಸೋಜಿಗ ಮತ್ತೊಂದಿಲ್ಲ"೨.

---

೧. ಡಾ. ಹಾ. ಮಾ. ನಾಯಕ—ಸುವರ್ಣಸಂಚಯ, ಪುಟ: ೨೭.
೨. ಸಿ. ಪಿ. ಕೃಷ್ಣಕುಮಾರ—ಜಾನಪದ ಪ್ರತಿಭೆ, ಪುಟ: ೧೭.

ಲಾವಣಿಗಳು ನೀಳ್ಗೀತೆಗಳು ಎಂಬುದನ್ನು ಮೊಟ್ಟಮೊದಲು ಮನವರಿಕೆ ಮಾಡಿಕೊಳ್ಳಬೇಕು. ಒಂದೊಂದು ಭಾವವನ್ನು ತ್ರಿಪದಿ, ಚೌಪದಿಯಲ್ಲಿ ಹಿಡಿದಿಡುವಂಥ ಕಾವ್ಯಗಳು ಕನ್ನಡ ಜನಪದಸಾಹಿತ್ಯದಲ್ಲಿ ರಾಶಿರಾಶಿಯಾಗಿವೆ. ಇಂಥವುಗಳನ್ನು ಬೇಕಾದರೆ ಅನಕ್ಷರಸ್ಥರು ರಚಿಸಿದರು ಎಂದರೆ ಒಪ್ಪತಕ್ಕ ಮಾತು. ಪುಟ್ಟದ ಇಂಥ ಪದ್ಯ, ತಕ್ಷಣ ಸಂಗೀತಕ್ಕೆ ಅಳವಡುತ್ತದೆ(ಧಾಟಿಯನ್ನು ಮೊದಲು ಅನುಸರಿಸಿಯೇ ಹುಟ್ಟುತ್ತಿದ್ದರೂ ಆಶ್ಚರ್ಯಪಡಬೇಕಾಗಿಲ್ಲ). ಹೀಗೆ ಕರ್ಣಾಕರ್ಣವಾಗಿ ಜನ ಕೇಳಿ ನೆನಪು ಹಿಡಿಯಲು ಈ ಚಿಕ್ಕಚಿಕ್ಕ ಪದ್ಯಗಳು ಅನುಕೂಲ. ಆದರೆ ಇಂಥ ಸೌಲಭ್ಯ ಲಾವಣಿಗಿಲ್ಲ. ಸುದೀರ್ಘವಾದ ಈ ಲಾವಣಿಗಳನ್ನು ಯಾವ ಪೂರ್ವಭಾವಿ ಅಭ್ಯಾಸವಿಲ್ಲದೆ ಕಟ್ಟುತ್ತಿದ್ದರು ಎಂಬ ಮಾತಾಗಲಿ, ರಚನೆಯು ಕಾಲಕ್ಕೆ ಲಿಖಿಸುತ್ತಿರಲಿಲ್ಲ ಎಂಬ ಹೇಳಿಕೆಯಾಗಲಿ ಅಷ್ಟೊಂದು ಸಾಧುವಾಗಿ ತೋರಲಾರದು. ಕೆಲವೊಂದು ಲಾವಣಿಗಳಂತೂ ಎಂಟು ಹತ್ತು ಪುಟಗಳಷ್ಟು ದೀರ್ಘವಾಗಿದ್ದು ಸಾಕಷ್ಟು ಛಂದೋವೈವಿಧ್ಯಗಳನ್ನು ಒಳಗೊಂಡಿವೆ. ಇಂಥ ಲಾವಣಿಗಳನ್ನು ಕರ್ತೃ ಹಾಗೇ ಕುಳಿತು ಹೇಳುತ್ತಿದ್ದ ಎಂದಾಗಲಿ, ಎದುರಿಗೆ ಕುಳಿತವರು ಅವನ್ನು ನೆನಪಿನಲ್ಲಿ ಹಿಡಿದು ಮುಂದೆ ಹಾಡುತ್ತಿದ್ದರು ಎಂದಾಗಲಿ, ಊಹಿಸುವುದು ಎಷ್ಟರಮಟ್ಟಿಗೆ ಉಚಿತವಾದೀತು ಎಂಬುದನ್ನು ಕಲ್ಪಿಸಿಕೊಳ್ಳಬಹುದು. ಮೇಲಾಗಿ ಅನೇಕ ಲಾವಣಿಗಳು ಪುರಾಣಗಳಲ್ಲಿ ಹುದುಗಿರುವ ಸಂಗತಿಗಳನ್ನು ಬಯಲಿಗೆಳೆಯುವುದರಿಂದ, ಚರ್ಚಿಸುವುದರಿಂದ ತೀರ ಗಹನವಾದ ಆಧ್ಯಾತ್ಮ ವಿಷಯಗಳನ್ನೂ ಅವು ಅರಗಿಸಿಕೊಂಡಿರುವುದರಿಂದ ಲಾವಣಿ ಕೃತಿಕಾರರು ಸ್ವಲ್ಪವಾದರೂ ಓದಿರಬೇಕು ಎನ್ನುವ ಸಂಶಯ ಬಲವಾಗುತ್ತದೆ.

ಈ ಕುರಿತು ಡಾ. ಬಿ. ಎಸ್. ಗದ್ದಗಿಮಠ ಅವರು : "ದುಂದುಭಿ, ದುಂದುಮೆ ಹಾಗೂ ಲಾವಣಿಗಳನ್ನು ರಚಿಸಿ ಹಾಡಿದ ಕವಿಗಳು ತೀರ ನಿರಕ್ಷರಿಗಳಿದ್ದಂತೆ ಕಾಣುವುದಿಲ್ಲ. ಹಾಗಿದ್ದರೂ ಕನ್ನಡ ಮನೆಯ ಸಂಸ್ಕೃತಿಯನ್ನುಂಡು ಅರಗಿಸಿ ರಸಕವಿಗಳಾಗಿ ಪದಗಳನ್ನು ರಚಿಸಿ ಹಾಡಿದ್ದು, ಓದುಗರಿಗೆ ಎನಿಸದಿರದು."[೨] ಎಂದು ಮಾಡಿದ ಊಹೆ ಸರಿ. ಲಾವಣಿಕಾರರು 'ನಿರಕ್ಷರಿಗಳು' ಎನ್ನುವುದಕ್ಕಿಂತ 'ಹೆಚ್ಚು ಕಲಿತವರಾಗಿರಲಿಲ್ಲ' ಎಂದರೆ ಸರಿಹೋದೀತು. ಶಿಕ್ಷಣ ಪ್ರಸಾರ ಆ ಕಾಲಕ್ಕೆ ಅಷ್ಟಾಗಿ ಇರಲಿಲ್ಲ. ಹಳ್ಳಿಯ ವಿದ್ಯಾಭ್ಯಾಸದ ಮಟ್ಟ ಎಷ್ಟೋ ಅಷ್ಟು, ಸುಮಾರಾಗಿ ೩ನೆಯ ತರಗತಿ ಹೆಚ್ಚೆಂದರೆ ೫-೬ನೆಯ ತರಗತಿಗೆ ಮುಗಿಯುತು. ಆದರೆ ಇಂದಿನ ಶಿಕ್ಷಣಕ್ಕೆ ಆ ವರ್ಗಗಳನ್ನು ಖಂಡಿತ ಹೋಲಿಸಕೂಡದು. ಅನೇಕ ಪುರಾಣ, ಶಾಸ್ತ್ರ, ಇತಿಹಾಸಗಳನ್ನು ಸುಲಭವಾಗಿ ಗ್ರಹಿಸುವ ಶಕ್ತಿ ಅವರಲ್ಲಿದ್ದಿತು.

೨. ಕನ್ನಡ ಜಾನಪದ ಗೀತೆಗಳು, ಪುಟ : ೯೬.

ಇಂದು ಇಪ್ಪತ್ತನೆಯ ಶತಮಾನದ ಕೊನೆಯ ಅಂಚಿನಲ್ಲಿರುವ ನಮಗೆ ಓದಲು ಸಾಕಷ್ಟು ಕಾದಂಬರಿ, ಕಥೆ, ಪ್ರಬಂಧ, ಭಾವಗೀತೆಗಳಿವೆ. ಆದರೆ ನೂರು ವರ್ಷಗಳ ಹಿಂದೆ ನಮ್ಮವರು ಏನು ಓದುತ್ತಿದ್ದರು? ಹೊಸಗನ್ನಡ ಅದೇ ಆಗ ಕಣ್ತೆರೆಯುತ್ತಿದ್ದ ಕಾಲ. ಸರಳಗನ್ನಡದಲ್ಲಿ ಅಥವಾ ಗದ್ಯದಲ್ಲಿ ಹುಟ್ಟಿಕೊಂಡಿದ್ದ ಗ್ರಂಥಗಳನ್ನು ಓದುವ ಹವ್ಯಾಸ ನಮ್ಮ ಅಂದಿನ ಸಾಮಾನ್ಯ ಜನತೆಗಿತ್ತು. ದಾಸರ ಪದಗಳು, ಶಿವಶರಣರ ವಚನಗಳು, ಮಹಾಲಿಂಗರಂಗ, ನಿಜಗುಣಶಿವಯೋಗಿ, ಸರ್ವಭೂಷಣ ಶಿವಯೋಗಿಗಳಂಥ ದಾರ್ಶನಿಕರ ಸಾಹಿತ್ಯ, ನಮ್ಮ ಜನಮನದ ಮೇಲೆ ಆಳವಾದ ಪ್ರಭಾವ ಬೀರಿತ್ತು. ಅದರಲ್ಲೂ ಭಜನೆಯಲ್ಲಿ ದಾಸರ ಪದಗಳನ್ನು ನಿಜಗುಣ ಶಿವಯೋಗಿಗಳ ತತ್ವಗಳನ್ನು ದಿನವೂ ಹಾಡುತ್ತಿದ್ದ ಜನಕ್ಕೆ ಅವುಗಳ ಪ್ರಭಾವದಿಂದ ಹೊರಗುಳಿಯುವುದು ಅಸಾಧ್ಯವಾಗಿತ್ತು. ಅನುಭಾವ ಲಾವಣಿಗಳಲ್ಲಿ ಈ ಪ್ರಭಾವ ನಿಚ್ಚಳವಾಗಿ ಮೂಡಿಸಿಂತಿದೆ. ಸರಳಗನ್ನಡದಲ್ಲಿ ನಿರ್ಮಾಣಗೊಂಡ ಮಹಾಭಾರತ, ರಾಮಾಯಣಗಳನ್ನಂತೂ ದಿನನಿತ್ಯ ಚಿಮಣಿಯ ಬೆಳಕಿನಲ್ಲಿ ಓದುತ್ತಿರಬೇಕು. ಅದನ್ನು ಬಿಟ್ಟು ಲಾವಣಿಕಾರರು ಏನನ್ನೂ ಓದುತ್ತಿರಲಿಲ್ಲವೆಂಬುದು, ಓದದೇ ಅವರು ಇಂಥ ಕಾವ್ಯ ನಿರ್ಮಿಸಿದರೆಂಬುದು ಅವರ ಮುಗ್ಧಮನೋಭಾವನೆಯನ್ನೇ ಲಕ್ಷ್ಯದಲ್ಲಿಟ್ಟುಕೊಂಡು ಪಕ್ಷಪಾತ ಮಾಡಿದಂತಾಗುತ್ತದೆ.

ಲಾವಣಿಕಾರರು ಪೂರ್ವಭಾವಿಯಾಗಿ ಸಾಕಷ್ಟು ಗ್ರಂಥಗಳನ್ನು ಓದುತ್ತಿದ್ದರು ಎಂಬುದನ್ನು ದೃಢೀಕರಿಸುತ್ತವೆ ಕೆಳಗಿನ ಸಾಲುಗಳು :

**ನಿರಾಕಾರದಾಗ ಹೆಣ್ಣು ಇಲ್ಲ ಅಂತ ಮೂಲಸ್ತಂಬದಾಗ ಬರದsತಿ**
**ಗಂಟಿಯು ಲೆಕ್ಕಾ ಗಟ್ಟಿಸಿ ಹೇಳತೀನ ಪುರಾಣದ್ದ ಸರಾ ವಾಲಿಮುಖಾ**
**ನಾರದ ಪುರಾಣದಾಗ ಹಿಂಗ ಬರದsತಿ ಅನಸೂಯಾನ ಕತಿ ಆಖ್ಯಾನಾ**
**ಇದನ್ನು ಗರ್ಭಕಾಂಡ ನೋಡಿದವನೆ ಬಲ್ಲ**
**ನಾನಾ ಶಾಸ್ತ್ರದಾಗ ಹುಡುಕ್ಯಾಡಿ ತಗದನ ಈ ಅಂತಾ**
**ಮೂಲಸ್ತಾಂಬ ಪುರಾಣದಾಗ ಇದ್ದಂತಾ ಮಾತಾ**

ಇಲ್ಲಿ ಮೂರನೆಯದಾದ 'ನಾರದ ಪುರಾಣ'ವು ೧೮ ಮಹಾಪುರಾಣಗಳಲ್ಲಿ ಒಂದಾದ 'ನಾರದೀಯ ಪುರಾಣ'ವಾಗಿರಬೇಕು. ಉಳಿದ ಮೂಲಸ್ತಂಭ ಪುರಾಣ, ವಾಲಿಮುಖಾ (ವಾಲ್ಮೀಕಿ) ಪುರಾಣ, ಗರ್ಭಕಾಂಡ ಪುರಾಣಗಳು ಉಪಪುರಾಣಗಳು. ಪುರಾಣಗಳನ್ನು ಹೆಸರಿಸಿ ಹೇಳುವ ಈ ರೀತಿಯನ್ನು ನೋಡಿದರೆ ಖಂಡಿತವಾಗಿ ಇವರು ಈ ಎಲ್ಲ ಪುರಾಣಗಳನ್ನು ಓದಿರಬೇಕು ಎನಿಸುತ್ತದೆ. ಕೊನೆಯಲ್ಲಿ ಬರುವ "ನಾನಾ ಶಾಸ್ತ್ರದಾಗ ಹುಡಕ್ಯಾಡಿ ತಗದನ" ಎನ್ನುವ ಮಾತಂತೂ ಅವರ ಓದು, ಅಕ್ಷರ ಜ್ಞಾನಗಳನ್ನು ಖಚಿತಪಡಿಸುತ್ತದೆ. ಅವರು ಸ್ವಲ್ಪವರೂ ಓದಿದ್ದರೂ ಅಕ್ಷರ

ಜ್ಞಾನ ಅವರಿಗಿತ್ತು ಎಂಬುದಕ್ಕೆ ಈ ರೀತಿ ಸಾಲಾಗಿ ಇನ್ನೂ ಅನೇಕ ಉದಾಹರಣೆಗಳನ್ನು ಕೊಡಬಹುದು.

ಲಾವಣಿಗಳನ್ನು ಹೆಣ್ಣುಮಕ್ಕಳು ಹಾಡುತ್ತಿದ್ದರು, ಆದರೆ ಬರೆದುದನ್ನು ಎಲ್ಲಿಯೂ ಕಾಣಲಿಲ್ಲ. 'ಓದದೇ ಕಾವ್ಯ ಕಟ್ಟಿದರೆ?' ಎಂಬ ಪ್ರಶ್ನೆಗೆ ತಕ್ಕಮಟ್ಟಿಗೆ ಉತ್ತರವನ್ನು ಈ ದಿಶೆಯಲ್ಲಿ ದೊರಕಿಸಿಕೊಳ್ಳಬಹುದು. ಪುರುಷರೇ ಶಿಕ್ಷಣವನ್ನು ಅಷ್ಟಾಗಿ ಇಚ್ಛಿಸದ ಅಂದಿನ ದಿನಮಾನಗಳಲ್ಲಿ ಸ್ತ್ರೀಯಂತೂ ಅದಕ್ಕೆ ಬಹುದೂರ. ಹೀಗಾಗಿ ಓದು-ಬರೆಹ ಬಾರದ ಅವಳು ನೆನಪಿಟ್ಟುಕೊಂಡು ಹಾಡು ಹೇಳಲು ಕಲಿತಳೇ ಹೊರತು, ಸೃಜನಶಕ್ತಿ ಅವಳಿಗೆ ಕರಗತವಾಗಲಿಲ್ಲ. ಅಥವಾ ಪೂರಕವಾಗಿರಬೇಕಾದ ಓದು-ಬರೆಹಗಳ ಕೊರತೆಯಿಂದಾಗಿ ಲಾವಣಿಸಾಹಿತ್ಯ ಹೆಣ್ಣುಮಕ್ಕಳಿಂದ ಹುಟ್ಟಿಕೊಳ್ಳಲಿಲ್ಲ ಎನ್ನಬೇಕು.

ಲಾವಣಿ ನಿರ್ಮಾಣಗೊಂಡ ಮೇಲೆ ಇವುಗಳನ್ನು ಕಲಿತು ಹಾಡುವವರೆಲ್ಲ ಅಕ್ಷರಸ್ಥರೇ ಇರಬೇಕೆಂಬ ನಿಯಮವಿಲ್ಲ. ನಿರಕ್ಷರಿಗಳೂ ಹೇರಳವಾಗಿ ಸಿಗುತ್ತಾರೆ, ಈ ಮೊದಲು ಹೇಳಿದಂತೆ. ಆದರೆ ವಸ್ತಾದ ಮಾತ್ರ ಕಲಿತವನಿರುತ್ತಿದ್ದ. ವಸ್ತಾದ ಬರೆದ ಲಾವಣಿಗಳನ್ನು ಹಾಡುಗರು, ಅಕ್ಷರಜ್ಞಾನವುಳ್ಳವರ ಕೈಯಲ್ಲಿ ಕೊಟ್ಟು ಅವರಿಂದ ಹೇಳಿಸಿಕೊಂಡು ಕ್ರಮೇಣ ಕಲಿಯುತ್ತಿದ್ದರು, ಮನನಮಾಡುತ್ತಿದ್ದರು. ಅಂತೂ ಲಾವಣಿಗಳು ಕೇವಲ ಕಂಠಸ್ಥವಾಗಿಯೇ ಇರುತ್ತಿರಲಿಲ್ಲ, ಒಂದು ಕಡೆಗೆ ಬರೆದು ಸಂಗ್ರಹಿಸಿಡುತ್ತಿದ್ದರು ಎನ್ನುವುದು ಸುಳ್ಳಲ್ಲ. ಸಂಗ್ರಹಿಸಿಟ್ಟಿರುವ ಇಂಥ ಅನೇಕ ಹೊತ್ತಗೆಗಳನ್ನು ನಾನು ಕಂಡಿದ್ದೇನೆ.

ಅಶಿಕ್ಷಿತ ಕವಿಗಳೂ ಅಲ್ಲಲ್ಲಿ ಬೆರಳುಮೇಲೆ ಎಣಿಸುವಷ್ಟಿದ್ದಿರಬೇಕು. ಆದರೆ ಕೇವಲ ನೆನಪಿನ ಮುಖಾಂತರವೇ ಇವರು ಕಾವ್ಯಕಟ್ಟಿದರು, ನೆನಪಿನ ಮುಖಾಂತರವೇ ಇವರ ಶಿಷ್ಯರೆಲ್ಲ ಕಲಿತರು ಎಂಬುದು ಸರಿಯಲ್ಲ. ಇಂಥವರು ಲಿಪಿಕಾರನೊಬ್ಬನನ್ನು ಮುಂದೆ ಕೂಡ್ರಿಸಿಕೊಂಡು ಹೇಳುತ್ತ ಹೋಗುತ್ತಿದ್ದಿರಬೇಕು. ಹೀಗೆಂದಮಾತ್ರಕ್ಕೆ ಎಲ್ಲರೂ ಹೀಗೆಯೇ ಮಾಡುತ್ತಿದ್ದಿರಬೇಕೆ? ಎಂಬ ಸಂಶಯ ಸಹಜ. ಇಲ್ಲ, ಓದಿ ವಿಷಯ ಸಂಗ್ರಹಿಸುವುದಕ್ಕೆ, ಬರೆಯುವುದಕ್ಕೆ ಕಾರಕೂನನಂತೆ ಒಬ್ಬೊಬ್ಬ ವ್ಯಕ್ತಿಯನ್ನು ಇಟ್ಟುಕೊಂಡಿದ್ದರು ಎಂದರೆ ಅಪಾರವಾಗಿ ಹಬ್ಬಿನಿಂತಿರುವ ಲಾವಣಿಸಾಹಿತ್ಯ, ಈ ಹೊತ್ತಿನಲ್ಲಿ ಎದ್ದುನಿಲ್ಲುವುದು ಸಾಧ್ಯವಾಗುತ್ತಿರಲಿಲ್ಲ.

ಇವರು ಓದದೇ ಇಂಥ ಉತ್ಕೃಷ್ಟ ಸಾಹಿತ್ಯವನ್ನು ನಿರ್ಮಿಸಿದರು ಎನ್ನುವಾಗಿನ ಮಹತಿ, 'ಹಲವಾರು ಕಡೆಗಳಲ್ಲಿ ಓದಿ ಇಂಥ ಸಾಹಿತ್ಯ ಸೃಷ್ಟಿಸಿದರು'

ಎಂಬಲ್ಲಿ ಬರುಷ್ಟವಿಲ್ಲ ಎಂಬುದು ಒಪ್ಪತಕ್ಕ ಮಾತಾದರೂ ಶೈಲಿಗೆ ನಿಕೃಷ್ಟ ಭಾಷಾಶಿರೀಕದಲ್ಲಿ ಸತ್ವವನ್ನು ಮರೆಮಾಚಿ ಕಿರೀಟವಿಡುವುದು ತಪ್ಪು. ಯಾಕೆ ಓದಿದ್ದರು ಅಂದರೆ ಅವರಿಗೆ ಅಪಮಾನವೇನು? ಅವರು ನಿರ್ಮಿಸಿದ ಸಾಹಿತ್ಯ ನಿಕೃಷ್ಟವಾಯಿತೆ? ಆಯುಷ್ಯದ ಅರ್ಧಭಾಗವನ್ನು ಓದಿನಲ್ಲೇ ಕಳೆದ ಮಹನೀಯರ ಗ್ರಂಥ-ಕಾವ್ಯಗಳನ್ನಿಂದು ಮೆಚ್ಚುತ್ತೇವೆ, ತಲೆಯಮೇಲಿಟ್ಟುಕೊಂಡು ಕುಣಿಯುತ್ತೇವೆ. ‘ಓದಿ ಬರೆದರು’ ‘ವಿಷಯ ಸಂಗ್ರಹಿಸಿ ಬರೆದರು’ ಎಂಬಂಥ ಯಾವ ಮಾತನ್ನೂ ಅವರಿಗೆ ಆರೋಪಿಸುವುದಿಲ್ಲ, ನಾವು ಮೆಚ್ಚುವುದು ಕಾವ್ಯಶಕ್ತಿಯನ್ನು. ಹಾಗೆಯೇ ಇವರನ್ನು ಮೆಚ್ಚಬೇಕು. ತುಂಬಿನಿಂತಿರುವ ಧ್ವನಿ, ಮನಂಬುಗುವ ಪದಗುಚ್ಛ, ಸಂದರ್ಭೋಚಿತ ಅಲಂಕಾರ—ಇವೆಲ್ಲ ಲಾವಣಿಯಲ್ಲಿ ತೊಟ್ಟಿಕ್ಕುವ ಜೇನಹನಿಗಳಾಗಿವೆ. ಇವರ ಅಮೋಘ ಕಾವ್ಯಶಕ್ತಿ ಅನೇಕ ಪರಿಕರಗಳ ಹಿನ್ನೆಲೆಯಲ್ಲಿ ತೋರ್ಪಡುವುದಕ್ಕೆ ಪ್ರತಿಭೆಯೆಂಬುದು ಅವಶ್ಯ ಬೇಕು. ಈ ಪ್ರತಿಭೆ ಲಾವಣಿಕಾರರಿಗೆ ದೈವದತ್ತ ಎನ್ನುವಮಟ್ಟಿಗೆ ನೇರ, ಸಮರ್ಪಕ. ‘ಕುಂತಕುಂತಲ್ಲೆ ಕವಿ ಜಾಹಿರಿ’,‘ನಿಮ್ಮ ಉತ್ತರಾ ಕೊಡತೀವ ಆಗಿಂದಾಗ ಕಟ್ಟಿ’ ಎಂಬಂತಹ ಮಾತುಗಳು ಅವರ ಪ್ರತಿಭಾಶಕ್ತಿಯ ಮೇಲೆ ಬಂಗಾರದ ಗೆರೆ ಎಳೆಯುತ್ತವೆ.

* * *

ಲಾವಣಿಗಳನ್ನು ಹಾಡಿ ಪ್ರಸಾರ ಮಾಡುವವರು ವೃತ್ತಿಗಾಯಕರೆ? ಎಂಬುದು ಮುಂದಿನ ಪ್ರಶ್ನೆ. ಲಾವಣಿ ಹಾಡಿ ಹೊಟ್ಟೆಹೊರೆಯುವ ಗಾಯಕರು ಎಲ್ಲೋ ಒಬ್ಬಿಬ್ಬರಿರಬಹುದು. ಆದರೆ ಇಡೀ ಲಾವಣಿ ಸಂಪ್ರದಾಯ, ವೃತ್ತಿಗಾಯಕರಿಂದಲೇ ನಡೆಯುತ್ತದೆಯೆಂಬುದು ಸಂಶಯಾಸ್ಪದ ವಿಷಯ. ಗೊಂದಲಿಗರನ್ನು ತೆಗೆದುಕೊಳ್ಳಿ, ಹಾಡು ಹೇಳಿ ಹೊಟ್ಟೆ ತುಂಬಿಕೊಳ್ಳುವುದು ಒಂದು ಉದ್ಯೋಗ ಅವರಿಗೆ. ಆಮಂತ್ರಣ ಕೊಟ್ಟರೆ ರಾತ್ರಿಯುದ್ದಕ್ಕೂ ಗೊಂದಲ ಹಾಕುತ್ತಾರೆ ಇವರು. ಅದು ಒಂದುರಾತ್ರಿ ಮುಗಿದರೆ ಮತ್ತೆ ಬೇರೊಂದು ರಾತ್ರಿಯ ಆಮಂತ್ರಣ ಬರುವವರೆಗೆ ಇವರು ಸುಮ್ಮನೆ ಕೂಡುವುದಿಲ್ಲ ಅಥವಾ ಬೇರೆ ಉದ್ಯೋಗವನ್ನು ಮಾಡುವುದಿಲ್ಲ. ಊರಲ್ಲಿ ಹಗಲುಹೊತ್ತು ಮನೆಮನೆಗೆ ಹೋಗಿ, ಹಾಡಿ ಕಾಳನ್ನೋ ಹಣವನ್ನೋ ಬೇಡಿ ಜೀವನ ಸಾಗಿಸುತ್ತಾರೆ. ಆದರೆ ಲಾವಣಿಕಾರರ ರೀತಿ ಹಾಗಲ್ಲ. ಒಂದು ಲಾವಣಿಗೋಷ್ಠಿ ಮುಗಿದ ತರುವಾಯ ಮರುಗೋಷ್ಠಿಗಾಗಿ ಕಾಯುತ್ತ ಸುಮ್ಮನೇ ಕೂಡುವುದಿಲ್ಲ. ಈ ಹಾಡುಗಾರರಿಗೆ ಒಕ್ಕಲುತನ, ನೇಕಾರಿಕೆ ಮುಂತಾಗಿ ಮತ್ತೆ ಬೇರೆ ಉದ್ಯೋಗಗಳಿರುತ್ತಿದ್ದವು. ವಿಶೇಷ ಉತ್ಸವಗಳಲ್ಲಿ ಮಾತ್ರ ನಡೆಯಬೇಕಾಗಿದ್ದ ಈ ಗೋಷ್ಠಿಗಳ ಮೇಲೆಯೇ ಜೀವನ ನಿರ್ವಹಣೆ ಎಂದರೆ ಸಾಧ್ಯವಾಗುತ್ತಿರಲಿಲ್ಲ. ಉಳಿದ ದಿನಗಳಲ್ಲೆಲ್ಲ ನಿರುದ್ಯೋಗಿ

ಗಳಾಗಿರದೆ ತಮ್ಮತಮ್ಮ ಮನೆತನದ ಉದ್ಯೋಗಗಳಿಗಂಟಿಕೊಂಡಿರುತ್ತಿದ್ದರು. ಅವಿಭಕ್ತಕುಟುಂಬಗಳಲ್ಲಿಯಂತೂ ಇದು ಅನಿವಾರ್ಯ.

ಕೆಲವು ವಸ್ತಾದರು ಮಾತ್ರ ಇದೇ ಉದ್ಯೋಗಕ್ಕೆ ಅಂಟಿಕೊಂಡಿದ್ದರಂತೆ. ಲಾವಣಿ ರಚಿಸುವುದು, ಗುಂಪುಕಟ್ಟಿ ಹಾಡು ಕಲಿಸುವುದನ್ನು ಮಾಡುತ್ತ ಜೀವನ ಸಾಗಿಸುತ್ತಿದ್ದರೆಂಬುದನ್ನು ಕೆಲವರು ಹೇಳಿದ್ದಾರೆ. ಹಾಡುವವರು ಮಾತ್ರ ಬೇರೆ ಬೇರೆ ಉದ್ಯೋಗ ಮಾಡುತ್ತಿದ್ದರು. ಯಾದವಾಡದ ರಾಮಚಂದ್ರ ಮಟ್ಟಿ ಹೊಲಿಯುತ್ತಾರೆ, ಜಮೀನೂ ಇದೆ. ಇವರ ತಂದೆ ಧರ್ಮಣ್ಣ ಹಾಡುತ್ತಿದ್ದರು. ತಮ್ಮ ಮನೆತನದ ಉದ್ಯೋಗವೇ ಇವರಿಗೆ ಮುಖ್ಯ ಉದ್ಯೋಗವಾಗಿತ್ತು. ಮೋತಿಲಾಲ, ಕೊರ್ತಿಯ ಮಲ್ಲಪ್ಪ ಒಕ್ಕಲುತನ ಮಾಡಿ ಬದುಕು ಸಾಗಿಸುತ್ತ ಪ್ರಸಂಗಾವಧಾನವಾಗಿ ಹಾಡಿದವರು. ಅದಿಲ್ಲದಿದ್ದರೆ ಅನ್ನ ಸಿಗುವುದಿಲ್ಲ ಎನ್ನುವ ಪರಿ ಇವರದಲ್ಲ. ದುಡಿಮೆಯ ಮಧ್ಯೆ ಇದೊಂದು ಹವ್ಯಾಸ ಇವರಿಗೆ—ಹುಚ್ಚು ಎನ್ನುವ ಮಟ್ಟಿಗೂ, ಹಾಡುವವರ ಜೀವನ ಕೇವಲ ಲಾವಣಿಯ ಮೇಲೆಯೇ ಅವಲಂಬಿಸಿರಲಿಲ್ಲ, ಕಲೆಗಾಗಿ ಅದರ ಬೆನ್ನುಹತ್ತಿದವರು ಎಂಬುದನ್ನು ನಿಶ್ಚಯಿಸುತ್ತದೆ ಒಂದು ಲಾವಣಿಯ ಈ ಭಾಗ:

**ಮೋಜ ಮಾಡಿ ಬಿಡೋನ ಹೋಗ್ರಿ ಇಂದsಎಲ್ಲಾ**
**ನಾಳಿ ಇದ್ದೀನಂಬೂದೇನ ಭರೋಸಿಲ್ಲಾ**
**ಮೋಜ ಮಾಡಿದ ರೋಜ ನನಗ ಬೇಕಾಗಿಲ್ಲಾ**
**ಅದರ ವ್ಯಾಗ ಹೊಟ್ಟಿ ಹ್ವಾರಿ ಮಾಡಾಂವಲ್ಲಾ**
**ಗುರು ಮಾಲಿಂಗನ ಕರುಣ ಬಲಾ**
**ಇರುತನಾ ಯಾ ಮಗನಂಜೀಕಿಲ್ಲಾ**

ಈ ಮಾತು ಕರ್ತೃವಿಗಷ್ಟೇ ನಿಲ್ಲದೆ ಹಾಡುವವನಿಗೂ ಅನ್ವಯಿಸುತ್ತದೆ. ಗಳಿಸುವ ಒಂದು ಮಾಧ್ಯಮವಾಗಿ ಬರಲಿಲ್ಲ ಈ ಸಾಹಿತ್ಯ ಸಂಗೀತ, ಬಂದುದು 'ಮೋಜಿಗಾಗಿ'. ಬದುಕು ಬೇಸರೆನಿಸಬಾರದು, ರಸದುಂಬಿ ಪ್ರವಹಿಸಬೇಕೆಂಬ ಆಂತರಿಕಪ್ರಜ್ಞೆ ಈ ಲಾವಣಿ ಹುಟ್ಟಿಗೆ, ಹಾಡಿಗೆ ಕಾರಣವಾಯಿತು. ಇಂಥ ರಸ ನಿಮಿಷಗಳಿಗೆ ವಂಚಿತರಾಗಬಾರದು ನಾವು. ನಾಳೆ ಇರುತ್ತೇವೆ ಎಂಬ ಭರವಸೆ ಎಲ್ಲಿ? ಆದ್ದರಿಂದ ಬದುಕನ್ನು ಬಂಗಾರವಾಗಿಸಲು ತಾನು ಹಾಡುವುದು ಹೊರತಾಗಿ ಹೊಟ್ಟೆ ಹೊರೆಯುವುದಕ್ಕಲ್ಲ.

# ನಿನ ಮಕವ ಸಿಗಲಿಲ್ಲ :

## ಜಾನಪದ ದುರಂತಗೀತ

ಲೀಲಾವತಿ ತೋರಣಗಟ್ಟಿ

ಜಾನಪದಸಾಹಿತ್ಯದಲ್ಲಿ ದುರಂತಗೀತಗಳು ವಿರಳ. 'ಮಲ್ಲಿಗೆ ದಂಡೆ'ಯಲ್ಲಿಯ 'ಮಳೆಯ ಹಾಡು' 'ಬರದ ಹಾಡು' ಪ್ರಕೃತಿ ನಿರ್ಮಿತ ದುರಂತ ಗೀತಗಳಾದರೆ, 'ನೀಲಗಂಗಾನ ಹಾಡು' ಮಾನವ ನಿರ್ಮಿತ ದುರಂತಗೀತವಾಗಿದೆ. ಡಿ. ಕೆ. ರಾಜೇಂದ್ರರ 'ಜಾನಪದ ಸಮೀಕ್ಷೆ'ಯಲ್ಲಿಯ 'ನುಚ್ಚಾಯ್ತು ನೀರ ಹೋಳಿಯಾಗೆ' ಮತ್ತು ಕೆ. ಪಿ. ಸುಬ್ಬಣ್ಣನವರ 'ಅವರು ನೀಡಿದ ದೀಪ'ದಲ್ಲಿಯ 'ಸೀರೆಯಿಂತಾದು ಸೀರೆನುಡುವವಳೆಂಥವಳು' ಇವೆರಡು ದುರಂತ ಪ್ರಣಯ ಗೀತಗಳು. ಅಪ್ರಕಟಿತವೆಂದು ನನಗೆ ಕಂಡುಬಂದ 'ಬೆಕ್ಕಾಗಿ ಗೋಣ ಮುರದಾನ' ಮತ್ತು 'ನಿನ ಮುಕವ ಸಿಗಲಿಲ್ಲ' ಇವೆರಡು ವಿಷಮ ದಾಂಪತ್ಯದ ದಾರುಣಕಥೆಯನ್ನೊಳಗೊಂಡ ದುರಂತಗೀತಗಳು.

ಹನ್ನೆರಡನೆಯ ಶತಮಾನದ ಆದಿಭಾಗದಲ್ಲಿ ಕರ್ನಾಟಕದಲ್ಲಿ ಜೈನಧರ್ಮ ಪ್ರಬಲವಾಗಿತ್ತೆಂಬುದು ಇತಿಹಾಸದಿಂದ ಕಂಡುಬರುತ್ತದೆ. ಹದಿಮೂರನೆಯ ಶತಮಾನದ ರಾಘವಾಂಕನ 'ಸೋಮನಾಥಚರಿತ್ರೆ'ಯನ್ನು ಉದಾಹರಣೆಯನ್ನಾಗಿಟ್ಟುಕೊಳ್ಳಬಹುದು. ಆದಯ್ಯನು ಜೈನಳಾದ ಪದ್ಮಾವತಿಗೆ ವೀರಶೈವ ದೀಕ್ಷೆ ಕೊಡಿಸಿ ಮದುವೆಯಾಗುವದು ಆ ಕಾಲದಲ್ಲಿ ಜೈನ-ವೀರಶೈವ ರಕ್ತ ಸಂಬಂಧಗಳಾಗುತ್ತಿದ್ದವೆಂಬುದನ್ನು ತೋರಿಸುತ್ತದೆ. ನಾನು ಸಂಗ್ರಹಿಸಿದ 'ನಿನ ಮುಕವ ಸಿಗಲಿಲ್ಲ'—ಈ ಒಂದು ದುರಂತಗೀತೆ ಆ ಕಾಲದ್ದಿರಬೇಕೆಂದು ನನ್ನ ಊಹೆ. ಗೌರಿಹುಣ್ಣಿಮೆಯಲ್ಲಿ ಕೋಲಿನಪದವನ್ನಾಗಿ ಇಂದಿಗೂ ನಮ್ಮ ಬೆಳವಲನಾಡಿನಲ್ಲಿ ಈ ಹಾಡನ್ನು ಹಾಡುತ್ತಾರೆ. ಇದು ಸಾಂಗತ್ಯದಲ್ಲಿದೆ. ಕೆಲವು ಪದ್ಯಗಳು ಶುದ್ಧ ಸಾಂಗತ್ಯದಲ್ಲಿದ್ದು, ಕೆಲವು ಪದ್ಯಗಳಲ್ಲಿಯ ಎರಡನೆಯ ಪಾದವನ್ನೇ ಉರುಳಿಸಿ ಹಾಡಿ ಸಾಂಗತ್ಯವನ್ನಾಗಿಸಿದ್ದಾರೆ.

ತಾಯಿ-ಮಗಳ ಸಂವಾದದೊಂದಿಗೆ ಈ ಗೀತ ಆರಂಭವಾಗುತ್ತದೆ:

ಊರಹೊರಗ ಒಂದು ಸ್ವಾಮಿನಿಂಗನ ಗುಡಿಯ
ಹಾಲ ಮಜ್ಜನ ಹಡದವ್ವ ‖ ಕೋ ‖
ಎಡಗೈ ಹಾಲಗಿಂಡಿ ಬಲಗೈ ತಾವರಿ ತುಪ್ಪ
ಯಾವಲ್ಹೊಕ್ಕಿ ನನ್ನ ಹಡದವ್ವ ‖ ಕೋ ‖

ಊರ ಹೊರಗಿರುವ ಸೋಮಲಿಂಗನಗುಡಿಗೆ ಅಭಿಷೇಕ ಮಾಡಿಸಲು ತಾಯಿ ಹೊರಟಿರುತ್ತಾಳೆ. ಎಡಗೈಯಲ್ಲಿ ಹಾಲಗಿಂಡಿ, ಬಲಗೈಯಲ್ಲಿ ತಾವರಿ ತುಪ್ಪ ಹಿಡಿದುಕೊಂಡು ಹೊರಟ ತಾಯಿಯನ್ನುದ್ದೇಶಿಸಿ ಮಗಳು "ಎಲ್ಲಿ ಹೋಗುವೆ?" ಎಂದು ಪ್ರಶ್ನಿಸುತ್ತಾಳೆ. ಎಲ್ಲಿ ಹೊರಟರೂ ತಾಯಿಯನ್ನು "ಎಲ್ಲಿ ಹೋಗುವಿ?" ಎಂದು ತಡೆಯುವುದು ಮಕ್ಕಳ ಸಹಜಗುಣ, ಸಾಮಾನ್ಯ ಪ್ರಶ್ನೆ. ಇಲ್ಲಿ 'ಎಲ್ಲಿ?' ಎಂಬ ಆರಂಭದ ಪ್ರಶ್ನೆ, ಸಾಮಾನ್ಯ ಪ್ರಶ್ನೆಯಾಗಿರದೆ ಮುಂಬರುವ ದುರಂತಕ್ಕೆ ನಾಂದಿಯಾಗಿದೆ. ಹೊರಗೆ ಹೊರಟವರನ್ನು 'ಎಲ್ಲಿಗೆ?' ಎಂದು ಕೇಳಬಾರದೆಂಬುದು ನಮ್ಮ ಬೆಳವಲನಾಡಿನ ಜನಪದ ರೂಢಿ. ಎಲ್ಲಿಗೆ ಎಂದು ಕೇಳಿದರೆ ಆ ಕಾರ್ಯಕ್ಕೆ ವಿಘ್ನವೆಂದೂ ಅದು ಅಪಶಕುನವೆಂದೂ ನಮ್ಮಲ್ಲಿ ನಂಬಿಕೆಯಿದೆ.

'ತಾವರಿ' ಎಂದರೆ ಸಾಮಾನ್ಯವಾಗಿ ಕಮಲವೆಂದು ಅರ್ಥೈಸಬಹುದು. ಮಲೆನಾಡಿನಲ್ಲಾದರೆ ಎಲ್ಲೆಡೆಗೂ ಕಮಲ ಸಿಗುತ್ತದೆ. ಬೆಳವಲನಾಡಿನಲ್ಲಿ ಕಮಲವೆಲ್ಲಿಂದ ದೊರೆತೀತು? 'ತಾವರಿ ಗಿಡಹುಟ್ಟಿ ದೇವರಿಗೆ ನೆರಳಾಗಿ'—ಈ ತ್ರಿಪದಿಯಲ್ಲಿ ತಾವರಿ ಬಳ್ಳಿದಾವರಿಯಾಗಿರದೆ ಗಿಡದಾವರಿಯಾಗಿದೆ. ಕಮಲದ ಬಳ್ಳಿ ಇರುವುದೇ ಹೊರತು ಕಮಲದ ಗಿಡ ಎಲ್ಲಿಯೂ ಇಲ್ಲ. ಹಾಗಾದರೆ ಈ ತಾವರಿ ಗಿಡ ಯಾವುದು? ರಾಣೆಬೆನ್ನೂರು ಭಾಗದಲ್ಲಿ ಹೊನ್ನಾವರಿ ಹೂವಿಗೆ ತಾವರಿ ಹೂ, ತಾಮರಿ ಹೂ, ಹೊನ್ನಾಂಬರಿ ಹೂ ಎಂದು ಕರೆಯುತ್ತಾರಂತೆ. ಜಾನಪದಗರತಿ ಹಾಡಿದ ತಾವರಿಗಿಡ, ಈ ಹೊನ್ನಾವರಿ ಗಿಡವೇ ಇರಬೇಕು. ಬೆಳವಲನಾಡಿನಲ್ಲಿ ಈ ಹೊನ್ನಾವರಿ ಹೂ>ಹೊನ್ನಾರಿ ಹೂ ಮನೆಮನೆಯಲ್ಲಿ ಪೂಜೆಗೆ ಒದಗುತ್ತದೆ. ಭೂಮಿಯಲ್ಲಿ ಬೆಳೆಯುವ ಈ ಕಾಡುಹೂವನ್ನು ದಿನವೂ ಮನೆಮನೆಗೆ ಹೂ ಪತ್ರಿ ಹಾಕುವ ಹೂಗಾರ ತಂದುಕೊಡುತ್ತಾನೆ. ಮನೆಯಲ್ಲಿಯ ದೇವರು, ಗುಡಿಯಲ್ಲಿಯ ದೇವರು, ಮಣ್ಣುಪೂಜೆ, ಹಟ್ಟಿಹಬ್ಬ(ದೀಪಾವಳಿ)ದ ಸಗಣಿಯ ಪಾಂಡವರು, ಗೂಡು, ರಾಶಿಗೆ ಮಾಡುವಾಗ ಐದು ಕಲ್ಲುಗಳನ್ನಿಟ್ಟು ಪಾಂಡವರೆಂದು ಪೂಜಿಸುವ ದೇವರುಗಳು, ಎಲ್ಲವನ್ನೂ ನಾವು ಇಂದಿಗೂ ಈ ಹೊನ್ನಾರಿ ಹೂವಿನಿಂದ ಪೂಜಿಸುತ್ತೇವೆ. ಅಭಿಷೇಕಕ್ಕೆಂದು ಹೊರಟ ತಾಯಿ ಬಲಗೈಯಲ್ಲಿ ಹಿಡಿದುಕೊಂಡ ತಾವರಿ, ಈ ಹೊನ್ನಾರಿ ಹೂವೇ ಇರಬೇಕು.

ಹಾಲು ಬಾನಾ ಉಣ್ಣ ಸೀಳಿದೀಳ್ಕೇವ ಮೆಲಿಯ
ಬಾಲ್ಯಾರ ಕೂಡ ನಲದಾಡ || ಕೋ ||
ಬಾಲ್ಯಾರ ಕೂಡ ನಲದಾಡ ನನಮಗಳ
ದೇವರ ಸೊರಣೆ ನಿನಗ್ಯಾಕ || ಕೋ ||
ತುಪ್ಪಾ ಬಾನಾ ಉಣ್ಣ ಕಪ್ಪುರದೀಳ್ಕೇವ ಮೆಲಿಯ

ಮಿತ್ರ್ಯಾರ ಕೂಡ ನಲದಾಡ || ಕೋ ||
ಮಿತ್ರ್ಯಾರ ಕೂಡ ನಲದಾಡ ನನಮಗಳ
ದೇವರ ಸೊರಣಿ ನಿನಗ್ಯಾಕ || ಕೋ ||

ಹಾಲು ಬೋನ, ತುಪ್ಪದ ಬೋನ ಉಂಡು ಗೆಳತಿಯರೊಂದಿಗೆ ನಕ್ಕು ನಲಿಯುವುದನ್ನುಳಿದು ಈ ಎಳೆ ವಯಸ್ಸಿನಲ್ಲಿ ದೇವರ ಸ್ಮರಣೆ ಅವಳಿಗ್ಯಾಕೆಂಬುದು ಆ ತಾಯಿಯ ಭಾವನೆ. ಮುಂದೆ ಮುಪ್ಪಿನಲ್ಲಿ ಇದ್ದೇ ಇದೆಯಲ್ಲ ಆ ಪರಮಾರ್ಥ ಸಾಧನೆ! ಈಗ ಉಂಡುಟ್ಟು ಸುಖವಾಗಿ ಬಾಲ್ಯಗಳೆಯಲೆಂಬುದು ಆ ತಾಯಿಯ ಬಯಕೆ.

ಆ ಮಗಳು ಮುಂಡಹುಡುಗಿ, ಜಗಮುಂಡಿ. ತನ್ನ ಮನದಂತೆಯೇ ಎಲ್ಲವೂ ಆಗಬೇಕೆನ್ನುವವಳು. ತನ್ನ ಮಾತೇ ನಡೆಯಬೇಕೆನ್ನುವ ಹಟಮಾರಿ.

ಹಾಲು ಬಾನಾ ಓದ ಹಾದ್ಯಾಗ ಸುರವವ್ವ
ನಾನಿನ್ಬೆನ್ಹತ್ತಿ ಬರತೇನ || ಕೋ ||
ತುಪ್ಪಾ ಬಾನಾ ಓದ ತಿಪ್ಪ್ಯಾಗ ಸುರವವ್ವ
ನಾನಿನ್ಬೆನ್ಹತ್ತಿ ಬರತೇನ || ಕೋ ||

ಎಂದು ಚಂಡಿಹಿಡಿದು ಹೇಳುತ್ತಾಳೆ. ಬೇಡವೆಂದದ್ದನ್ನು ಮಾಡಿಯೇ ಮಾಡಬೇಕೆನ್ನುವ ಜಿದ್ದು ಅವಳದು. ಇಲ್ಲಿಗೆ ಈ ಗೀತದ ಮೊದಲಘಟ್ಟ ಮುಗಿಯುತ್ತದೆ. ಇಂದು ಆ ಮಗಳು ದೊಡ್ಡವಳಾಗಿದ್ದಾಳೆ.

ಊರ ಹೊರಗ ಇಂದು ಕಾಳಿ ಬೋರ್ಯಾಡತಾವ
ಯಾರ ಸತ್ತಾರ ಹಡದವ್ವ || ಕೋ ||
ಯಾರೇನ ಸತ್ತಿಲ್ಲ ಯಾರೇನ ಕೆಟ್ಟಿಲ್ಲ
ನಿನ್ನ ನಿಬ್ಬಣ ನನಮಗಳ || ಕೋ ||

ಊರ ಅಗಸಿಯಲ್ಲಿ ಕಾಳಿಯ ಸದ್ದು ಕೇಳುತ್ತಲಿದೆ. ಬೆಳವಲನಾಡಿನಲ್ಲಿ ಮಂಗಲದ ಧ್ವನಿಯಾಗಿಯೂ ಸತ್ತಾಗ ದುಃಖಸೂಚಕವಾಗಿಯೂ ಕಹಳೆ ಊದುತ್ತಾರೆ. ಕಹಳೆ ಊದುವವನ ಸಂವೇದನೆಯ ಮೇರೆಗೆ ಸಂದರ್ಭ ಅರಿತುಕೊಳ್ಳುತ್ತಾರೆ.

ಯಾವ ಕಾರಣಕ್ಕಾಗಿ ಕಹಳೆ ಊದುತ್ತಲಿದೆ ಎಂಬುದು ಅವಳಿಗೆ ಗೊತ್ತಿಲ್ಲದೆ ಇಲ್ಲ. ಅವಳ ಮದುವೆ, ಊರಹೊರಗೆ ನಿಬ್ಬಣ ಬಂದಿಳಿದಿದೆ. ಅದನ್ನು ಎದುರುಗೊಳ್ಳಲು ಕಹಳೆ ಊದುತ್ತಲಿದ್ದಾರೆ. ಹೀಗಿದ್ದೂ 'ಯಾರ ಸತ್ತಾರ?' ಎಂದು

ಕೇಳಬೇಕಾದರೆ ಈ ಮದುವೆಗೆ ಅವಳಲ್ಲಿ ಎಂಥ ಪ್ರಬಲ ವಿರೋಧವಿದೆಯೆಂಬುದು ಗೊತ್ತಾಗುತ್ತದೆ, ಅವಳೆದೆಯಲ್ಲಿ ನೋವಡಗಿದೆಯೆಂಬುದು ವ್ಯಕ್ತವಾಗುತ್ತದೆ. ಮದುವೆಯ ಸಮಯದಲ್ಲಿ ಯಾವುದೂ ಅಮಂಗಳವಾಗಬಾರದು, ಯಾರೂ ಅಮಂಗಳ ನುಡಿಯಬಾರದು. ಆ ಬಗ್ಗೆ ನೆರೆದವರೆಲ್ಲ ಜಾಗ್ರತರಾಗಿ ಮದುವೆಯ ಮಂಗಳ ಕಾರ್ಯಗಳಲ್ಲಿ ಭಾಗಿಗಳಾಗುತ್ತಾರೆ. ಆರತಿಯ ದೀಪದ ಬಗ್ಗೆ ಜಾಗ್ರತೆ, ದಂಡೆ ಬಾಸಿಂಗಗಳ ಬಗ್ಗೆ ಜಾಗ್ರತೆ. ಅಂಥದರಲ್ಲಿ ಮದುಮಗಳೇ ನಿಂತು 'ಯಾರ ಸತ್ತಾರ' ಎಂದು ಕೇಳಬೇಕಾದರೆ ಇದೆಂಥ ಮದುವೆ! ಗೊತ್ತಿದ್ದೂ ಕೇಳುವ ಮಗಳಿಗೆ ತಾಯಿ ನಿರ್ದಯವಾಗಿ 'ನಿನ್ನ ಮದುವೆಯ ಸಿಬ್ಬಣ' ವೆಂದು ನೇರವಾಗಿ ಹೇಳುತ್ತಾಳೆ. ಆ ಪಟವಾರಿ ಮಗಳ ತಾಯಿಯಲ್ಲವೆ ಇವಳು!

ನಾಯಿ ಹೆಜ್ಜಿ ಹಾಂಗ ಗೀರಗಂದಾ ಹಚ್ಚಿ
ಸ್ವಾನನಂತಾವ ಇವನ್ಯಾರ || ಕೋ ||
ಕತ್ತಿ ಹೆಜ್ಜಿ ಹಾಂಗ ಕಿತ್ತ ಗಂದಾ ಹಚ್ಚಿ
ಕತ್ತಿ ಹಂತಾವ ಇವನ್ಯಾರ || ಕೋ ||

ಎಂದು ನಿರ್ದಾಕ್ಷಿಣ್ಯವಾಗಿ ತಾಯಿಯನ್ನು ಕೇಳಬೇಕಾದರೆ ಅವನ ಬಗೆಗೆ ಅವಳಿಗೆ ಎಂಥ ತಿರಸ್ಕಾರ ತುಂಬಿಕೊಂಡಿದೆ ಎಂಬುದನ್ನು ಕಂಡುಕೊಳ್ಳಬಹುದು.

ಅವನ ಕೂಣಾ ನನ್ನ ತಮ್ಮ ಗೊಮ್ಮಟರಾಯ
ಹೊನ್ನ ಚಿನ್ನದಲಿ ಸಂಪನ್ನ || ಕೋ ||
ಹೊನ್ನ ಚಿನ್ನದಲಿ ಸಂಪನ್ನನಿದ್ದಲ್ಲೆ
ನಿನ್ನ ಕೊಡತೇನ ನನಮಗಳ || ಕೋ ||

ಈ ಪದ್ಯಕ್ಕೆ ಬಂದಾಗ ವಿಷಯ ಸ್ವಲ್ಪ ತಿಳಿಯುತ್ತ ಹೋಗುತ್ತದೆ. ಅವಳು ಕೇಳಿದ ವ್ಯಕ್ತಿ ಬೇರೆ ಯಾರೂ ಅಲ್ಲ, ತಾಯಿಯ ತಮ್ಮ, ಸೋದರ ಮಾವ ಅವಳ ಪತಿಯಾಗಲಿರುವ ಗೊಮ್ಮಟರಾಯ. ಹಣ-ಬೆಳ್ಳಿ-ಬಂಗಾರ ಸಮೃದ್ಧಿಯಾಗಿ ಉಳ್ಳವ. ಹಾಗೆಂದೇ ತಾಯಿ ಅವನಿಗೆ ಮಗಳನ್ನು ಧಾರೆಯೆರೆದು ಕೊಡಲು ಸಿದ್ಧಳಾಗಿದ್ದಾಳೆ. ಮಗಳು ಸ್ಥಿತಿವಂತರ ಮನೆ ಸೇರಬೇಕೆಂಬುದೇ ಎಲ್ಲ ತಂದೆತಾಯಿಗಳ ಹಂಬಲ. ಪ್ರೀತಿ ವಿಶ್ವಾಸಗಳು ಅವರಿಗೆ ಗೌಣ. ಪ್ರಪಂಚಜ್ಞಾನವಿಲ್ಲದ ಹುಡುಗರು ಪ್ರೀತಿ, ಪ್ರೇಮವೆಂದು ಹುಚ್ಚುಚ್ಚಾಗಿ ಆಡುತ್ತಾರೆ. ನಾಳೆ ಮದುವೆಯಾಗಿ ಒಂದೆರಡು ಮಕ್ಕಳಾದರೆ ಎಲ್ಲವೂ ಸರಿಹೋಗುತ್ತವೆನ್ನುವ ಲೌಕಿಕವಾದ ಅವರದು.

ಉದ್ದೀನ ಕಾಳ್ದಂಗ ತಿದ್ದಿದಲಿಂಗಿದ್ದವಗ
ಗುದ್ದಿಽ ಕೊಡ ನನ್ನ ಹಡದವ್ವ ॥ ಕೋ ॥
ಗುದ್ದಿ ಕೊಡ ನನ್ನ ಹಡದವ್ವ ಲಿಂಗಿಲ್ಲದ
ಜೈನಾಗ ಕೊಟ್ಟು ಕೊಲಬ್ಯಾಡ ॥ ಕೋ ॥
ಕಡಲೀಯ ಕಾಳ್ದಂಗ ಕಟದ ಲಿಂಗಿದ್ದವಗ
ಕರದ ಕೊಡ ನನ್ನ ಹಡದವ್ವ ॥ ಕೋ ॥
ಕರದ ಕೊಡ ನನ್ನ ಹಡದವ್ವ ಲಿಂಗಿಲ್ಲದ
ಜೈನಾಗ ಕೊಟ್ಟು ಕೊಲಬ್ಯಾಡ ॥ ಕೋ ॥

ಈ ಪದಗಳಲ್ಲಿ ಅವಳಿಗೆ ಈ ಮದುವೆಗೆ ವಿರೋಧವೇಕೆ ಎಂಬುದು ತಿಳಿಯುತ್ತದೆ. ಮನದ ಮಾತನ್ನು ಸ್ಪಷ್ಟೋಕ್ತಿಗಳಲ್ಲಿ ಹೇಳಿಬಿಡುತ್ತಾಳೆ. ಇಲ್ಲಿ ವಿಷಯ ಸ್ಪಷ್ಟವಾಗುತ್ತದೆ. ತಾಯಿ ಜೈನಮತೀಯಳು, ತಮ್ಮ ಗೊಮ್ಮಟರಾಯ ಜೈನ. ಅವಳ ತಂದೆ ವೀರಶೈವನಿರಬೇಕು, ಅದಕ್ಕಾಗಿ ಅವಳು ಲಿಂಗಿದ್ದವನಿಗೆ ಕೊಡು ಎಂದು ತಾಯಿಗೆ ಒತ್ತಿಒತ್ತಿ ಹೇಳಿದ್ದಾಳೆ. ಗೀತದ ಆರಂಭದ ಪಾದಗಳಲ್ಲಿಯೇ ಅವಳ ತಾಯಿ ಸೋಮನಿಂಗನ ಗುಡಿಗೆ ಅಭಿಷೇಕ ಮಾಡಿಸಲು ಹೊರಟುದರ ವರ್ಣನೆಯಿದೆ. ಇದರಿಂದಲೂ ಅವಳ ತಂದೆ ವೀರಶೈವನಿರಬೇಕೆಂಬುದು ಸ್ಪಷ್ಟವಾಗುತ್ತದೆ.

ಹೆಣ್ಣುಮಕ್ಕಳು ಮದುವೆಯಾಗಿ ಗಂಡನಮನೆ ಸೇರಿದ ನಂತರ ತಮ್ಮ ತೌರಿನ ಸಂಸ್ಕಾರಗಳನ್ನು ಕಳೆದುಕೊಂಡು, ಈ ಮನೆಯ ಸಂಸ್ಕಾರಗಳಿಗೆ ಹೊಂದಿಕೊಳ್ಳುವದು ಸಹಜವಾಗಿರುತ್ತದೆ. ತೌರಿನ ಆರಾಧ್ಯದೈವವನ್ನು ಬಿಟ್ಟು ಗಂಡನ ಮನೆಯ ಆರಾಧ್ಯದೈವವನ್ನು ಪೂಜಿಸುವುದು ಅವರ ರೂಢಿಯಾಗಿಬಿಡುತ್ತದೆ. 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗು' ಎಂಬ ನಾಣ್ಣುಡಿ ಇದೆ. ಮದುವೆಯಾದಮೇಲೆ ಹೆಣ್ಣುಮಗಳು ತವರಿನ ಕುಲಕ್ಕೆ ಹೊರತಾಗಿ, ಕೊಟ್ಟ ಮನೆಯ ಕುಲಕ್ಕೆ ಸೇರಿದವಳಾಗಿಬಿಡುತ್ತಾಳೆ. ಹಾಗೆ ಈ ತಾಯಿ ತನ್ನ ತೌರಿನ ಸಂಪ್ರದಾಯವನ್ನಳಿದು ಪತಿಯ ಸಂಪ್ರದಾಯವನ್ನೇ ಅನುಸರಿಸಿದವಳಾಗಿದ್ದಳೆಂಬುದನ್ನು ಕಂಡುಕೊಳ್ಳಬಹುದು! ಮಗಳಲ್ಲಿ ತಂದೆಯ ವೀರಶೈವ ಸಂಪ್ರದಾಯವೇ ರಕ್ತಗತವಾಗಿರುವುದರಿಂದ "ಲಿಂಗಿಲ್ಲದ ಜೈನಾಗ ಕೊಟ್ಟು ಕೊಲಬ್ಯಾಡ" ಎಂದು ತಾಯಿಗೆ ಹೇಳುತ್ತಾಳೆ. ಲಿಂಗಿಲ್ಲದ ಭವಿಯನ್ನು ಮದುವೆಯಾದರೆ ಅವಳಿಗೆ ಇದ್ದೂ ಸತ್ತಂತೆ. ಒತ್ತಾಯದ ಮದುವೆಯಾಗಿ ಜೀವನದಲ್ಲಿ ಯಾವ ಸುಖ ಬಳಿದುಕೊಳ್ಳುವುದು? (ಕಾವ್ಯಗಳಲ್ಲಷ್ಟೇ ಅಲ್ಲ, ಜನಪದ ಸಾಹಿತ್ಯದಲ್ಲೂ ಜೈನ-ವೀರಶೈವ ರಕ್ತಸಂಬಂಧದ ಉದಾಹರಣೆಗಳು ದೊರಕು

ತ್ತವೆ). ಆದರೂ ಅವಳ ತಾಯಿ ತನ್ನ ನಿರ್ಧಾರಕ್ಕೆ ದೃಢವಾಗಿ ಅಂಟಿಕೊಂಡಿದ್ದಾಳೆ. ಮಂಗಳ ಭಾವನೆಗಳಿಗೆ ಅವಳಲ್ಲಿ ಬೆಲೆಯಿಲ್ಲ. ಮದುವೆಯ ಮುಂದಿನ ಕಾರ್ಯಗಳು ಯಥಾವತ್ತಾಗಿ ಸಾಗುತ್ತಲಿವೆ.

ಹಾಲಿನ ಕೊಡವಂದ ಹನ್ನೊಂದ ಬರುವಾಗ
ಅವರಣ್ಣಗ ಸಿಡ್ಲ ಎರಗಲಿ || ಕೋ ||
ಅವರಣ್ಣಗ ಸಿಡ್ಲ ಎರಗಲಿ ಬೇರೂರವರು
ಹೆಣ್ಣಹೆಣ್ಣೆಂದ ತಿರಗಲಿ || ಕೋ ||
ತುಪ್ಪದ ಕೊಡವಂದಿಪ್ಪತ್ತ ಬರುವಾಗ
ಅವರಪ್ಪಗ ಸಿಡ್ಲ ಎರಗಲಿ || ಕೋ ||
ಅವರಪ್ಪಗ ಸಿಡ್ಲ ಎರಗಲಿ ಬೇರೂರವರು
ಹೆಣ್ಣಹೆಣ್ಣೆಂದ ತಿರಗಲಿ || ಕೋ ||

ಇಲ್ಲಿ ಸಹಜತೆ ಹಾಗೂ ವಾಸ್ತವಿಕತೆಗಳು ಎದ್ದು ಕಾಣುತ್ತವೆ. ತನಗೆ ಬೇಡವಾದದ್ದು ಹೇಗಿದ್ದರೇನು? ವರನ ಕಡೆಯಿಂದ ಮಂಗಲದ್ಯೋತಕವಾಗಿ ಬರುವ ಹಾಲುತುಪ್ಪದ ಕೊಡಗಳು ಒಡೆದು ಅವರಣ್ಣ ಅವರಪ್ಪರಿಗೆ ಸಿಡ್ಲೆರಗಿ ಸತ್ತು, ಇವಳು ಅವಲಕ್ಷಣದ ಹೆಣ್ಣೆಂದು ಬೇರೆ ಊರುಗಳಲ್ಲಿ ಹುಡುಕುತ್ತ ಹೋಗಲೆಂದು ಶಾಪ ಹಾಕುತ್ತಾಳೆ. ತನ್ನ ಹೃದಯ ಹೋಳಾದರೂ ಸರಿ, ಅವರು ಸುಖವಾಗಿರಲೆನ್ನುವ ಆದರ್ಶ ಅವಳದಲ್ಲ. ತನಗಲ್ಲದುದು ನಾಶವಾಗಿ ತನ್ನ ಕಂಟಕ ಕಳೆಯಲೆನ್ನುವ ನವ್ಯರೀತಿ ಅವಳದು.

ಚಪ್ಪರ್ಹಾಕತಾವ ಹಪ್ಪಳಾಗತಾವ
ಅಕ್ಕ ಮನಿಯಾಗ ಮದವೇನ || ಕೋ ||
ನಮ್ಮನ್ಯಾಗ ಮದುವಿಲ್ಲ ನಮ್ಮನ್ಯಾಗ ಮುಂಜಿಲ್ಲ
ನಮ್ಮವ್ವನ ತಮ್ಮನ ದಿನಗೋಳ || ಕೋ ||
ಹಂದರ್ಹಾಕತಾವ ತಳರ ಕಟ್ಟತಾವ
ತಂಗಿ ಮನಿಯಾಗ ಮದುವೇನ || ಕೋ ||
ನಮ್ಮನ್ಯಾಗ ಮದುವಿಲ್ಲ ನಮ್ಮನ್ಯಾಗ ಮುಂಜಿಲ್ಲ
ನಮ್ಮಪ್ಪನಪ್ಪನ ದಿನಗೋಳ || ಕೋ ||

ಮನೆಯ ಮುಂದೆ ಹಂದರಹಾಕುವ, ತಳಿರು ಕಟ್ಟುವ ಸಂಭ್ರಮವೋ ಸಂಭ್ರಮ! ಹಾದು ಹೋಗುವವರು 'ಮನೆಯಲ್ಲಿ ಮದುವೆಯೇ? ಎಂದು ಕೇಳಿದರೆ ತನ್ನ ಭಾವಿ ಪತಿಯಾಗಲಿರುವ ತಾಯಿಯ ತಮ್ಮನ (ಸೋದರ ಮಾವನ) ದಿನ ಕರ್ಮಗಳೆಂದು ನುಡಿಯುವ ಈ ಚೂಟಿ ಹುಡುಗಿಯ ಮನೋಭಾವ, ಗಮನಿಸತಕ್ಕುದಾಗಿದೆ.

ಚಪ್ಪರ ಬೀಳಲಿ ಹಪ್ಪಳ ಮುರಿಯಲಿ
ಮಿತ್ರ್ಯಾರೈರಾಣಿ ಒಡೆಯಲಿ || ಕೋ ||
ಹಂದರ ಬೀಳಲಿ ಹಾಲಗಂಬ ಮುರಿಯಲಿ
ರಂಬ್ಯಾರೈರಾಣಿ ಒಡೆಯಲಿ || ಕೋ ||

ಚಪ್ಪರ ಕಿತ್ತಿದರೂ ಸಾಕಿಲ್ಲ ಆಕೆಗೆ. ಹಾಕಿದ ಚಪ್ಪರ ಬಿದ್ದು ನೆಟ್ಟ ಹಾಲಗಂಬ ಮುರಿದು ಮಂಗಲ ಕುಂಭಗಳಾದ ರಂಭೆಯರ ಕೈಯಲ್ಲಿಯ ಐರಾಣಿ (ಸಿಂಗರಿಸಿದ ೫ ಮಣ್ಣಿನ ಮಡಿಕೆಗಳು) ಒಡೆದು ಹೋಗಲೆಂದು ಹಾರೈಸುತ್ತಾಳೆ. ಯಾವುದೋ ಒಂದು ಅಪಘಾತ, ಅಮಂಗಳ ಬರಲಿ ಕೊನೆಗಾಲದಲ್ಲಾದರೂ ತನ್ನ ಈ ಮದುವೆ ನಿಲ್ಲಲಿಯೆನ್ನುವ ಹಾರೈಕೆ ಅವಳದು. ನಿಮಿಷನಿಮಿಷಕ್ಕೂ ಮದುವೆ ನಿಲ್ಲಲೆನ್ನುವ ಹಾರೈಕೆ ಅವಳದಾದರೆ, ಈ ಮದುವೆ ನಡೆದೇ ತೀರಬೇಕೆನ್ನುವ ಸಂಕಲ್ಪ ವಿಧಿಯದು. ದೈವೀ ಸಂಕಲ್ಪ ಬಲವತ್ತರವಾಗಿರುವಾಗ ಅದನ್ನು ತಪ್ಪಿಸುವುದು ಯಾರಿಗೆ ಸಾಧ್ಯ.

ರೈತರ ರಾಣ್ಯಾರ ಗೌಡ ಕುಲಕರ್ಣ್ಯಾರ
ಶಡಗರದುಪ್ಪದ್ಯಾ ಬರತಾರ || ಕೋ ||
ಶಡಗರದುಪ್ಪದ್ಯಾ ಬರತಾರ ಅವರೀಗ
ಸಾವುದೋಮೆಂದಕ್ಕಿ ಒಗದಾರ || ಕೋ ||

ಬೀಗಬೀಗತಿಯಂದಿರೂ ಊರ ಪ್ರಮುಖರೆದುರು ಅವಳ ಮದುವೆ ನಡೆದು-ಹೋಗುತ್ತದೆ.

ಆ ನಾಡಿನ ಹೆಣ್ಣ ಈ ನಾಡ್ಗಿ ತಂದೇವಂತ
ಜೋಡಗೈ ಹೊಡದ ನಗತಾರ || ಕೋ ||
ಜೋಡಗೈ ಹೊಡದ ನಗುವಂತ ಜವನರ್ಗಿ
ಮಾಯದ ನಿದ್ದಿ ಕಂವದಾವ || ಕೋ ||

ಅಕ್ಷತಾರೋಪಣವಾಯಿತೋ ಮುಗಿಯಿತು, ಗಂಡಿನವರಿಗೆ ಕೇಡು ಮಾಡಿದಂತೆ, ಹೆಣ್ಣು ಗೆದ್ದೆವೆಂಬ ಹೆಮ್ಮೆ. ಸಂತೋಷದ ಭರದಲ್ಲಿ ರಾತ್ರಿ ಮೈಮರೆದು ಮಲಗುತ್ತಾರೆ.

ಮಲಗಿದ ಜವನಾರು ವೈಮುರದ ಎದ್ದಾರ
ತಣ್ಣೀರ ಗಿಂಡಿಲಿ ಮುಕದೊಳದ || ಕೋ ||
ತಣ್ಣೀರ ಗಿಂಡಿಲಿ ಮುಕದೊಳದ ನೋಡ್ಯಾರ
ಹೆಣ್ಣ ಹೋಗೇತ್ಯ ವನದೇಸ || ಕೋ ||

ಎದ್ದು ಮುಖತೊಳೆದು ನೋಡುತ್ತಾರೆ 'ಹೆಣ್ಣ ಹೋಗೇತ್ರ್ಯ ವನವೇಸ' ಇಲ್ಲಿ ಈ ಗೀತಕ್ಕೆ ಹೊಸತಿರುವುಬಂದತಾಗಿದೆ.

ಹರಗೂವಣ್ಣಗೊಳಿರ್ಯಾ ಹರಿದ್ಯಾಯ ಕಂಡಿರ್ಯಾ
ಹಗಲಿ ಸೂರ್ಯಾನ ಚೆಲವ್ಯಾಯ || ಕೋ ||
ಹಗಲಿ ಸೂರ್ಯಾನ ಚಲವ್ಯಾಯ ಕಂಡರ
ಇಟ್ಟ ಬಂಗಾರ ಸಂವಪಾಲ || ಕೋ ||
ಬಿತ್ತುವಣ್ಣಗೊಳಿರ್ಯಾ ಮಿತ್ರ್ಯಾಯ ಕಂಡಿರ್ಯಾ
ಮತ್ತ ಸೂರಜನ ಚಲವ್ಯಾಯ || ಕೋ ||
ಮತ್ತ ಸೂರಜನ ಚೆಲವ್ಯಾಯ ಕಂಡರ
ಇಟ್ಟ ದಾಗಿನ ಸಂವಪಾಲ || ಕೋ ||

ಮದುವೆಗೆಂದು ಬಂದಂಥ ಬಂಧು-ಬಳಗ-ಆಪ್ತೇಷ್ಟರಿಂದ ತುಂಬಿದ ಮನೆ, ಎದ್ದೊಡನೆ ಆಘಾತವಾಗುವಂಥ ಈ ಸುದ್ದಿ ಕೇಳಿ ಗಲಿಬಿಲಿಗೊಂಡಿದೆ. ಹೌಹಾರಿ, ಸುತ್ತಮುತ್ತ ಭೂಮಿಹೊಕ್ಕು ಹುಡುಕುತ್ತಲಿದೆ ಜನ. ಎದುರಿಗೆ ಕಂಡವರನ್ನು ಕೇಳುತ್ತಾ ಹೊರಟಿದ್ದಾರೆ. ಹರಗುವ ಅಣ್ಣಗಳನ್ನು 'ಹರದ್ಯಾಯ ಕಂಡಿರ್ಯಾ' ಎಂದು ಕೇಳುತ್ತಾರೆ. ಹರದಿ ಎಂಬ ಶಬ್ದದಲ್ಲಿ ಆ ಹುಡುಗಿ ಎಂಥವಳೆಂಬ ಧ್ವನಿ ಅಡಗಿದೆ. ಅವಳು ಹಗಲಿ ಸೂರ್ಯನ ಚೆಲುವಿ. ಹಾಗಾದರೆ ರಾತ್ರಿ ಸೂರ್ಯ ಎಂಥವ? ಎಂದು ಪ್ರಶ್ನಿಸಿ ಆಭಾಸಮಾಡಬಾರದು. ಜನಪದದ ಮನಸಲ್ಲಿ ಇಂಥ ತರ್ಕಗಳಿಗೆ ಅವಕಾಶವಿಲ್ಲ. ಜನಪದಸಾಹಿತ್ಯದಲ್ಲಿ ಅವರ ಉಪಮೆಗಳು ಅವರವೇ ಆಗಿ ನಿಂತಿವೆ.

ಅಲ್ಲೊಬ್ಬಳ್ಹ್ವ್ಯಾದಾಳ ಹವಳದ ಮಡವಿಗೆ
ದುಕ್ಕದಿ ಮಡವ ಕಲಕೂತ || ಕೋ ||
ಇಟ್ಟ ದಾಗೀನೆಲ್ಲಾ ದಟ್ಟಿಸೆರಗಿಗಿ ಕಟ್ಟಿ
ಬಾಲಿ ಮುನಗ್ಯಾಳ ಮಡಗೋಳ || ಕೋ ||

ಆಯಿತು ಆಗಬಾರದ್ದು ಆಗಿ ಹೋಗಿದೆ, ವಿಧಿಯ ಆಸೆ ನೆರವೇರಿದೆ. ಹರಗುವ ಬಿತ್ತುವ ಅಣ್ಣಂದಿರು ಹವಳದ ಮಡುವಿನ ಕಡೆಗೆ ಒಬ್ಬಳು ಹೋದುದನ್ನು ಕಂಡುದುದಾಗಿ ಹೇಳುತ್ತಾರೆ. ಅವರು ಹೇಳಿದ ಸ್ಥಳಕ್ಕೆ ಹೋಗಿ ನೋಡುತ್ತಾರೆ. ಅವಳ ಕಣ್ಣೀರು ಮಡುವಿನಲ್ಲಿ ಕೂಡಿ ಮಡುವು ಕಲಕಿಹೋಗಿದೆ. ನಿನ್ನೆ ಸಾಲಂಕೃತ ಕನ್ಯೆ, ಇಂದು ಮೈಮೇಲಿನ ಒಡವೆಗಳನ್ನೆಲ್ಲ ಉಟ್ಟಪಟ್ಟೆಯ ಸೆರಗಿಗೆ ಕಟ್ಟಿಟ್ಟು ಮಡವಲ್ಲಿ ಮುಳುಗಿದ್ದಾಳೆ. ಸೀರೆಯ ಸೆರಗಲ್ಲ, ದಟ್ಟಿಯ

ಸೆರಗು. ಹದಿನಾರು ಮೊಳದ ಸೀರೆಯನ್ನುಡುವ ಪ್ರಾಯದವಳಲ್ಲ ಅವಳು. ಹನ್ನೆರಡು ಮೊಳದ ಕಿರಿಗೆ ಪಟ್ಟೆಯನ್ನುಡುವ ಹದಿಮೂರು—ಹದಿನಾಲ್ಕು ವರ್ಷದ ಮುಗ್ಧೆ ಅವಳು. ಹರದಿ ಎಂಬ ಶಬ್ದ ಸಾರ್ಥಕವಾಗಿದೆ ಇಲ್ಲಿ. ಒಲ್ಲದ ಗಂಡನೊಡನೆ ಬದುಕು ಸಾಗಿಸದೆ ಮೈಮನಗಳೆರಡನ್ನೂ ಪವಿತ್ರವಾಗಿ ಉಳಿಸಿಕೊಂಡು ಗಂಗೆಗೆ ತನ್ನನ್ನು ಅರ್ಪಿಸಿಕೊಂಡಿದ್ದಾಳೆ.

ಬಾಳಿಯ ವನಕ ಬಾಗಸರ್ರಿ ನಿಮ್ದ್ಹರಗೋಲ
ಬಾಳುಳ್ಳವರ ಮಗಳಯ್ಯಾ || ಕೋ ||
ಬಾಳುಳ್ಳವರ ಮಗಳ ಅಂಬಿಗರಣ್ಣಾ
ಬಾಲಿ ಮುನಗ್ಯಾಳ ಹೊಳಿಸಾಲ || ಕೋ ||
ನಿಂಬಿಯ ವನಕ ಹೊಂದಸ್ರಿ ನಿಮ್ದ್ಹರಿಗೋಲ
ನಂಬಿಗುಳ್ಳವರ ಮಗಳಯ್ಯಾ || ಕೋ ||
ನಂಬಿಗುಳ್ಳವರ ಮಗಳ ಅಂಬಿಗರಣ್ಣಾ
ರಂಬಿ ಮುನಗ್ಯಾಳ ಹೊಳಿಸಾಲ || ಕೋ ||

ತಕ್ಷಣ ಅಂಬಿಗರಿಗೆ ಹರಿಗೋಲು ಹಾಕಹೇಳಿ, ಹುಡುಕಲಾರಂಭಿಸುತ್ತಾರೆ. ಹೊಳೆಯಲ್ಲಿ ಮುಳುಗಿದ ಹುಡುಗಿ, ಒಲ್ಲದ ಕೆಲಸಮಾಡಿ ಆತ್ಮಹತ್ಯೆ ಮಾಡಿಕೊಂಡವಳಲ್ಲ. ಜಾನಪದಭಾಷೆಯಲ್ಲಿ ಹೇಳುವುದಾದರೆ "ಅಡ್ನಾಡಿ ಹೆಣ್ಣಲ್ಲ." ಅವಳು ಹೊಳೆಯಲ್ಲಿ ಮುಳುಗಿದ ಕಾರಣ, ಎಲ್ಲರಿಗೂ ಗೊತ್ತಿದೆ. ಒತ್ತಾಯದ ಮದುವೆಯನ್ನೇ ಧಿಕ್ಕರಿಸಿ ತನ್ನ ದೃಢನಿರ್ಧಾರಕ್ಕೆ ತನ್ನನ್ನೇ ಆಹುತಿಮಾಡಿಕೊಂಡ ದಿಟ್ಟಹುಡುಗಿ. ಅವಳ ಬಗೆಗಿರುವ ಜನರ ಅನುಕಂಪ ಅಪಾರವಾದುದು.

ಅಕ್ಕನ ಮಗಳಂದ ಅಕ್ಕರತಿಂದಲಾದ್ಯಾ
ಚೊಕ್ಕ ಬಂಗಾರದ ಚೆಲವ್ಹಿಯ || ಕೋ ||
ಚೊಕ್ಕ ಬಂಗಾರದ ಚೆಲವ್ಹಿ ಅಂಬಿಗರಣ್ಣಾ
ಅಕ್ಕನ ಮಗಳೆಂದ ಕರೆಯಲ್ಯಾ || ಕೋ ||

ಅಕ್ಕನ ಮಗಳೆಂದು ಅಕ್ಕರತೆಯಿಂದ ಮದುವೆಯಾಗಿದ್ದಾನೆ. ಪುಟವಿಟ್ಟ ಚಿನ್ನದಂಥ ರೂಪವತಿ, ತನ್ನೆದುರೇ ಬೆಳೆದ ಹುಡುಗಿ. 'ಅಕ್ಕನ ಮಗಳೆಂದು ಕರೆಯಲ್ಯಾ' ಎನ್ನುವಲ್ಲಿ ಅವನ ಬೆಂದಹೃದಯದ ಬೇಗೆ ಹೊರಹೊಮ್ಮಿದೆ. ಹಾಗೆ ಕರೆದರೆ ಅವಳ ಕಾಠಿಣ್ಯ ಕರಗಿ ಎದ್ದುಬಂದಾಳೆಂಬ ಅಳಿದುಳಿದ ಆಸೆ ಅವನದು. ಇಲ್ಲಿ ಗೊಮ್ಮಟರಾಯ ಓದುಗರ ಹೃದಯವನ್ನು ಮಿಡಿಸುವ ಅನುರಾಗಿಯಾಗಿದ್ದಾನೆ.

ಮಿತ್ರಿ ನೀ ಮುನಗಿದಲ್ಲಿ ಇಪ್ಪತ್ತರೆ ಮುನಗಿದರ
ಮಿತ್ರಿ ನಿನ ಮುಕವ ಸಿಗಲಿಲ್ಲ || ಕೋ ||
ನಾರಿ ನೀ ಮುನಗಿದಲ್ಲಿ ನಾಲ್ವತ್ತರೆ ಮುನಗಿದರ
ನಾರಿ ನಿನ ಮುಕವ ಸಿಗಲಿಲ್ಲ || ಕೋ ||

ಅಂಬಿಗರು ನಾವೆ ಹಾಕಿ ಶೋಧಿಸಿದರೂ ಅವಳು ಸಿಗಲಿಲ್ಲ. ಅವಳ ಶವ ದೊರೆತು ಕೊನೆಯಬಾರಿ ಅವಳ ಮುಖವನ್ನು ಕಂಡಿದ್ದರೆ, ಅವನಿಗೆಷ್ಟೋ ಸಮಾಧಾನ ವೆನಿಸುತ್ತಿತ್ತು. ಅಂಬಿಗರ ಮೇಲೆ ಜಿಡವೆ ತಾನೇ ಸ್ವತಃ ಇಪ್ಪತ್ತು ನಾಲ್ವತ್ತು ಸಾರೆ ಮುಳುಗಿ ಶೋಧಿಸುತ್ತಾನೆ. ಕೊನೆಗೂ ಅವಳ ಮುಖ ಸಿಗುವುದಿಲ್ಲ. "ನಿನ ಮುಕವ ಸಿಗಲಿಲ್ಲ"ವೆಂಬ ಅವನ ನಿಟ್ಟುಸಿರು ಅವನಿರುವ ವರೆಗೂ ಅವನನ್ನು ಜೀವಂತ ಸುಡುತ್ತಿರುತ್ತದೆ.

"ಮಲ್ಲಿಗೆದಂಡೆ"ಯ "ಅಕ್ಕಮಹಾದೇವಿಯ ಹಾಡು" ಈ ದುರಂತ ಗೀತ ವನ್ನು ಸ್ವಲ್ಪಮಟ್ಟಿಗೆ ಹೋಲುತ್ತವೆಯಾದರೂ ಅದೇ ಇದಲ್ಲ. ಎರಡರಲ್ಲಿಯ ಮೂಲಭಾವಗಳೇ ಬೇರೆ ಎಂಬುದು ಸ್ಪಷ್ಟವಿದೆ. "ಮಲ್ಲಿಗೆದಂಡೆ"ಯ ಸಂಪಾ ದಕರು "ಅಕ್ಕಮಹಾದೇವಿಯ ಹಾಡಿ"ನೊಂದಿಗೆ ಬಹಳವಾಗಿ ಹೊಂದುತ್ತಿದ್ದುದ ರಿಂದ ಅದನ್ನೇ ಇದಕ್ಕೆ ಹೆಸರಿಸಿದ್ದೇವೆ ಎಂದು ಟಿಪ್ಪಣಿಯಲ್ಲಿ ಹೇಳಿದ್ದಾರೆ.

ಹಿಟ್ಟಕ್ಕಿ ತಗೊಂಡಾಳ ಬ್ಯಾಳಿಬೆಲ್ಲ ತಗೊಂಡಾಳ
ಹ್ವಾದಾಳ ಸಂಗಯನ ಗುಡಿಯಾಗ || ಕೋ ||
ಎಡಕಾದರ ಸುಳವಿಲ್ಲ ಬಲಕಾದರ ಸುಳವಿಲ್ಲ
ಎಲ್ಲ್ಯಾದರಾಕಿಯ ಸುಳವಿಲ್ಲ || ಕೋ ||

ಎಂದು ಆ ಹಾಡು ಮುಕ್ತಾಯವಾಗುತ್ತದೆ. 'ಎಲ್ಲ್ಯಾದರಾಕಿಯ ಸುಳವಿಲ್ಲ' ಎನ್ನು ವಲ್ಲಿ ಅವಳು ಮಾಯವಾದಳು ಎಂಬ ಧ್ವನಿಯಡಗಿದೆ. 'ನಿನ ಮುಕವ ಸಿಗಲಿಲ್ಲ' ಈ ಗೀತದಲ್ಲಿ ದುರಂತ ಸ್ಪಷ್ಟವಾಗಿದೆ. ಆದರೂ ಒಂದನ್ನೊಂದು ಹೋಲುವ ಕೆಳಗಿನ ಈ ಕೆಲವು ಪಾಠಾಂತರಗಳನ್ನು ನೋಡಬಹುದು.

ಶ್ಯಾಂವಿಗಿನಾಗತಾವ ಸೈದಾನಾಗsತಾವ
ಇಂದ್ಯಾನ ಇವರ ಮನಿಯಾಗ || ಕೋ ||
ಇಂದ ಯಾನs ಇವರ ಮನಿಯಾಗ
ಅವ್ವನೌವ್ವನತ್ತ ದಿನಗೋಳ || ಕೋ ||
ಹಪ್ಪಳನಾಗತಾವ ಶೆಂಡಿಗಿನಾಗsತಾವ
ಇಂದ್ಯಾನ ಇವರ ಮನಿಯಾಗ || ಕೋ ||

ಇದ ಯಾನ ಇವರ ಮನಿಯಾಗ ಹಡದವ್ನ
ಅಪ್ಪನಪ್ಪ ಸತ್ತ ದಿನಗೋಳ || ಕೋ ||
ಜಪ್ಪರ್ಧ್ಯಾಕ್ಶತಾವ ಹಪ್ಪಳಾಗತಾವ
ಅಕ್ಕ ಮನಿಯಾಗ ಮಡವೇನ || ಕೋ ||
ನಮ್ಮನ್ಯಾಗ ಮದಿವಿಲ್ಲ ನಮ್ಮನ್ಯಾಗ ಮುಂಜಿಲ್ಲ
ನಮ್ಮಪ್ಪನ ತಮ್ಮನ ದಿನಗೋಳ || ಕೋ ||
ಎಣ್ಣೆಯ ಕೊಡಗೋಳು ಬಣ್ಣದು ಬರೂತಾವ
ಮಣ್ಣಾಗ ಬಿದ್ದು ಒಡಿಯಲಿ || ಕೋ ||
ಮಣ್ಣಿನೊಳಗ ಬಿದ್ದು ಒಡಿಯಲಿ ಈ ಊರ
ಹೆಣ್ಣು ಖೋಡೆಂದು ತಿರುಗಲೆ || ಕೋ ||
ತುಪ್ಪದ ಕೊಡಗಳೂ ಒಪ್ಪದಲೆ ಬರೂತಾವ
ತಿಪ್ಪ್ಯಾಗ ಬಿದ್ದು ಒಡಿಯಲಿ || ಕೋ ||
ತಿಪ್ಪ್ಯಾಗ ಬಿದ್ದು ಒಡಿಯಲಿ ಈ ಊರ
ಹೆಣ್ಣು ಖೋಡೆಂದು ತಿರುಗಲೆ || ಕೋ ||
ಹಾಲಿನ ಕೊಡವೊಂದ ಹನ್ನೊಂದ ಬರುವಾಗ
ಅವರಣ್ಣಗ ಸಿಡ್ಲ ಎರಗಲೆ || ಕೋ ||
ಅವರಣ್ಣಗ ಸಿಡ್ಲ ಎರಗಲೆ ಬೇರೂರವರು
ಹೆಣ್ಣಹೆಣ್ಣೆಂದ ತಿರಗಲೆ || ಕೋ ||
ತುಪ್ಪದ ಕೊಡವೊಂದಿಪ್ಪತ್ತ ಬರುವಾಗ
ಅವರಪ್ಪಗ ಸಿಡ್ಲ ಎರಗಲೆ || ಕೋ ||
ಅವರಪ್ಪಗ ಸಿಡ್ಲ ಎರಗಲೆ ಬೇರೂರವರು
ಹೆಣ್ಣಹೆಣ್ಣೆಂದ ತಿರುಗಲೆ || ಕೋ ||

‘ಅಕ್ಕಮಹಾದೇವಿಯ ಹಾಡಿ’ನ ಭಾವ ಸಪ್ಪೆ, ‘ನಿನಮುಕವ ನಿಗಲಿಲ್ಲ’ದರ ಭಾವ ಬಂಧುರವಾಗಿದೆ. ಅಕ್ಕಮಹಾದೇವಿಯ ಹಾಡಿನ ಶಬ್ದಸರಣಿ ಸರಿಯಾಗಿಲ್ಲ, ‘ನಿನ ಮುಕವ ನಿಗಲಿಲ್ಲ’ದಲ್ಲಿ ಶಬ್ದ ಜೋಡಣೆ ಮುಂಗಾರ ಮಳೆಯಂತಿದೆ.

ಅಂತರ್ಜಾತೀಯ ವಿವಾಹಕ್ಕೆ ಸಂಬಂಧಿಸಿದ ಕಥೆಯೊಂದು ಜನಸಾಮಾನ್ಯರಲ್ಲಿ ಪ್ರಚಲಿತವಿತ್ತೆಂಬುದು ಸರ್ವವಿದಿತ.

# ಅನುಬಂಧ

## ನಿನ ಮುಕವ ಸಿಗಲಿಲ್ಲ

ಊರ ಹೊರಗ ಬಂದ ಸ್ವಾಮುನಿಂಗನ ಗುಡಿಯು
ಹಾಲ ಮಜ್ಜನ ಹಡದವ್ವ | ಕೋ |

ಎಡಗೈ ಹಾಲಗಿಂಡಿ ಬಲಗೈ ತಾವರಿ ತುಪ್ಪ
ಯಾವಲ್ಹೋಕ್ಕಿ ನನ್ನ ಹಡದವ್ವ | ಕೋ |

ಹಾಲು ಬಾನಾ ಉಣ್ಣ ಸೀಳಿದಿಳ್ಯೇವ ಮೆಲಿಯ
ನಾರ್‍ಯಾರ ಕೂಡ ನಲದಾಡ | ಕೋ |

ನಾರ್‍ಯಾರ ಕೂಡ ನಲದಾಡ ನನಮಗಳ
ದೇವರ ಸೊರಣಿ ನಿನಗ್ಯಾಕ | ಕೋ |

ತುಪ್ಪಾ ಬಾನ ಉಣ್ಣ ಕಪ್ಪುರದಿಳ್ಯೇವ ಮೆಲಿಯ
ಮಿತ್ರ್ಯಾರ ಕೂಡ ನಲಿದಾಡ | ಕೋ |

ಮಿತ್ರ್ಯಾರ ಕೂಡ ನಲಿದಾಡ ನನಮಗಳ
ದೇವರ ಸೊರಣಿ ನಿನಗ್ಯಾಕ | ಕೋ |

ಹಾಲು ಬಾನಾವೋದ ಹಾದ್ಯಾಗ ಸುರವವ್ವ
ನಾನಿನ್ನ ಬೆನ್ನತ್ತಿ ಬರತೇನ | ಕೋ |

ತುಪ್ಪಾ ಬಾನಾವೋದ ತಿಪ್ಪ್ಯಾಗ ಸುರವವ್ವ
ನಾನಿನ್ನ ಬೆನ್ನತ್ತಿ ಬರತೇನ | ಕೋ |

ಊರ ಹೊರಗ ಇಂದ ಕಾಳಿ ಬೋರ್‍ಯಾಡತಾವ
ಯಾರ ಸತ್ತಾರ ಹಡದವ್ವ | ಕೋ |

ಯಾರೇನ ಸತ್ತಿಲ್ಲ ಯಾರೇನ ಕೆಟ್ಟಿಲ್ಲ
ನಿನ್ನ ನಿಬ್ಬಣ ನನಮಗಳ | ಕೋ |

ನಾಯಿ ಹೆಜ್ಜಿ ಹಾಂಗ ಗೀರಗಂದಾ ಹಚ್ಚಿ
ಸ್ವಾನನಂತಾವ ಇವನ್ಯಾರ | ಕೋ |

ಕತ್ತಿ ಹೆಜ್ಜಿ ಹಾಂಗ ಕಿತ್ತ ಗಂದಾ ಹಚ್ಚಿ
ಕತ್ತಿಹಂತಾವ ಇವನ್ಯಾರ | ಕೋ |

ಅವನ ಕೂಣಾ ನನತಮ್ಮ ಗೊಮ್ಮಟರಾಯ
ಹೊನ್ನ ಚಿನ್ನದಲಿ ಸಂಪನ್ನ | ಕೋ |

ಹೊನ್ನ ಚಿನ್ನದಲಿ ಸಂಪನ್ನನಿದ್ದಲ್ಲೆ
ನಿನ್ನ ಕೊಡತೇನ ನನಮಗಳ | ಕೋ |

ಉದ್ದಿನ ಕಾಳ್ಹಾಂಗ ತಿದ್ದಿ ಲಿಂಗಿದ್ದವಗ
ಗುದ್ದಿ ಕೊಡ ನನ ಹಡದವ್ವ | ಕೋ |

ಗುದ್ದಿ ಕೊಡ ನನ್ನ ಹಡದವ್ವ ಲಿಂಗಿಲ್ಲದ
ಜೈನಾಗ ಕೊಟ್ಟ ಕೊಲಬ್ಯಾಡ | ಕೋ |

ಕಡಲಿಯು ಕಾಳ್ಹಾಂಗ ಕಟದ ಲಿಂಗಿದ್ದವಗ
ಕರದ ಕೊಡ ನನ್ನ ಹಡದವ್ವ | ಕೋ |

ಕರದ ಕೊಡ ನನ್ನ ಹಡದವ್ವ ಲಿಂಗಿಲ್ಲದ
ಜೈನಾಗ ಕೊಟ್ಟ ಕೊಲಬ್ಯಾಡ | ಕೋ |

ಹಾಲಿನ ಕೊಡವಂದ ಹನ್ನೊಂದ ಬರುವಾಗ
ಅವರಣ್ಣಗ ಸಿಡ್ಲ ಎರಗಲಿ | ಕೋ |

ಅವರಣ್ಣಗ ಸಿಡ್ಲ ಎರಗಲಿ ಬೇರೂರವರ
ಹೆಣ್ಣಹೆಣ್ಣಂದ ತಿರಗಲಿ | ಕೋ |

ತುಪ್ಪದ ಕೊಡವಂದ ಇಪ್ಪತ್ತು ಬರುವಾಗ
ಅವರಪ್ಪಗ ಸಿಡ್ಲ ಎರಗಲಿ | ಕೋ |

ಅವರಪ್ಪಗ ಸಿಡ್ಲ ಎರಗಲಿ ಬೇರೂರವರ
ಹೆಣ್ಣಹೆಣ್ಣಂದ ತಿರಗಲಿ | ಕೋ |

ಚಪ್ಪರ್ಹಾಕತಾವ ಹಪ್ಪಳಾಗತಾವ
ಅಕ್ಕ ಮನಿಯಾಗ ಮದುವೇನ | ಕೋ |

ನಮ್ಮನ್ಯಾಗ ಮದವಿಲ್ಲ ನಮ್ಮನ್ಯಾಗ ಮುಂಜಿಲ್ಲ
ನಮ್ಮವನ ತಮ್ಮನs ದಿನಗೋಳ | ಕೋ |

ಹಂದರ್ಹಾಕತಾವ ತಳರ ಕಟ್ಟತಾವ
ತಂಗಿ ಮನಿಯಾಗ ಮದವೇನ | ಕೋ |

ನಮ್ಮನ್ಯಾಗ ಮದುವಿಲ್ಲ ನಮ್ಮನ್ಯಾಗ ಮುಂಜಿಲ್ಲ
ನಮ್ಮವನಪ್ಪನೂ ದಿನಗೋಳ | ಕೋ |

ಚಪ್ಪರ ಬೀಳಲೀ ಹಪ್ಪಳ ಮುರಿಯಲಿ
ಮಿತ್ರ್ಯಾರೈರಾಣಿ ಒಡಿಯಲಿ | ಕೋ |

ರೈತರ ರಾಣ್ಯಾರ ಗೌಡ ಕುಲಕರ್ಣ್ಯಾರ
ಶಡಗರದುಪ್ಯದಾ ಬರತಾರ | ಕೋ |

ಶಡಗರದುಪ್ಯದಾ ಬರತಾರ ಅವರೀಗ
ಸಾವುದೋವೆಂದಕ್ಕಿ ಒಗದಾರ | ಕೋ |

ಆ ನಾಡಿನ ಹೆಣ್ಣ ಈ ನಾಡ್ಗಿ ತಂದೇವಂತ
ಜೋಡಗ್ಯೆ ಹೊಡದ ನಗತಾರ | ಕೋ |

ಜೋಡಗ್ಯೆ ಹೊಡದ ನಗುವಂತ ಜವನರ್ಗೆ
ಮಾಯದ ನಿದ್ದಿ ಕಂವದಾವ | ಕೋ |

ಮಲಗೀದ ಜವನಾರು ವ್ಯೆಮುರದ ಎದ್ದಾರ
ತಣ್ಣೀರ ಗಿಂಡೀಲಿ ಮುಕದೊಳದ | ಕೊ |

ತಣ್ಣೀರ ಗಿಂಡೀಲಿ ಮುಕತೊಳದ ನೋಡ್ಯಾರ
ಹೆಣ್ಣ ಹೋಗೇತ್ಯೀ ವನದೇಸ | ಕೋ |

ಹರಗೂವಣ್ಣಗೋಳಿರ್‍ಯಾ ಹರದೀಯು ಕಂಡಿರ್‍ಯಾ
ಹಗಲಿ ಸೂರ್‍ಯಾನ ಜೆಲವೀಯ | ಕೋ |

ಹಗಲಿ ಸೂರ್‍ಯಾನ ಜೆಲವೀಯ ಕಂಡರ
ಇಟ್ಟ ಬಂಗಾರ ಸಂವಪಾಲ | ಕೋ |

ಬಿತ್ತೂವಣ್ಣಗೋಳಿರ್‍ಯಾ ಮಿತ್ರ್ಯೀಯು ಕಂಡಿರ್‍ಯಾ
ಮತ್ತ ಸೂರಜನ ಜೆಲವೀಯ | ಕೊ |

ಮತ್ತ ಸೂರಜನ ಜೆಲವೀಯ ಕಂಡರ
ಇಟ್ಟ ದಾಗೀನ ಸಂವಪಾಲ | ಕೊ |

ಅಲ್ಲೊಬ್ಬಳ್ಯಾದಾಳ ಹವಳದ ಮಡವೀಗೆ
ದುಕ್ಕದಿ ಮಡವ ಕಲಕೂತ | ಕೋ |

ಇಟ್ಟ ದಾಗೀನೆಲ್ಲಾ ಪಟ್ಟಿಸೆರಗಿಗಿ ಕಟ್ಟಿ
ನಾರಿ ಮುನಗ್ಯಾಳ ಮಡಗೋಳ । ಕೋ ।

ಬಾಳಿಯ ವನಕ ಬಾಗಸ್ರಿ ನಿವ್ಹಾರಗೋಲ
ಬಾಳುಳ್ಳವರ ಮಗಳಯ್ಯಾ । ಕೋ ।

ಬಾಳುಳ್ಳವರ ಮಗಳ ಅಂಬಿಗರಣ್ಣಾ
ಬಾಲಿ ಮುನಗ್ಯಾಳ ಹೊಳಿಸಾಲ । ಕೋ ।

ನಿಂಬಿಯ ವನಕ ಹೊಂದಸ್ರಿ ನಿವ್ಹಾರಗೋಲ
ನಂಬಿಗುಳ್ಳವರ ಮಗಳಯ್ಯಾ । ಕೋ ।

ನಂಬಿಗುಳ್ಳವರ ಮಗಳ ಅಂಬಿಗರಣ್ಣಾ
ರಂಬಿ ಮುನಗ್ಯಾಳ ಹೊಳಿಸಾಲ । ಕೋ ।

ಅಕ್ಕನ ಮಗಳೆಂದ ಅಕ್ಕರತಿಂದಲಾದ್ಯಾ
ಚೊಕ್ಕ ಬಂಗಾರದ ಚೆಲುವೀಯ । ಕೋ ।

ಚೊಕ್ಕ ಬಂಗಾರದ ಚೆಲವಿ ಅಂಬಿಗರಣ್ಣಾ
ಅಕ್ಕನ ಮಗಳೆಂದ ಕರಿಯಲ್ಯಾ । ಕೋ ।

ಮಿತ್ರೀ ನೀ ಮುನಗಿದಲ್ಲಿ ಇಪ್ಪತ್ತಬರೆ ಮುನಗಿದರ
ಮಿತ್ರೀ ನಿನ ಮುಕವ ಸಿಗಲಿಲ್ಲ । ಕೋ ।

ನಾರಿ ನೀ ಮುಳಗಿದಲ್ಲಿ ನಾಲ್ವತ್ತಬರೆ ಮುನಗಿದರ
ನಾರಿ ನಿನ ಮುಕವ ಸಿಗಲಿಲ್ಲ । ಕೋ ।

# ನೀ ಹೋದ ವ್ಯಾಗ

ಧರಣೇಂದ್ರ ಕುರಕುರಿ

ಕನಸಿನ –
ತೆನಿ ಕೊಯ್ದು
ಕಣದಾಗ ಬಣವಿ
ಹಾಕೇನಿ
ಮೇಟಿ ನಿಲ್ಲಿಸಿ ಕರಿಗಣಕ್ಕೆ
ಹಂತೀ ಕಟ್ಟಿ ತುಳಸಬೇಕು
ಅನ್ನೂದರೊಳಗ–
ಅಡಮಳಿ ಹೊಡದು ನೆಲ
ನೆನದು
ಮೇಟಿ ಕಿತ್ತು, ಹಂತಿ ಕಟ್ಟಿದ
ನೆನಪೆಲ್ಲ ಹರಕೊಂಡು
ಸಿಕ್ಕತ್ತ ತುಳದಾಡಾಕ ಹತ್ಯಾವು
ಬಣಿವ್ಯಾಗ ನೀರಿಳಿದು
ತೆನಿ ಮುಗ್ಗಿ ಗೊಮ್ಮಂತ
ನಾತ,
ಮುಗ್ಗಲಕ ಹಾದು ಹೋಗುವವರು
ವಾಕರಿಕಿ ಬಂದು ಮೂಗು
ಮುಚಗೊಂಡs ಹೋಗಬೇಕು.

ನಾ–
ತಿರಾರಗೇಡಿ ಲಗೂನs ಕಣಾ
ಮಾಡಿ ತೆನಿ ತುಳಸಗೊಂಡು
ಸುಗ್ಗೀ ಮಾಡಬೇಕನ್ನೂ
ಅವಸರ, ಇನ್ನ
ಜಕ್ಕಸ್ತ ಮೂಗ ಮುಚಗೊಂಡು
ಮುಗ್ಗಿದ ಕಾಳs
ತಿನ್ನಬೇಕು.

ಮತ್ತ ಅದs ಮೇಟಿ
ನಿಲ್ಲಸಬೇಕು, ಬೆನ್ನ ಹತ್ತಿ
ತಿರವ್ಯಾಡಿ ನೆನಪೆಲ್ಲ
ಹಿಡಕೊಂಡ ಬರಬೇಕು, ಹಂತಿ
ಕಟ್ಟಬೇಕು.
ನೆನದ ನೆಲದಾಗ ಮೇಟಿ
ನಿಲ್ಲೋದಿಲ್ಲ, ಹಸಿ
ಆರೂ ಮಟ ನಿಲ್ಲಬೇಕು, ನಿನ್ನ
ದಾರೀ ಕಾಯsಬೇಕು.

# ದಿಕ್ಕುಗಳು

ಎಸ್. ಎಸ್. ಹಿರೇಮಠ

ಬಾಗಿಲು ತೆರೆದು ಕಾಲೊರಸನ್ನು ಮೆಟ್ಟಿ, ಒಳಗೆ ಬಂದಾಗ ಅಲಂಕಾರವಾಗಿಟ್ಟ ಪ್ಲಾಸ್ಟಿಕ್ ಹೂಗಳ ಗೊಂಚಲು ಹೊತ್ತ ಹೂದಾನಿ. ಅಡಿಗೆ ಮನೆಯಿಂದ ಇಣಕಿ, ಯಾವ ಪ್ರತಿಕ್ರಿಯೆಯೂ ಕಾಣದೆ, ಹಿಂದಿರುಗಿ ಹೋದ ಮುಖ.

ಸಂಜೆ ಮುಂಜಾವುಗಳ ಒತ್ತಾಯ, ಒತ್ತಡಗಳ ಭಾರವನ್ನೆಲ್ಲ ಇಳಿಸಿ ಸೋತು ಬಂದು, ನೂಕಿದಾಗ ತನಗೆ ತಾನೆ ತೆರೆದುಕೊಳ್ಳುವ ಬಾಗಿಲಿನೊಳಗೆ ಅದೇ ಮುಖ. ಮೈತೊಳೆದು ಅನಿವಾರ್ಯಕ್ಕೆ ತಿಂದೆದ್ದು, ತಟ್ಟೆಯಲ್ಲಿ ಕೈತೊಳೆಯದೆ, ಎದೆಯುಬ್ಬಿ ಹಾಸಿಗೆಗೆ. ಸಂಜೆ ರಾತ್ರಿಗಳಲ್ಲಿ 'ಕಿರ್' ಎಂದು ಶ್ರುತಿ ಹಿಡಿದ ಟ್ಯುಬ್‌ಲೈಟಿನ ದನಿ.

ಮಧ್ಯಬಿಂದುವಿನಲ್ಲಿ ಸೋರಿ ಹೋಗಿ, ಜೋಲಾಗಿ ಕಾಲ ನಡುವೆ ತಲೆ ಸಿಕ್ಕಿಸಿಕೊಂಡು ಶೂನ್ಯವನ್ನು ನಿಟ್ಟಿಸುತ್ತಿರುವಾಗ—ಹಿಂದಿನವೆಲ್ಲ ತೆರೆದುಕೊಂಡು ಕುಣಿಯುತ್ತವೆ. ಪತಿವ್ರತ, ಪತ್ನೀವ್ರತಗಳ ರಾಮ-ಸೀತೆಯರ ಸಾಂಕೇತಿಕ ಕನಸಿನ ಲೋಕದಲ್ಲಿ ಸಿನೇಮಾ ಲಗ್ನ ಮಾಡಿದ್ದು. ಅಪ್ಪ ಅವ್ವನಿಗೂ ಅಂತ ದತ್ತವಂತೆ ಅವಳ ಕೈಹಿಡಿದು ಜಾರಿ, ತೇಲಿ, ಈಸಿ, ಮುಳುಗಿ, ಉಸಿರು ಕಟ್ಟಿದಾಗ ಅವ್ವ, ಅಪ್ಪ ನೆನಪಾಗಿ, ಕಾರಿನಲ್ಲಿ ಅವರ ಕಾಲು ಹಿಡಿದು ಅತ್ತು, ಕಿತ್ತೊಗೆಸಿಕೊಂಡು ಪಾಪಪ್ರಜ್ಞೆಗೆ ನೆಲವಾದದ್ದು.

ನಡುಮನೆಯ ಬಚ್ಚಲಲ್ಲಿ ಉದ್ರೇಕಿತ ಏಕಾಂತ. ಜೀವಸಂಕೀರ್ಣತೆಯ ಒತ್ತಡದ ನಿಮಿಷಗಳಲ್ಲಿ ಅವಳ ಅವಶ್ಯಕತೆ, ಸ್ಖಲನ. ಆಕೆಗೂ ಬೇಕಾಗಿರಬಹುದು. ಸೆಳೆತದಲ್ಲಿ ಅಪ್ಪಿ ಕೊಚ್ಚಿಹೋದಾಗ ಹೂಗಳು ಬಾಡಿ, ತೊಟ್ಟು ಕಳಚಿದ ಹಣ್ಣೆಲೆಯು ಬುಡದಲ್ಲಿ ಚಿಗುರೆಲೆಯು ಕೂಡಿ, ಬಿಸಿಲಿಳಿದು ಮಬ್ಬಾಗುವಂತಿದ್ದು, ದೀಪಗಳಿರದ ಬೀದಿಯಲ್ಲಿ ಬದಿಯ ಕೊಚ್ಚೆ ಕೆರೆಯಂಚಿನಲ್ಲಿ ಹಾವುಗಳಿಗೆ ಹೆದರಿ ದಾಪುಗಾಲು ಹಾಕಿದ್ದು……

ಬಾಗಿಲು ಬಡಿವ ಸಪ್ಪಳ. ಅವಳೆದ್ದು ಬಾಗಿಲು ತೆರೆದಾಗ ಕೇಳಿ ಬಂದವ ನನಗಪರಿಚಿತ. ಇಲ್ಲೇಕೆ ಬಂದ? ನಕ್ಕು ಹೋದ. ಟ್ರಕ್ಕಿನ ಗಾಲಿ ನೆಲದ ಧೂಳನ್ನು ಹಾರಿಸಿ ಗುರುತುಳಿಸಿ ಹೋಗಿ.

ಅವಳು ಮುಖವಾಡ ಹೊತ್ತ ಮುಗ್ಧೆ. ಪ್ರದರ್ಶನದ ಗೊಂಬೆ. ಅಂತ ರಂಗಕ್ಕೆ ವೇಷ ಹಾಕಿ ಕಾಣಲಾರದ, ಬೇರೊಂದು ಮೇಲುದ ಹೊದ್ದ ಆಕಾರ. ಘಾತುಕನಾಗಿ, ಹರಿತವಾಗಿ, ಕೊರೆವ, ಕೊರೆಸಿಕೊಳ್ಳುವ ಪಶಿಯ ಪ್ರತಿಯಾಗಿ ಅವಳ ಕಪ್ಪು ಕಲೆಗಳನ್ನು ಕೆತ್ತಿ ಮುಖಕ್ಕೆ ರಾಡಿ ಸಿಡಿಸಿಕೊಳ್ಳುತ್ತೇನೆ. ರೇಡಿಯೋ ಬೇಕೆನ್ನುತ್ತಾಳೆ. ವಿಪರೀತ ಸೆಕೆ, ಫ್ಯಾನು ತರುತ್ತೇನೆ. ಫಿಲ್ಮಿಗೆ ಹೋಗೋಣ ವೆನ್ನುತ್ತಾಳೆ. ಶಾರದಾಮಣಿ ಪರಮಹಂಸರ ಪುಸ್ತಕವನ್ನು ಕೊಡುತ್ತೇನೆ. ಹೊರಗೆ, ಒತ್ತಡವಿಳಿಸಿ ಹಗುರಾಗುವ ಬಯಕೆಯಾಕೆ.

ಆಗೊಮ್ಮೆ ಅವನನ್ನು ಜತೆ ಕರೆತಂದಾಗ, ಹಾಗೆ ಹೀಗೆ ಎಂದು ಆತ ಕೊಚ್ಚಿಕೊಳ್ಳುತ್ತಾನೆ. ಪ್ರಪಂಚ ಬಿಚ್ಚುತ್ತಾನೆ. ಅವಳ ಜತೆಗೆ ಮತ್ತೆ ಬಂದ, ಪಾಪಮೂಲಾದ. ಅವರ ಮೌನ ಕರಗಿ ನನ್ನ ಬೆಸುಗೆ ಸಡಿಲಿಸಿತ್ತು. ಗಂಟೆದನಿ, ನಾಡಿ ಬಡಿತವಾಗಿ ಎಣಿಕೆಯ ಮೇಲೆ ಎಣಿಕೆ. ಪ್ರತೀಕ್ಷೆಯ ದಾರಿಯಲ್ಲಿ ಕಿಟಕಿ ಕಣ್ಣಾಗಿ ಬಿರುಕು ಬಿಟ್ಟವಳು.

ಸೀತೆಯದೆ ಯೋಚನೆ. ಅವಳದು ತಪ್ಪಿಲ್ಲ. ಆಕೆಯ ಸುತ್ತ ಮಡಿಯಾಗಿ ನಿಂತು, ಮಡಿ ಮಾಡಿ ಬೆಳೆಸಿದ ಹುತ್ತದ ಪೂಜೆ ಮಾಡುತ್ತ ಬಂದ ಗಂಡು ಜಾತಿಯ ದಬ್ಬಾಳಿಕೆ, ಮೋಸಗಾರಿಕೆಯಲ್ಲಿ ಕಮರಿ, ಕೊಳೆತ ಅಪರಾಧಿ ನಂಬಿಕೆಗಳು.

ಮುಖದ ಮೇಲಿನ ಸೆರಗಿಗೆ ಕಣ್ಣುಮೂಡಿದಾಗ ಅವನು ಸುಂದರ ನಾಗಿದ್ದ. ಕಾತರತೆಗೆ ಸ್ಫೂರ್ತಿ. ತನಗರಿವಿಲ್ಲದೆ ಒಪ್ಪಿ, ಅವನ ಮುಗುಳುನಗೆಗೆ ಉತ್ತರಿಸಿದ್ದು. ರಜೆಯಲ್ಲಿ ಹಳ್ಳಿಗೆ ಹೋದಾಗ ಶಂಕರ ಹೇಳಿದ. ಎಳಕ ಆಕಳು ನೂರ ಹೋರಿಗಳ ಬಿರುಸು-ಮುರಿಸಿನ ಸೆರೆ ಕುಡಿದು ಕುಣಿದ ಸುದ್ದಿ.

ತೆರೆದ ಬಾಗಿಲಲ್ಲಿ ಕಾಲಿಡುವುದಕ್ಕಿಂತ ಮೊದಲು ಕಂಡ ತಪ್ಪು ಯಾರದು? ಮೂಲದಲ್ಲಿರುವ ಬೇರು ರಸ-ಕಸ ಹೀರಿಕೆ. ಹಾಲುಣಿಸಿ ಬೆಳೆಸಿದ್ದು.

ಅವರ ಮೂಲ ಪ್ರವೃತ್ತಿ ಹೆಡೆಯಾಗಿ, ನನಗೆ ಮೀಸೆ ಬೋಳಿಸಹಚ್ಚಿದ್ದು. ನಕ್ಕವರಿಗೆ ನಗೆಯಿಂದ ಉತ್ತರಿಸಲಾಗದೆ ಎಲ್ಲ ಕಳೆದೊಗೆದು, ಬತ್ತಲೆಯಾಗಿ ಓಡಿದಾಗ ಬಲಶಾಲಿ. ನಿರ್ಜನ ಪ್ರದೇಶಕ್ಕೆ ಬೆನ್ನಟ್ಟಿ ಬಂದವರ ಗೈರಹಾಜರಿ. ಕುಕ್ಕರಿಸಿ ತಲೆ ಮೇಲೆತ್ತಿದಾಗ—ಬೆಳೆದ ಮೀಸೆಯಾಗಿಲ್ಲವೆ?

ಚಿಂತನೆಯಲ್ಲಿ, ಅದು ನೆಲ. ಬೆಳೆದ ಜೋಳ, ಹತ್ತಿ, ಕಬ್ಬು. ಎಲ್ಲಿಯೊ ಕೂಡಿ ಕಾಳಾಗಿ ಜೀವವಾದದ್ದು. ಅದು ನೀರು. ಏನನ್ನೋ ಸೇರಿಸಿಕೊಂಡು, ಎಲ್ಲಿಯೊ ಹರಿದು ಜಾರುತ್ತ ಹೋಗಿ ಜೀವವಾದದ್ದು. ಜೀವಿಗಳಿಗೆಲ್ಲ ಉಸಿರಾದ ಗಾಳಿ.

ಹೊಸ ಗಾಳಿಗೆ ಅವಳನ್ನಂಟಿಸಬೇಕು. ಪಥ್ಯ ಬೇಡ. ಅವಳನ್ನಪ್ಪಬೇಕು. ಅವನ ಮೇಲಿನ ಸಿಟ್ಟು–ಪಾಕರಿಕೆಗಳನ್ನೆಲ್ಲ ಕರುಳು ಕಿತ್ತುಬರುವಂತೆ ಕಾರಿ, ಸಾಕು–ಸಾಕೆನಿಸಬೇಕು.........ಎನಿಸಿದರೂ ಬಾರದ. ಬಂಡೆಗಲ್ಲಿನ ಮಧ್ಯದಲ್ಲಿ ಆಮೆಯನ್ನೆಚ್ಚರಿಸುವ ಹೆಡೆಯಾಗಿ ಬೆದರಿಕೆ, ಹೆದರಿಕೆ. ಓಡಿ ಹೊರಟಾಗ ಕಾಲು ಹಿಡಿವ ಕ್ಷಮೆಯ ನಾಟಕ. ಸಿಂಬಳ ಸೀಟಿ ಕೊಂಡಿ ಜೋಡಿಸಲೆತ್ನಿಸುತ್ತಾಳೆ. ಮತ್ತೆ ಹರಕಲು ಚಾಪೆಯ ಹಾಸು–ಹೊಕ್ಕುಗಳ ಬಣ್ಣದ ರಾಡಿ ಚಿತ್ರಕ್ಕೆ ಮೈಯೊರಗಿಸಿ.

ಪಾಟಿ ಹೋದವನು ನಿನ್ನೆಯವನು. ಮೂಡದಂತೆ, ಮುಳುಗಿ ಹಾಕಿ, ಅಚ್ಚಳಿಯದ ಗುರುತಿನಲ್ಲಿ ಸತ್ತು ಹೋದವನು. ಅವಳು ಒಂದು ವಿರೂಪ. ಬಯಕೆ ಬತ್ತಲೆಗೆ ಕೃತಕ ನೆಯ್ಗೆಯಾಗಿ ಗೋಡೆ–ಜೇಡಾಗಿ, ಹೈಹೀಲ್ಡಿಯಾಗಿ ಕಾಡು ಗಿಡವಾಗಿ, ಮೂಲದಲ್ಲಿ ಬಾಲವಾಗಿ ಬಂದವಳು.

ಇತ್ತ ತಿರುಗಿಯಾಳು. ಉರುಳಿದಂತೆ, ಕೊರೆಸಿಕೊಂಡಂತೆ, ಮಾಗಿ ಮೂಡಿಯಾಳು ಇಸ್ಪೀಟಿಲಿ ಕೂಡಿಸಿ ಕಳೆದುಕೊಳ್ಳುವವರಲ್ಲಿ. ಹೊಗೆ ವಿಸ್ಕಿಗಳ ಬಿಸಿ ತಾಕಿಸಿಕೊಂಡು ಅವರನ್ನು ಮರೆಯಲೆತ್ನಿಸಿದಾಗ, ಸುಮಿಯನ್ನು ಅಂದು ಬಯಸಿ ಕಾಡಿ ಕೈ ಮುಟ್ಟಿ ಕೆಣಕಿದ್ದು ತಪ್ಪಲ್ಲವೆ? ಅಂದಾಗ ಇವಳದೇನು ವಿರೂಪ? ಬಸ್ಸು ಹತ್ತುವಾಗ ನೋಡ–ನೋಡುವ ಯಾವಳನ್ನೋ ಬರೀ ನೋಡಿಯೇ ನೋಡಿದ್ದು. ಗಾಳಿಗೆ ಗರಿ ಮೂಡಿಸಿ ಗಾಳಿಪಟ ಹಾರಿಸಿದ್ದು. ಯಾರದೋ ತಿಕಕ್ಕೆ ಆಶಿಸಿದ್ದು. ಅವರೆಲ್ಲರೂ ಆಗಾಗ ಬಂದು ಕೆಣಕಿ, ಕೆದರಿ, ನಕ್ಕು, ಬತ್ತಲೆಯಾಗಿ ಹೋಗುತ್ತಿಲ್ಲವೆ?

ಬಾರಿನಿಂದ ಹೊರಗೆ, ಬೀದಿ. ಬೆಳಕು–ಕತ್ತಲೆಗಳ ಮಧ್ಯದಲ್ಲಿ ಡೊಂಬರಾಟ ಮಾಡುತ್ತ, ಉದ್ದ–ಗಿಡ್ಡ ನೆರಳಾಗಿ ಈಸುತ್ತ ಬರುವಾಗ—ಅಂದು ಹಳ್ಳಿಯಲ್ಲಿ ಹಿರಿಯನಿಗೆ ಹೇಳಿದ್ದೆ. 'ಅಕಿನ್ನಪ್ಪs, ಮಾಡಿದsನ. ಇವನಂಗ ಹಾದರ ಮಾಡಿ ಸಾದು ಅನಿಸಿಗೊಂಡ, ಸೋಗ ಹಾಕಿಲ್ಲ. ತನ್ನದs ತೋಳಕೊಳ್ಳದ ನನ್ನ ಬಗ್ಗೆ ಆಡಿಕೋತಾನಲ'.

ಆಕೆಯನ್ನು ಮಾಡುವಾಗ ಯಾರ್ಯಾರೊ ಮೂಡಿಬಂದು ಅವರನ್ನು ಭಾವಿಸಿಕೊಂಡನುಭವಿಸಿದ್ದು ಹಾದರವಾಗಿರಲಿಲ್ಲವೆ? ನಾನೆ ತತ್ತಿಯೊಡೆದು ಹುಟ್ಟಿಬರಬೇಕು. ಭೂತ–ಸಂಸ್ಕೃತಿ ಮೂಲ ಮಧ್ಯದಿಂದ, ನಿಷಿದ್ಧೀಕೃತ ಗೋಡೆಗಳ ಮಧ್ಯೆ, ಉಸಿರು ಕಟ್ಟಿಸಿಕೊಳ್ಳದೆ ಬಾಂಬಾಗಿ ಸಿಡಿದದ್ದು ಬಂದಾಗಲೇ ಆಕೆ ಸೀರೆ ಬಿಚ್ಚುತ್ತಾಳೆ. ಇನ್ನು ರಂಬಾಟ ಮಾಡುತ್ತ ತೊಲೆಬಾಗಿಲಲ್ಲಿ ಲೊಚಗುಡುವ ಹಲ್ಲಿಯಾಗಿ ಮುಚ್ಚಿಕೊಳ್ಳಲಿಕ್ಕಿಲ್ಲ.

ಕುಡಿದೆ, ಒಪ್ಪಲಿಲ್ಲ. ಕತ್ತಿಗೆ ಲತ್ತೆ. ಕುಡಿದೆ, ಹಾಳಾದೆ! ಕೊಂಡು-ಕೊಂಡು, ಕೊಲ್ಲುತ್ತ, ಸಾಯುವ ಇರುವ ಹೆಣಗಳು. ಇನ್ನಾವನೋ ಬಂದ. ಬಾಗಿಲು ತೆರೆದು ಇಷ್ಟಡ್ಡಗಲಾಗಿ, ಉದ್ದಾಗಿ, ಬಂದ; ನಗಿಸಿದ. ಅವಳು ಮೈಮರೆತು ನಗೆಯಾಗಿ ಜಾರಿದ್ದು! ಮತ್ತೆ ಎಚ್ಚರಾಗಿ ಹಿಂದೆ ಹಿಂದೆ ನನ್ನನ್ನು—ತನ್ನನ್ನು ನೋಡುತ್ತಿರಬಹುದೆಂದು—ಆಗಾಗ ಕದ್ದು ನೋಡುತ್ತಿರುತ್ತಾಳೆ. ನೋಡಿಯೂ ನೋಡದಂತೆ ನಟಿಸುತ್ತೇನೆ. ಊರು ದಾಟುತ್ತೇವೆ. ಗುಡ್ಡ, ಹೊಲ, ಗಿಡಗಳೆಲ್ಲ ತಂತಿಯ ಹಿಂದೆ ದಾಟುತ್ತವೆ. ಇಬ್ಬರೂ ಮತ್ತೆ ಮತ್ತೆ ನೋಡಿ ತುಂಬಿ, ತುಳುಕದಂತೆ ನಗುತ್ತಾರೆ—ಯಾರಿಗೂ ಕೇಳಿಸದಂತೆ ಅಥವಾ ಕೇಳಿಸಿಲ್ಲವೆಂಬಂತೆ.

ಪಾಪಮಾಡಿದರೂ ಪ್ರಜ್ಞೆ ಮೂಡಲಿಲ್ಲ. ಹೊಗೆ ಬಿಟ್ಟ, ಶಿಸ್ಕ ಬಿಟ್ಟ. ದನಿವಾದರೂ ತಡೆದುಕೊಂಡು ಒದೆಯುವ ನಿಂತೆ. ಬಸ್ಸು ಇಳಿದಾಗ ಅವನು ನನ್ನನ್ನೆ ದುರುಗುಟ್ಟಿ ನೋಡಿ ತನ್ನಷ್ಟಕ್ಕೆ ತಾನು ಹಾಯಾಗಿ ಕುಹಕ ನಗೆಯಾಗಿ ಹೋಗುತ್ತಾನೆ. ಅಂಟುರೋಗದಿಂದ ಮುಕ್ತನಾಗುವ ಮೂರನೆ ದಂತಕ್ಕೆ ಗಾಂವಟಿಯಾಗಿ ನಿಲ್ಲುತ್ತೇನೆ. ಸೆರಗು ಹೊದ್ದು ಇಳಿದು ಬರುತ್ತಾಳೆ. ಟೈ ಬಿಗಿದು ನಿಂತಿದ್ದೇನೆ.

ತಾಕೀತು ಕರಾರು ದೇಖರೇಖ ಅದದ್ದು ದಲಪ್ರಸಲ. ಕೊನೆಗೆ ಉಳಿದದ್ದು ಬೈ ಬೈ ಹೇಳಿಕೆ. ಪೂರ್ವಕ್ಕೆ ನಾನು ಹತ್ತಿ, ಆರು ಹೆಜ್ಜೆಗಳ ಹಿಂದಿನ ಪಶ್ಚಿಮದ ದಾರಿಯಲ್ಲಿ ಮೂಡಲು ಅವಳನ್ನು ಹತ್ತಿಸಿ.

ಕೂದಲು ಸೀಪಿ, ಬಯಲಲ್ಲಿ ಬರೆದು, ಅಳಿಸಿ, ಬರೆದು ಮಳೆ-ಚಳಿಗಳಿಗೆ ಮೈಯೊಡ್ಡಿ, ಮತ್ತೆ ಬಿಸಿಲನ್ನೆಲ್ಲ ಮೈತುಂಬಿ ನಿಂತಾಗ, ಮೈಮರೆತು ಕಾಲಿಟ್ಟು ಇಳಿದು ಹೋಗಿ ಸೋರಿ ಸತ್ತು ಹೋಗಬೇಕು...

ಮಾನಸಿಕ ಮೂಲದಲ್ಲಿ ‘ಬೇಸೂರಾ’ದ ಹಾವಸೆ ಮೇಲೆ ನಡೆದ ನಿದ್ದೆ ಅವಳು. ಆಕೆ ಸಹಜ. ವಾಸ್ತವಿಕವಾಗಿ ಪಡೆಯಬಯಸಿ, ಒಡೆಯುವ ಓಗಟನಂತೆ ನೇರವಾಗಿರದ ‘ನಕರಾ’ ಮಾಡಿ ಪೋಜು ಕೊಡುತ್ತ ನುಸುಳುತ್ತಾಳೆ. ಬದುಕಲೆತ್ನಿಸಿ ಸೆಟೆದು, ಹಾರಲೆತ್ನಿಸಿದ ಆಕೆಯ ಕ್ಷಿತಿಜದಿಂದ ತೀರ ದೂರಾಗಿದ್ದೇನೆ.

ತಪ್ಪು. ಆಗಿ ಬಂದವನು ನಾನು, ಆಗಿ ಬಂದವಳು ಅವಳು. ಮಮತ್ವದ ಕಲಕು-ಮಲುಕಿನಲ್ಲಿ ಚಪ್ಪಟೆಯಾಗಿ ಗಿಡವಾಗಲೆತ್ನಿಸಿದ್ದು ವ್ಯರ್ಥ. ಅವರು ಬಂದರು, ಇವರು ಸೇರಿದರು. ಗಾನ ಹೊಂದಲಿಲ್ಲ. ಅದು ಒತ್ತಾಯ-ಒತ್ತಡಗಳ ಮಧ್ಯೆ ತಡವಾದ, ತಡೆದಿರದ ಬೇಕುಗಳ, ಕಣ್ಣಿಲ್ಲದ ದಬದಬೆಯ ಚಿತ್ರ. ಅವಳು ಹೋದ ಕಾಡುದಾರಿ ಗುರುತಿರದ ಕಾಣದ ದೂರದಲ್ಲೆಲ್ಲೋ.

ನಾನು—ಹೀಗಿದ್ದೇನೆ.

# ನಿರ್ಗಮನ

ದೇವೇಂದ್ರಕುಮಾರ ಹಕಾರಿ

… … … … … … … … … … … … … … …
… … … … … … … … … … … … … … …
ಮುಗಿಲುಗಳು ಮುತ್ತಿಟ್ಟು ಬೆಳೆದ ಪಟ್ಟನೆ ಕಾಡು, ಬಾನಾಚೆ ಹಬ್ಬಿ,
ಹಿಮರಾಶಿರಾಶಿಯಲಿ ಮೂರದೂರಕೆ ಅರಳ ಹೂದಾರಿ ದಾರಿ;
ಹರಡಿ ನಂದಿಯುಗಂಟೆ ನುಣ್ದನಿಯ ಮೆಲ್ವಾಸು;
ಗಿರಿಗಿರಿಯ ದರಿಯಲ್ಲಿ ಗಿರಿಜ ದರಹಾಸ;
ತ್ರಿಪುರಗಳ ಸುಟ್ಟುರಿದ ಉಗ್ರ ಕಿಚ್ಚಿನಕುಂಡ
ಎಲ್ಲವನ್ನೂ ತನ್ನ ಅಂಗ ನುಂಗಿ;
ತನ್ನಂದವನು ತನ್ನ ಉಸಿರು ನುಂಗಿ
ಮತ್ತೆ ತೆರೆತೆರೆ ಮಂಜು… … … … …
ಸೃಷ್ಟಿ ಮಂಜಿನ ಪಂಜ ಹಿಡಿದಾಡಿ ಹಿಗ್ಗುತಿದೆ
… … … … … … … … … … … …
ಯಾರವರು ಏಕಾಕಿ?
ಬಯಲಬತ್ತಲ ಕುದುರೆ ಏರಿ, ಹಿಮಶೃಂಗವೆಡೆ ಮಿಂಚು ನೆಗೆತ;
ಕಂಪಿಸಿತು ಹಿಮಶೈಲ;
ನೆಲದಿಂದ ಮೊಗವೆತ್ತಿ ಮುಕ್ಕಿರುವ ಹಿಮಬಂಡೆಯಡಕಿಲಲಿ
ಹೊಡಮುರಿದ ಕ್ರುದ್ಧ ಝುಂಝಾವಾತ
ಹಿಮದ ಅಡಕಿಲು ಕಡಿದು,
ಕಡಿದು ಕುಪ್ಪನೆ ಕುಸಿದು,
ಗೊತ್ತಿರದ ಆಳಕ್ಕೆ,
ಅರಿಯದ ತಳಕ್ಕೇ ಜಾರಿ…ಜಾರಿ…
ತ್ರಿಪುರಾಂತಕರ ಕೆರೆ?…
ಕೆರೆಯ ಕರೆ ಕಡಲುಕ್ಕಿ
ಸುತ್ತು ಹೆದ್ದೊರೆ ಹೊಡೆವ ನಭನಗಾರಿ…
ಇದ್ದಕ್ಕಿದ್ದಂತೆಯೇ ಯಜ್ಞ ಕುರಿಗಳ ರಕ್ತ,
ರಕ್ತ ತನ್ನೆದೆ ಪದರ ಹೊಕ್ಕು ಅಕ್ಕಾಡಿಸಿತು
ಹುದುಲಲ್ಲಿ ಸಿಕ್ಕು, ಕ್ರಂದಿಸುವ ಪಶುಗೋಳು,
ತನ್ನ ಕರುಳಲಿ ಚಲಿಸಿ ಬೆರಳಾಡಿಸಿ, ನರಳಾಡಿಸಿ
ಮತ್ತೆ, ಕತ್ತರಿಸಿ ಬೆರಳುಗಳು

ನರದ ತಂತಿಗಳೆಲ್ಲ ಛಿದ್ರಛಿದ್ರ...
ತಲೆಗೆ ಎಟುಕಿದ ಮುಗಿಲು
ತಲೆಗಿಂತ ಕಿರಿದಾಗಿ ತೂಗುತ್ತಲಿದೆ;
ಮುಗಿಲನ್ನೆ ಮೆತ್ತಿ ನೆಕ್ಕುತಿದೆ ನೆತ್ತರು
ಸಿಡಿಲು, ಗುಡುಗು;
ಕ್ಷಿತಿಜಗಳ ರೆಪ್ಪೆಯಲಿ ಶೂನ್ಯಬಿಂದು
ಒಂದು ನೂರೊಂದರಲಿ—ನೂರು ವರ್ಣದ ಖಂಡ,
ಅಖಂಡ ಜ್ಯೋತಿರ್ವಲಯ ನಿಬ್ಬೆರಗಿನೊಬ್ಬುಳಿ...
ಬಯಲಕಾಯುವ ಹೊತ್ತ ಶೂನ್ಯಪುರುಷನ ಮೋಹಚುಂಬಕದ
ಒಪ್ಪಚಿ ಅಗಲುತ್ತ, ಒಪ್ಪಚಿ ಕೂಡುತ್ತ
ಅಗಲಿ ಕೂಡುತ್ತ, ಕೂಡಿ ಅಗಲುತ್ತ
ಬೆರೆಯುತ್ತ, ಕರಗುತ್ತ... ಕರಗುತ್ತ, ಬೆರೆಯುತ್ತ...
... ... ... ... ... ... ... ... ... ... ... ... ... ... ... ...
ಜಾರಿಹೋಗುವ ಸ್ವಪ್ನವನ್ನು ಹಿಡಿದವನಂತೆ
ಛಕ್ಕನೇ ಎಚ್ಚತ್ತು, ಎದ್ದು ಕುಳಿತನು ಬಸವ;
ತಾ ಕುಳಿತ ನೆಲೆ... ಅಚ್ಚರಿ; ನೆಲೆಯ ನೆಲೆ
ಸ್ಥಲದ ಸೆಲೆ ಎಟುಕಿಲ್ಲ;
ಎಡುಕುವೆಡೆ ಕೈಯಿಲ್ಲ—ಇಲ್ಲ ಕಾಯ...
ಮಹಮನೆಯ ಮೇಲುಮನೆ
ಕುದಿಯುತಿದೆ ರಾತ್ರಿ
ಕರೆಯುತಿದೆ ಧಾತ್ರಿ
ಬಿಚ್ಚುತಿದೆ ನೆಲಮುಗಿಲ ಬೆಸೆದ ಸಂದು;
ಸುರಿಯುತ್ತಲಿದೆ ಕಾಂತಿ, ಬೆಳಕು ಮೈಯಾಗಿ
ಒಳಗು, ಹೊರಗು
ಅರ್ಚನೆಗೆ ಅಣಿ ಮಾಡಿ, ಬಂದು ನಿಂತಳು ಅಂಬೆ
ಪೃಥ್ವಿಯಂತೆ;
ಚೆಲ್ಲಿ ಹೂನಗೆ ಅದೇ ಬೆಳಗಿನಂತೆ...
ಕವಿದಿತ್ತು ಮೌನ.
ಆ ಮೌನ ಚಣಚಣಕೆ ಪರಿಮಳಿಸಿ ಹರಡಿತ್ತು ಮಹಮನೆಯ ತುಂಬ.
ಮುಕ್ತ ಭಸಿತವ ಹೂಸಿ, ಹೊದೆದು ತೇಜವ
ಮೆಟ್ಟಿ ಕರಣದಾವುಗೆ, ಏರಿ ಸಪ್ತಮದದಶ್ವಗಳ;
ವೇಗಕೂ ಮುನ್ನಡೆದ... ...ಟಕ ಟಕಾ ಟಕ ಟಕಾ

‘ಸಂಗಮಕೆ?’
ಅಂಬಿಕೆಯ ಪ್ರಾಣ, ನರಳಿದ ಪ್ರಶ್ನೆ?
ಉತ್ತರದಿ ಮೌನ, ಸಿರಿಗಂಧ ಬಂಧ...
ಮಹಮನೆಯ ಮುಂಬಾಗಿಲಲ್ಲಿ ಆ ನಿಮಿಷಕ್ಕೆ
ಕುದುರೆ ಹೇಷಾರವದಿ ತಡೆದಿತ್ತು ಗಕ್ಕನೇ;
ನೆಲದ ತಲದಲ್ಲಿಯೇ ಹೂತಂತೆ ಕಾಲು;
ಮರುಗಳಿಗೆ ಆರೂಢಶಕ್ತಿ, ಭಕ್ತಿಯ ಹಸ್ತ ಚಾಚಿ
ಬಾನಾಚೆ...
ಸೀಮ ನಿಸ್ಸೀಮಗಳ ನುಂಗಿ ಸ್ಥಿತವಾಗಿತ್ತು.
ಮಹಮನೆಯ ಮೊಗಸಾಲೆಯಿಂದಲೇ ನೋಡುತ್ತ
ನಿಂತ ನೀಲಾಂಬೆ,
ಹೊರಳಿ ನೋಡಿದಳೊಮ್ಮೆ
ಪೂಜೆಮನೆ ಕಡೆಗೆ;
‘ಬತ್ತುವಂತಿದೆ ಎಣ್ಣೆ ಹಣತೆಯಲ್ಲಿ!’
ಹಣತೆ ಹತ್ತಿರ ಸಾರಿ,
ಮತ್ತೆ ಎಣ್ಣೆಯನೆರೆದು ಕುಡಿಚಾಚೆ,
ಮೊಗತೊಳಗಿ ಬೆಳಗಿತ್ತು ಹೊನ್ನಕಾಂತಿಯಲಿ!
ಕಾಂತಿಗೋಲದ ಮೇಲೆ ಅಶ್ರುಜಲದಭಿಷೇಕ;
ಕರಗಿತ್ತು ಅಸ್ತಿತ್ವ ಆಕಾಶದಾಳದಲಿ
ಅಶ್ವವೇಗದಲಿ... ...
ಒಡೆದ ಪಣತೆಯ ಐದು ತುಣುಕು ಒಂದೇಬಾರಿ
ಮಿಡುಮಿಡುಕಿ ಹುಡುಕಿದವು;
ಈ ನನ್ನ ಎದೆಯಲ್ಲಿ ಮಿಂಚು ಬೀಜವ ಬಿತ್ತಿ
ಮರೆಯಾದ ಅವನೆಲ್ಲಿ? ಬಿರಿದಿತ್ತು ನೆಲ!
ಮತ್ತೆ, ಬಿಂದುವಿನ ಒಳ-ಹೊರಗು ಕರುಣಸಿಂಧುವ ತುಂಬಿ
ಕರಗಿರುವನೆಲ್ಲಿ?
ನೀರಡಿಸಿ ನೀರು ಕರೆದಿತ್ತು ಮೊರೆದಿತ್ತು!
ಅಗ್ನಿದಿವ್ಯವ ನನ್ನ ಆಳದಲಿ ಹೊಮ್ಮಿಸಿದ
ಎಲ್ಲಿ ಆ ಪುರುಷ?
ಬೆಂದಿತ್ತು ಬೆಂಕಿ!
ನನ್ನ ಪ್ರಾಣದಿ ಉಸಿರನೂದಿ ಪ್ರಣವದಿ ಕಣ್ಣ
ತೆರೆಸಿದವನೆಲ್ಲಿ?

ಉಸಿರಾಟ ಕಟ್ಟುತ್ತ ಮಿಡುಕಿದ್ದ ಗಾಳಿಗೇ!
ಎಲ್ಲಿ ಕಾಯಂದಿ ಬಯಲ ಕಡೆದಿಟ್ಟು, ಕೈಲಾಸ ಕೈಯಲ್ಲಿ
ತಂದವನು?
ಆಕ್ರಂದಿಸಿತು ಅಸ್ತವ್ಯಸ್ತ ಆಕಾಶ!!
ಎಲ್ಲ ಒಂದೇಬಾರಿ ಮೊರೆದು ನಿಂತುವು
‘ಅಯ್ಯ—ಹೋಗದಿರು’ ತೊರೆದು
ನಮ್ಮೆದೆಯು ಈ ಪಂಚಪೀಠಗಳ ಮೇಲೆಯೇ
ನಿನ್ನ ಅರ್ಚನೆಗಾಗಿ ಅಣಿಯಾಗಿದೆ
ನಿನ್ನ ಸೃಷ್ಟಿಯು ಸ್ವಪ್ನ ಸತ್ಯವಾಗುವ ಕ್ಷಣದ ಹಂಬಲದಿ
ಎಲ್ಲರೂ ಉಸಿರನ್ನು ಅಂಗೈಲಿ ಹಿಡಿದು,
ಕಾದು ಕುಳಿತಿದ್ದೇವೆ;
ಅಂದಿನಿಂದಲೂ ಹೀಗೆ
ದಶಮಾನ...ಶತಮಾನ...
ನೀ ನಿನ್ನ ಕೈಯಾರ ಸೃಷ್ಟಿಸಿದ ಕಲ್ಯಾಣ
ಬಿಟ್ಟು ಬರಿದಾಗಿ, ಬರಿದುಬರಿದು!
ಈ ನೆಲದ ನೀಲಾಂಬಿ ಅಂಬರದಿಗಂಬರವ ಹೊದೆದು
ನಕ್ಷತ್ರಗಳ ಕಣ್ಣೀರ ಪನ್ನೀರ ಚಿಮುಕ್ಕಿ ಬಿಕ್ಕುವಳು
ದಿಕ್ಕುಗಳ ಕೊರಳಲ್ಲಿ ಡಂಗುರದ ಢಂಡಣ
‘ಕಲ್ಯಾಣ...ಕಲ್ಯಾಣ...ಕಲ್ಯಾಣ’

( ಬಸವಣ್ಣನವರ ಕಲ್ಯಾಣ ನಿರ್ಗಮನದ ನಿಗೂಢ ಕ್ಷಣ )

# ಇಬ್ಬರು ಪಾಶ್ಚಿಮಾತ್ಯ ದ್ರಾವಿಡಭಾಷಾವಿಜ್ಞಾನಿಗಳು

ಮಹಿಮ

'ದ್ರಾವಿಡಭಾಷೆ' ಎಂದೊಡನೆ ನಮ್ಮ ಗಮನ ಕೇವಲ ತಮಿಳು, ಕನ್ನಡ, ಮಲೆಯಾಳಂ, ತೆಲುಗಿನ ಕಡೆ ಹರಿಯುತ್ತದೆ. ಕುರುಖ್, ಬ್ರಾಹೂಯಿ, ಮಾಲ್ತೊ, ಕೊಲಾಮಿ, ಪರ್ಜಿ, ಗದಬ, ತೋಡ, ಕೋಟ, ಕುವಿ, ಕುಯಿ ಮುಂತಾದ ಭಾಷೆಗಳು ಇವೆ ಎನ್ನುವ ಕಲ್ಪನೆಯೂ ಅನೇಕರಿಗೆ ಬರುವುದಿಲ್ಲ. ದಕ್ಷಿಣ ಏಷಿಯಾದಲ್ಲಿ ಸುಮಾರು ೧೫ ಕೋಟಿಗೂ ಅಧಿಕ ಜನ, ಮಾತನಾಡುವ ದ್ರಾವಿಡ ಭಾಷೆಗಳ ಒಟ್ಟುಸಂಖ್ಯೆ ೨೨. ಈ ದ್ರಾವಿಡಭಾಷೆಗಳ ಅಧ್ಯಯನ ನಡೆಸಿದವರಲ್ಲಿ ಪಾಶ್ಚಿಮಾತ್ಯ ವಿದ್ವಾಂಸರು ಅನೇಕರಿದ್ದಾರೆ. ಕನ್ನಡ ಎಂದೊಡನೆ ಕನ್ನಡಕ್ಕಾಗಿ ದುಡಿದ ಡಾ. ರೆವರೆಂಡ್ ಎಫ್. ಕಿಟೆಲ್ಲರ ನೆನಪು ಬರುವಂತೆ, ಮಲೆಯಾಳಂ ಎಂದೊಡನೆ ಗುಂಡರ್ಟ್‌ರ ನೆನಪು ಮೂಡುವಂತೆ, ದ್ರಾವಿಡ ಎಂದೊಡನೆ ದ್ರಾವಿಡಭಾಷೆಗಳಿಗೆ ಅಪೂರ್ವ ಸೇವೆಸಲ್ಲಿಸಿದ ಡಾ. ರೆವರೆಂಡ್ ಬಿಷಪ್ ಕಾಲ್ಡವೆಲ್‌ರ ನೆನಪು ಸಾಮಾನ್ಯವಾಗಿ ಬರುತ್ತದೆ. ಪಾಶ್ಚಿಮಾತ್ಯ ವಿದ್ವಾಂಸರಲ್ಲಿ ಅನೇಕರು ಕ್ರೈಸ್ತಮಿಷನರಿಗಳಾಗಿ ಭಾರತಕ್ಕೆ ಬಂದು, ಇಲ್ಲಿಯ ಭಾಷೆಗಳನ್ನು ಕಲಿತು, ಅವರ ಮೂಲಕ ತಮ್ಮ ಧರ್ಮಪ್ರಚಾರ ಮಾಡುವ ಉದ್ದೇಶ ಹೊತ್ತುಬಂದವರು. ಇದಕ್ಕೆ ಕಾಲ್ಡವೆಲ್‌ರೂ ಹೊರತಾದವರಲ್ಲ. ಆದರೂ ಈ ಮಿಷನರಿಗಳು ಇಲ್ಲಿಯ ಭಾಷೆಗಳ ಅಧ್ಯಯನಮಾಡಿ, ವ್ಯಾಕರಣ ಮತ್ತು ಶಬ್ದಕೋಶಗಳ ಭಂಡಾರವನ್ನು ಶ್ರೀಮಂತವನ್ನಾಗಿಸಿದ್ದಾರೆ. ಕಾಲ್ಡವೆಲ್‌ರು ೧೮೫೬ರಲ್ಲಿ ಬರೆದ "ದ್ರಾವಿಡ ಅಥವಾ ದಕ್ಷಿಣಭಾರತ ಭಾಷಾಸಂಸಾರದ ತುಲನಾತ್ಮಕ ವ್ಯಾಕರಣ" [Comparative Grammar of Dravidian or South Indian Family of Languages], ದ್ರಾವಿಡ ಭಾಷೆಗಳ ತುಲನಾತ್ಮಕ ಅಧ್ಯಯನದಲ್ಲಿ ಹಿರಿಯ ಕಾಣಿಕೆಯಾಗಿದೆ. ದ್ರಾವಿಡಭಾಷೆಗಳ ಬಗ್ಗೆ ಕುರುಡರಾಗಿದ್ದ ವಿಶ್ವದ ಅನೇಕ ಭಾಷಾವಿಜ್ಞಾನಿಗಳಿಗೆ ಅದು ಕಣ್ಣು ತೆರೆಯುವಂತೆ ಮಾಡಿತು. ದ್ರಾವಿಡಭಾಷೆಗಳು ಸಂಸ್ಕೃತದಿಂದ ಜನಿಸಿವೆ, ಇವು ಸ್ವತಂತ್ರ ಭಾಷೆಗಳೇ ಅಲ್ಲ ಎಂದು ವಾದಿಸುತ್ತಿದ್ದ ಅನೇಕ ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ವಿದ್ವಾಂಸರ ಸಂಸ್ಕೃತದ ಗರದಿಂದ ವಿಮುಕ್ತ ಮಾಡಿದ ಕೀರ್ತಿ ಕಾಲ್ಡವೆಲ್‌ರಿಗೆ ಸೇರುತ್ತದೆ.

ಇಂಡೋ-ಯುರೋಪಿಯನ್ ಭಾಷೆಗಳಲ್ಲಿ ನಡೆದ ಕ್ರಮಬದ್ಧವಾದ ಅಧ್ಯಯನ ದ್ರಾವಿಡಭಾಷೆಗಳಲ್ಲಿ ನಡೆದಿರಲಿಲ್ಲ. ಕೆಲವು ವಿದ್ವಾಂಸರಿಗೆ ದ್ರಾವಿಡ ಭಾಷೆಗಳು ಸ್ವತಂತ್ರವಾದ ಗುಂಪಿಗೆ ಸೇರುತ್ತವೆ ಎಂದೆನಿಸಿದರೂ ಅದನ್ನು ನೇರ ವಾಗಿ ಹೇಳುವ ದಿಟ್ಟತನ ಯಾರಿಗೂ ಬಂದಿರಲಿಲ್ಲ. ಈ ಎರಡನ್ನೂ ಕಾಲ್ಡ್‌ವೆಲ್‌ರ ಈ ಪ್ರಥಮ ಪ್ರಯತ್ನದ ಫಲವಾದ ದ್ರಾವಿಡ ತುಲನಾತ್ಮಕವ್ಯಾಕರಣ ಗ್ರಂಥದಲ್ಲಿ ಕಾಣುತ್ತೇವೆ. ಈ ಗ್ರಂಥ ಅನೇಕಜನ ಪಾಶ್ಚಿಮಾತ್ಯ ಮತ್ತು ಪೌರ್ವಾತ್ಯ ವಿದ್ವಾಂಸರ ಗಮನ ಸೆಳೆಯಿತು. ಹಾಗೆಯೇ ಭಾರತ ಸರಕಾರದಿಂದ ನೇಮಿಸ ಲ್ಪಟ್ಟ ಜಾನ್ ಅಬ್ರಾಹಿಂ ಗ್ರಿಯರಸನ್‌ರವರು ಭಾರತೀಯ ಭಾಷೆಗಳ ಪರಿ ವೀಕ್ಷಣೆ ನಡೆಸಿ ೧೯೦೫-೧೯೨೭ರ ವರೆಗೆ ಸುಮಾರು ಹದಿಮೂರು ಸಂಪುಟಗಳಲ್ಲಿ "ಭಾರತದ ಭಾಷಾವೈಜ್ಞಾನಿಕ ಪರಿವೀಕ್ಷಣೆ" [Linguistic Survey of India] ಯನ್ನು ಪ್ರಕಟಿಸಿದರು. ಅನೇಕ ಲೋಪದೋಷಗಳಿದ್ದರೂ ಈ ಗ್ರಂಥ ವಿಶ್ವದ ಭಾಷಾಶಾಸ್ತ್ರಜ್ಞರಿಗೆ ಭಾರತೀಯ ಭಾಷೆಗಳತ್ತ ಗಮನ ಹರಿಯುವಂತೆ ಮಾಡಿತು.

ಕಾಲ್ಡ್‌ವೆಲ್‌ರ ತರುವಾಯ ದ್ರಾವಿಡಭಾಷೆಗಳ ಕ್ರಮಬದ್ಧ ಅಧ್ಯಯನ ನಡೆಸಿ ಈ ಕ್ಷೇತ್ರಕ್ಕೆ ಹೊಸ ಚೈತನ್ಯಕೊಟ್ಟ ಕೀರ್ತಿ, ಇಬ್ಬರು ಪಾಶ್ಚಿಮಾತ್ಯ ಭಾಷಾ ವಿಜ್ಞಾನಿಗಳಿಗೆ ಸೇರುತ್ತದೆ. ಆ ಇಬ್ಬರ ಪರಿಚಯವನ್ನು ಮಾಡಿಕೊಡುವುದು ಈ ಲೇಖನದ ಉದ್ದೇಶವಾಗಿದೆ. ಈ ಕ್ಷೇತ್ರದ ಪರಿಚಯವಿಲ್ಲದವರಿಗೆ ಹೊಸಬ ರಾಗಿ ಕಾಣುವ ಇವರು ನಡೆಸಿದ ಸಂಶೋಧನೆ, ದ್ರಾವಿಡಭಾಷೆಗಳ ಕ್ರಮಬದ್ಧ ಅಧ್ಯಯನಕ್ಕೆ ಸ್ಫೂರ್ತಿಯ ಸೆಲೆಯಾಗಿದೆ. ತಮಿಳುನಾಡಿನ ಅಣ್ಣಾಮಲೈ ವಿಶ್ವ ವಿದ್ಯಾಲಯ, ಪೂನಾದ ಡೆಕ್ಕನ್ ಕಾಲೇಜ, ಕೇರಳ ವಿಶ್ವವಿದ್ಯಾಲಯಗಳು ಹೊಸ ಹೊಸ ಸಂಶೋಧನೆ ನಡೆಸಿ ದ್ರಾವಿಡಭಾಷೆಗಳ ಅಧ್ಯಯಕ್ಕೆ ಭದ್ರವಾದ ತಳಹದಿ ಹಾಕಿಕೊಟ್ಟಿವೆ. "ದ್ರಾವಿಡ ಭಾಷಾವೈಜ್ಞಾನಿಕ ಸಂಸ್ಥೆ" (Dravidian Linguistic Association), "ಭಾರತೀಯ ಭಾಷಾವೈಜ್ಞಾನಿಕ ಸಂಸ್ಥೆ" (Linguistic Society of India), "ಭಾರತೀಯ ಭಾಷಾಸಂಸ್ಥೆ" (Central Institute of Indian Languages) ಗಳು ಅನೇಕ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಸಮ್ಮೇಳನಗಳನ್ನು ನಡೆಸಿ, ಮುಕ್ತವಾದ ಚರ್ಚೆ ಮತ್ತು ಅಧ್ಯಯನಕ್ಕೆ ದಾರಿಮಾಡಿಕೊಟ್ಟಿವೆ. ದ್ರಾವಿಡಭಾಷೆಗಳ ಅಧ್ಯಯನಕ್ಕೆ ಸ್ವರೂಪ ಕೊಟ್ಟ ಜೋಡಿ ಭಾಷಾವಿಜ್ಞಾನಿಗಳಾದ ಡಾ. ಮರ್ರೆ ಬಿ. ಎಮಿನೊ. (Dr. Murray B. Emeneau) ಮತ್ತು ಪ್ರೊಫೆಸರ್ ಥಾಮಸ್ ಬರೊ (Professor Thomas Burrow) ಅವರ ಪರಿಚಯ ಅವಶ್ಯವಾಗಿದೆ.

## ಡಾ. ಮರ್ರೆ ಬಿ. ಎಮಿನೊ :

೧೯೦೪ರಲ್ಲಿ ಕೆನಡಾದೇಶದ ನೋವಸ್ಕಾಟಿಯಾದಲ್ಲಿ ಜನಿಸಿದ ಎಮಿನೊ, ಬಾಲ್ಯಜೀವನವನ್ನು ಅಲ್ಲಿಯೇ ಕಳೆದನು. ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಶಾಸ್ತ್ರೀಯ ಅಧ್ಯಯನ ಮುಗಿಸಿ, ಕ್ಯಾಲಿಫೋರ್ನಿಯಾ ಮತ್ತು ಬರ್ಕಲಿ ವಿಶ್ವವಿದ್ಯಾಲಯಗಳಲ್ಲಿ ಸಂಸ್ಕೃತ ಮತ್ತು ಸಾಮಾನ್ಯ ಭಾಷಾವಿಜ್ಞಾನ, (General Linguistics)ದ ಪ್ರೊಫೆಸರ್ ಆಗಿದ್ದರು. ೧೯೩೫ ರಿಂದ ೧೯೩೮ರ ವರೆಗೆ ಭಾರತಕ್ಕೆ ಬಂದು ಅನೇಕ ಅ-ಸಾಹಿತ್ಯಿಕ (non-Literary) ಭಾಷೆಗಳ ಅಧ್ಯಯನ ನಡೆಸಿದರು. ಆ ಭಾಷೆಗಳ ಶಬ್ದನಿಷ್ಪತ್ತಿ (Etymology) ಮತ್ತು ತುಲನಾತ್ಮಕ ವ್ಯಾಕರಣ (Comparative Grammar) ದ ಅಧ್ಯಯನ ನಡೆಸಿ ಅನೇಕ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಪಾಶ್ಚಿಮಾತ್ಯರೊಬ್ಬರು ಬಂದು ಇಲ್ಲಿಯ ಭಾಷೆಯ ಅಧ್ಯಯನ ನಡೆಸಿ, ಆ ಭಾಷೆಯ ವಸ್ತುವಿನ ಬಗೆಗೆ ಸ್ಪಷ್ಟ ಅಭಿಪ್ರಾಯ ಮೂಡಿಸಿದ್ದುದು ಒಂದು ಅಮೂಲ್ಯಕೊಡುಗೆಯಾಗಿದೆ. ಮಧ್ಯದ್ರಾವಿಡಭಾಷೆಯಾದ 'ಕೊಲಾಮಿ'ಯ ಬಗ್ಗೆ ಅಧ್ಯಯನ ನಡೆಸಿ 'ಕೊಲಾಮಿ' (Kolami) ಎನ್ನುವ ಗ್ರಂಥವನ್ನು ಬರೆದಿದ್ದಾರೆ. ದಕ್ಷಿಣದ್ರಾವಿಡಭಾಷೆಯಾದ 'ಕೋಟಾ' (Kota) ದ ಬಗ್ಗೆ ಅಧ್ಯಯನ ನಡೆಸಿ, ನಾಲ್ಕುಭಾಗಗಳಲ್ಲಿ ಕೋಟಾಪಠ್ಯ (Kota Text Part I-IV) ವನ್ನು ೧೯೪೪-೧೯೪೬ ರಲ್ಲಿ ಪ್ರಕಟಿಸಿದ್ದಾರೆ. ಹೀಗೆಯೇ ೧೯೫೫ ರಲ್ಲಿ 'ದ್ರಾವಿಡಭಾಷೆ' (Dravidian Language), ೧೯೬೨ರಲ್ಲಿ 'ಬ್ರಾಹೂವಿ ಮತ್ತು ದ್ರಾವಿಡ ತುಲನಾತ್ಮಕವ್ಯಾಕರಣ' (Brahui and Dravidian Comparative Grammar) ಎನ್ನುವ ಗ್ರಂಥಗಳನ್ನೂ ಬರೆದಿದ್ದಾರೆ. ೧೯೬೧ರಲ್ಲಿ ಆಕ್ಸ್‌ಫರ್ಡ ವಿಶ್ವವಿದ್ಯಾಲಯದ ಪ್ರೊಫೆಸರ್ ಟಿ. ಬರೊ ಅವರೊಡನೆ "ದ್ರಾವಿಡ ಶಬ್ದನಿಷ್ಪತ್ತಿ ನಿಘಂಟು" (A Dravidian Etymological Dictionary) ಎನ್ನುವ ಗ್ರಂಥವನ್ನು, ೧೯೬೮ರಲ್ಲಿ ಇದರ ಅನುಬಂಧ (Supplement)ವನ್ನೂ ಪ್ರಕಟಿಸಿದರು. ಈ ಗ್ರಂಥದಲ್ಲಿ ಈ ಜೋಡಿ ಭಾಷಾವಿಜ್ಞಾನಿಗಳ ದ್ರಾವಿಡಭಾಷೆಯ ಆಳವಾದ ಪಾಂಡಿತ್ಯವನ್ನು ಕಾಣಬಹುದು. ಇವರು ನೀಲಗಿರಿಯ ಬುಡಕಟ್ಟುಜನಾಂಗಶಾಸ್ತ್ರದ ಬಗ್ಗೆ ಅಧ್ಯಯನ ನಡೆಸಿ, ಸಂಶೋಧನೆಯನ್ನು ಪ್ರಕಟಿಸಿದ್ದಾರೆ. ಇವರ ಇನ್ನೂ ಕೆಲವು ಗ್ರಂಥಗಳಾದ ಇಂಡೋ-ಆರ್ಯನ್ ಭಾಷೆಗಳಲ್ಲಿ ದ್ರಾವಿಡಶಬ್ದಗಳು Dravidian Borrowings from Indo-Arayn), ಇಂಡಿಯಾ ಮತ್ತು ಐತಿಹಾಸಿಕವ್ಯಾಕರಣ (India and Historical Grammar) 'ತೋಡ ಹಾಡುಗಳು' (Toda Songs) ಮತ್ತು ಪತ್ಯ, ಇವುಗಳಲ್ಲಿ ಇವರ ಅಪಾರ ಪಾಂಡಿತ್ಯವನ್ನು ಕಾಣಬಹುದು. ೧೯೫೬ರಲ್ಲಿ ಪ್ರಕಟವಾದ "ಭಾರತ ಒಂದು ಭಾಷಾವೈಜ್ಞಾನಿಕ

ಕ್ಷೇತ್ರ"[೧] (India as a Linguistic Area) ಎನ್ನುವ ಲೇಖನವು ಅನೇಕ ಜನ ವಿದ್ವಾಂಸರ ಗಮನಸೆಳೆಯಿತು. 'ಜನಾಂಗಶಾಸ್ತ್ರ ಮತ್ತು ಜಾನಪದ ಕಥೆಗಳು' ಸಂಕಲನವು ೧೯೬೭ ರಲ್ಲಿ ಪ್ರಕಟವಾಯಿತು. (Ethnology and Folktales : collected papers).

ಇವರು ೧೯೩೧ರಲ್ಲಿ ಯೇಲ್ ವಿಶ್ವವಿದ್ಯಾಲಯ (Yale University) ದಿಂದ ಪಿಎಚ್. ಡಿ. ಪದವಿ ಗಳಿಸಿದರು. ಇವರ ಅಮೂಲ್ಯ ಸಂಶೋಧನೆಗಾಗಿ ೧೯೬೮ರಲ್ಲಿ ಚಿಕ್ಯಾಗೊ ವಿಶ್ವವಿದ್ಯಾಲಯದವರು ಎಲ್. ಎಚ್. ಡಿ. (Doctor of Human Letters) ಪದವಿಯನ್ನು, ೧೯೭೦ ರಲ್ಲಿ ಡಾಲ್‌ಹೌಸಿ ವಿಶ್ವವಿದ್ಯಾಲಯದವರು ಎಲ್. ಎಲ್. ಡಿ. (Doctor of Laws) ಪದವಿಯನ್ನೂ ಕೊಟ್ಟು ಗೌರವಿಸಿದರು. ೧೯೪೯ ರಲ್ಲಿ "ಅಮೇರಿಕಾ ಭಾಷಾವಿಜ್ಞಾನ ಸಂಸ್ಥೆ" (Linguistic Society of America)ಯ ಮತ್ತು ೧೯೫೪-೫೫ರಲ್ಲಿ "ಅಮೇರಿಕನ್ ಓರಿಯಂಟಲ್ ಸೊಸೈಟಿ"ಯ (American oriental Society) ಅಧ್ಯಕ್ಷರಾಗಿದ್ದರು. ೧೯೫೨ರಲ್ಲಿ "ಅಮೇರಿಕೆಯ ತತ್ವಶಾಸ್ತ್ರ ಸಂಸ್ಥೆ" (American Philosophical Society)ಗೆ ಆಯ್ಕೆಯಾದರು. ಇವರು ೧೯೬೬ ರ ವರೆಗೆ "ಅಂತರರಾಷ್ಟ್ರೀಯ ತಮಿಳು ಅಧ್ಯಯನ ಸಂಘದ ಉಪಾಧ್ಯಕ್ಷರಾಗಿ, ಜೊತೆಗೆ ಭಾರತದ ಭಾಷಾವಿಜ್ಞಾನ ಸಂಘದ ಗೌರವ ಸದಸ್ಯರಾಗಿ, ಗ್ರೇಟ್‌ಬ್ರಿಟನ್ನಿನ ಏಷಿಯಾಟಿಕ್ ಸೊಸೈಟಿಯ ಗೌರವ ಫೆಲೋ ಆಗಿ ಸೇವೆ ಸಲ್ಲಿಸಿದ್ದಾರೆ. ೧೯೬೮ ರಲ್ಲಿ ಪೂನಾದ ಡೆಕ್ಕನ್ ಕಾಲೇಜು ಮತ್ತು ಅಣ್ಣಾಮಲೈ ವಿಶ್ವವಿದ್ಯಾಲಯದ ಭಾಷಾವಿಜ್ಞಾನ ವಿಭಾಗಗಳು ದ್ರಾವಿಡಭಾಷೆಗಾಗಿ ದುಡಿದ ಈ ವಿಜ್ಞಾನಿಯ ಷಷ್ಠ್ಯಬ್ದಪೂರ್ತಿ (ಅರವತ್ತು ವರುಷ ತುಂಬಿದ ನೆನಪಿಗಾಗಿ)ಯ ನೆನಪಿಗಾಗಿ "ಭಾರತೀಯ ಭಾಷಾವೈಜ್ಞಾನಿಕ ಅಧ್ಯಯನ" ಎನ್ನುವ ಗ್ರಂಥವನ್ನು ಅರ್ಪಿಸಿದ್ದಾರೆ. ಭಾರತೀಯ ಭಾಷಾವಿಜ್ಞಾನ ಇತಿಹಾಸಕ್ಕೆ, ಪ್ರಮುಖವಾಗಿ ದ್ರಾವಿಡಭಾಷಾವಿಜ್ಞಾನಕ್ಕೆ ಎಮಿನೊ ಅವರು ಸಲ್ಲಿಸಿದ ಸೇವೆ ಅಪಾರವಾಗಿದೆ.

**ಪ್ರೊ. ಥಾಮಸ್ ಬರೊ :**

೧೯೦೯ರಲ್ಲಿ ವೆಸ್ಟ್‌ಮೋರ್‌ಲ್ಯಾಂಡ್ (Westmoreland)ದ ಕರ್ಕಬಿ ಲಾನ್ಸ್‌ಡೇಲ್(Kirkby Lonsdale)ನಲ್ಲಿ ಜನಿಸಿದ ಇವರು, ಪ್ರಾಥಮಿಕ ಅಧ್ಯಯನ ಮುಗಿಸಿ ೧೯೨೮ರಲ್ಲಿ ಕೇಂಬ್ರಿಜ್‌ದ ಕ್ರಿಸ್ತ ಕಾಲೇಜನ್ನು ಸೇರಿದರು. ಅಲ್ಲಿ ಓರಿಯಂಟಲ್ ಭಾಷೆಗಳಾದ ಸಂಸ್ಕೃತ, ಪಾಲಿ, ಪ್ರಾಕೃತಗಳ ಅಧ್ಯಯನ

೧. Indian as a Linguistic Area : Language, Vol. 32, 1956.

ನಡೆಸಿದರು. ಅಲ್ಲಿಯೇ ೧೯೩೫ ರಿಂದ ೧೯೩೭ರ ವರೆಗೆ ರೀಸರ್ಚ ಫೆಲೋ ಆಗಿ ಸೇರಿದರು. ೧೯೩೭ ರಿಂದ ೧೯೪೪ರ ವರೆಗೆ ಬ್ರಿಟಿಶ್ ಮ್ಯೂಜಿಯಂ ದ ಓರಿಯಂಟಲ್ ವಿಭಾಗದಲ್ಲಿ ಪುಸ್ತಕ, ಹಸ್ತಪ್ರತಿಗಳ ಸಹಾಯಕ ಸಂಗ್ರಾಹಕರಾಗಿ ನಂತರ ಆಕ್ಸಫರ್ಡ ವಿಶ್ವವಿದ್ಯಾಲಯದ ಸಂಸ್ಕೃತ ಪ್ರಾಧ್ಯಾಪಕರಾದರು.

ಡಾ. ಎಮಿನೊ ಅವರಂತೆ ಟಿ. ಬರೊ ಅವರೂ ದ್ರಾವಿಡ ಭಾಷೆಗಳ ಸಂಶೋಧನೆಗಾಗಿ ಬಹಳ ಶ್ರಮಿಸಿದ್ದಾರೆ. ೧೯೫೦-೫೧ ರಲ್ಲಿ ಭಾರತಕ್ಕೆ ಬಂದ ಇವರು ಇಲ್ಲಿಯ ಮಧ್ಯದ್ರಾವಿಡಭಾಷೆಗಳಾದ ನಾಯಿಕಿ (Naiki) ಗೊಂದಿ (Gondi) ಯ ಬಗ್ಗೆ ವಸ್ತು ಸಂಗ್ರಹಣೆ ನಡೆಸಿದರು. ಪ್ರೊ. ಸುಧಿಭೂಷಣ ಭಟ್ಟಾಚಾರ್ಯರೊಂದಿಗೆ ಪರ್ಜಿ (Parji) ಭಾಷೆಯ ವಸ್ತುಸಂಗ್ರಹಣೆ ನಡೆಸಿದರು. ಇವರು ಈ ಭಾಷೆಯ ವ್ಯಾಕರಣವನ್ನು ರಚಿಸಿ ಅದನ್ನು ಪ್ರಕಟಿಸಿದರು. ಸಂಸ್ಕೃತದಲ್ಲಿ ವಿದ್ವಾಂಸರಾದ ಇವರು "ಸಂಸ್ಕೃತಭಾಷೆ" ಎನ್ನುವ ಗ್ರಂಥವನ್ನು ಪ್ರಕಟಿಸಿದ್ದಾರೆ. ಇನ್ನೂ ಅನೇಕ ಮಧ್ಯದ್ರಾವಿಡ ಅ-ಸಾಹಿತ್ಯಿಕ ಭಾಷೆಗಳ (non-literary languages) ಅಧ್ಯಯನ ನಡೆಸಿ, ಅವುಗಳ ವ್ಯಾಕರಣ ತಯಾರಿಸಿದ್ದಾರೆ. ಆ ಸಾಲಿನಲ್ಲಿ ಕುಯಿ (Kui) ಕುವಿ (Kuvi) ಗದಬ (Gadaba) ಭಾಷೆಗಳ ಅಧ್ಯಯನವನ್ನೂ ನೋಡಬಹುದು.

ಪ್ರೊ. ಎಮಿನೊರವರೊಡನೆ ಸಹಲೇಖಕರಾಗಿ ರಚಿಸಿದ "ದ್ರಾವಿಡ ಭಾಷೆಗಳ ಶಬ್ದನಿಷ್ಪತ್ತಿ ನಿಘಂಟು (A Dravidian Etymological Dictionary) ಮತ್ತು ಇದರ ಅನುಬಂಧ (Supplement) ಇವರ ಪ್ರೌಢ ಪಾಂಡಿತ್ಯಕ್ಕೆ ಸಾಕ್ಷಿಯಾಗಿದೆ. ಇವರ ಅನೇಕ ದ್ರಾವಿಡ ಭಾಷೆಗಳಿಗೆ ಬಂಬಂಧಿಸಿದ ಪ್ರಬಂಧಗಳು ಪ್ರಕಟವಾಗಿ ಚದುರಿಹೋಗಿದ್ದವು. ದ್ರಾವಿಡಭಾಷಾವಿಜ್ಞಾನಿಗಳು, ಸಂಶೋಧಕರು ಅವಶ್ಯವಾಗಿ ಓದಬೇಕಾದ ಇವರ ಪ್ರಬಂಧಗಳು ಒಂದೇಕಡೆ ಲಭ್ಯವಾಗಲಿ ಎಂದು ಅಣ್ಣಾಮಲೈ ವಿಶ್ವವಿದ್ಯಾಲಯದವರು "Collected Papers on Dravidian Linguistics" ಎನ್ನುವ ಹೆಸರಿನಿಂದ ಸಂಗ್ರಹಿಸಿದ್ದಾರೆ. ಬರೊ ಅವರ ಈ ಗ್ರಂಥಕ್ಕೆ ಮುನ್ನುಡಿ ಬರೆಯುತ್ತ ಮಧುರೈ ವಿಶ್ವವಿದ್ಯಾಲಯದ ನಿವೃತ್ತ ಉಪಕುಲಪತಿಗಳೂ, ಶ್ರೇಷ್ಠ ಭಾಷಾಶಾಸ್ತ್ರಜ್ಞರೂ ಆದ ಶ್ರೀ ಟಿ. ಪಿ. ಮೀನಾಕ್ಷಿಸುಂದರಂ ಅವರು ಹೇಳಿದ "ಅವರ ದ್ರಾವಿಡ ಅಧ್ಯಯನದ ಪ್ರಬಂಧಗಳು ದ್ರಾವಿಡಭಾಷಾವಿಜ್ಞಾನದಲ್ಲಿ ಹೊಸಯುಗವನ್ನೇ ಪ್ರಾರಂಭಿಸಿದವು … …"[೨] ಎಂಬ ಮಾತುಗಳು ಔಚಿತ್ಯಪೂರ್ಣವಾಗಿವೆ.

---

೨. "His essays on Dravidic Study started a new era in Dravidian Linguistics… …"

T. P. Meenakshi Sundaram.

(Foreward, Collected Papers on Dravidian Linguistics)

ಈ ಇಬ್ಬರು ಪಾಶ್ಚಿಮಾತ್ಯ ಭಾಷಾವಿಜ್ಞಾನಿಗಳು ಜೀವಂತ ಇರುವಾಗಲೇ ಪ್ರಾರಂಭಿಸಿದ ದ್ರಾವಿಡಭಾಷಾಜ್ಞಾನದ ಅಧ್ಯಯನ, ನಾಡಿನ ಪ್ರಮುಖ ವಿಶ್ವವಿದ್ಯಾಲಯಗಳ ವಿವಿಧ ಶಾಖೋಪಶಾಖೆಯಾಗಿ ಬೆಳೆಯುತ್ತಿದೆ. ಇನ್ನು ಇಪ್ಪತ್ತು ವರ್ಷಗಳಲ್ಲಿ ಹೊಸಜನಾಂಗದ ದ್ರಾವಿಡಭಾಷಾವಿಜ್ಞಾನಿಗಳಿಂದ ಹೊಸಹೊಸ ಸಂಶೋಧನೆಗಳು ನಡೆಯುತ್ತವೆಯೆಂದು ನಿರೀಕ್ಷಿಸುವ ಪ್ರೊ. ಟಿ. ಬರೊ ಅವರ ವಿಶ್ವಾಸಕ್ಕೆ ಅನೇಕ ತರುಣ ದ್ರಾವಿಡಭಾಷಾವಿಜ್ಞಾನಿಗಳು ಸಾಕ್ಷಿಯಾಗಿ ನಿಂತಿದ್ದಾರೆ.

## ಸಹಾಯಕ ಗ್ರಂಥಗಳು


1. Dravidian Comparative Phonology a Sketch
—M. B. Emeneau

2. Current Trends in Linguistics, Vol. 5

3. Collected Papers on Dravidian Linguistics
—Prof. T. Burow

4. Linguistic Survey of India

5. Language, Vol. 32, 1956

6. ಐತಿಹಾಸಿಕ ಭಾಷಾವಿಜ್ಞಾನ—ಡಾ. ಜಿ. ಎಸ್. ಕುಳ್ಳಿ

7. Dravidian Etymological Dictionary
—M. B. Eneneau and T. Butrrow

8. Comparative Grammar of Dravidian or South Indian Family of Languages —Robert Bishop Caldwell

# ಚನ್ನಬಸವಣ್ಣನವರ ಹೆಚ್ಚಿನ ವಚನಗಳು

ಸಂ: ಎಂ. ಜಿ. ಬಿರಾದಾರ

ಹಳೆಯ ಕಾಗದದ, ತೀರ ಜೀರ್ಣವಾದ ಹಸ್ತಪ್ರತಿಯೊಂದು ತಿಕೋಟಾದ ಶ್ರೀ. ವಿರುಪಯ್ಯ ರಾಮಯ್ಯ ಸಾಲೀಮಠ ಅವರ ಮುಖಾಂತರ ನನಗೆ ಈಗ ಎರಡು ವರ್ಷಗಳ ಹಿಂದೆ ಉಪಲಬ್ಧವಾಯಿತು. ಅದು ವಿಜಾಪೂರ ತಾಲೂಕಿನ ಧನ್ಯಾಳ ಗ್ರಾಮದ, ೧೯೪೯ ರಲ್ಲಿ ಲಿಂಗೈಕ್ಯರಾದ ವೇ. ಗುರುಪಾದಯ್ಯ ಹಿರೇಮಠ ಅವರ ಸಂಗ್ರಹಕ್ಕೆ ಸೇರಿದ್ದು.

ದಿ. ವೇ. ಗುರುಪಾದಯ್ಯನವರು ತಕ್ಕಮಟ್ಟಿಗೆ ಓದಿಕೊಂಡವರು; ಪುರಾಣ ಕೀರ್ತನೆಗಳನ್ನು ಹೇಳುವುದನ್ನು ಚಿಕ್ಕಂದಿನಲ್ಲಿ ನಾನೂ ಕೇಳಿರುವೆ. ಆದರೆ ಈ ಹಸ್ತಪ್ರತಿ ಅವರಿಂದ ಲಿಖಿತವಾದುದಲ್ಲ. ತೀರ ಹಿಂದಿನದು ಎನ್ನುವುದನ್ನು ಅದರ ಸ್ವರೂಪದಿಂದ ತಿಳಿಯಬಹುದಲ್ಲದೆ, ಅದರ ಹಳಮೆಯನ್ನು ಸ್ಪಷ್ಟವಾಗಿ ಖಚಿತಪಡಿಸುವ ಮಿತಿಯೂ ಅದರಲ್ಲಿ ಸಿಕ್ಕುತ್ತಿದೆ.

ಹಸ್ತಪ್ರತಿಯ ಮಧ್ಯದಲ್ಲಿ ಬರೆಯಲಾದ ಚನ್ನಬಸವಣ್ಣನವರ ಮಂತ್ರ ಗೋಪ್ಯದ ಟೀಕೆಯ ಕೊನೆಗೆ '...... ಮಿತಿ ಶಕೆ ೧೬೪೪ ಭಾದ್ರಪದ ಬಹುಳ ||೮|| ಸೋಮವಾರದ ನಕ್ಷತ್ರ ರೋಹಿಣಿ ಗಳಿ × ೮ ಮೇಗೆ ಮೃಗಶಿರ ಹತ್ತಿತು. ಶ್ರೀ ಶ್ರೀ ಶ್ರೀ....' ಎಂದಿದೆ. ಇದರ ಮೇಲಿಂದ ಈ ಹಸ್ತಪ್ರತಿ ಕ್ರಿ. ಶ. ೧೭೨೨ ರಲ್ಲಿ ಲಿಖಿತವಾಯಿತು ಎಂಬುದು ಸಿದ್ಧ.

ಹಸ್ತಪ್ರತಿಯ ಮೊದಲಿನ ಭಾಗ ಬಹಳ ಹರಿದು ಹೋಗಿದೆ. ಅಶುದ್ಧ ಬರಹದಿಂದ ಕೂಡಿದ ಕೆಳಗಿನ ಕೃತಿಗಳು ಇದರಲ್ಲಿವೆ.

೧. 'ಅನುಭಾವಸೂತ್ರ ಶಿವಸಿದ್ಧಾಂತತಂತ್ರಷಟ್‌ಸ್ಥಳನಿರ್ಣಯ' (ಟೀಕೆ) ಮೊದಲಿನ ಭಾಗ ಹರಿದಿದೆ.

೨. ಆಚರಣೆಯ ವಚನಗಳು: ಇದರಲ್ಲಿ ಚನ್ನಬಸವಣ್ಣನವರ ಸುಮಾರು ೬೦ ವಚನಗಳಿವೆ. ಇನ್ನುಳಿದ ವಚನಕಾರರಲ್ಲಿ ಬಸವ, ಅಲ್ಲಮಪ್ರಭು, ಮಡಿವಾಳ ಮಾಚಯ್ಯ, ಮೋಳಿಗೆಯ ಮಾರಯ್ಯ ಪ್ರಮುಖರು.

೩. ಕೊರವಂಜಿಯ ವಚನ (೪೩ ಹಾಡುಗಳು).

೪. 'ಮುತ್ತಿನಕಂತಿಯ ಸದ್ಗುರುವೆ' ಅಂಕಿತದ ೪೪ ಭಾಮಿನಿ ಷಟ್ಪದಿಗಳಿವೆ (ಇದು ಶತಕವಿರಬೇಕು.)

೫. ಮಂತ್ರಗೋಪ್ಯದ ಟೀಕೆ (ಬರೆದವರ ಹೆಸರಿಲ್ಲ; ಮಿತಿ ಇದೆ.)

೬. ಘನಲಿಂಗದೇವರ ವಚನಗಳು (ಒಟ್ಟು ೬೨. ಅದರಲ್ಲಿ ೨೦ ವಚನಗಳು ಹರಿದುಹೋಗಿವೆ.)

೭. ಶರಣುಬಸವರಗಳೆ.

೮. ಕಂದಪುರಾಣ ಉತ್ತರ ಖಾಂಡ.

೯. ಸಾಧನಚತುಷ್ಟಯ

೧೦. ಕೆಲವು ಹಾಡುಗಳು.

ಹಸ್ತಪ್ರತಿಯಲ್ಲಿ ಅಲ್ಲಲ್ಲಿಯ ಹಲವು ಪುಟಗಳು ಹರಿದುಹೋಗಿವೆ. ಚನ್ನಬಸವಣ್ಣನವರ ಇನ್ನು ಕೆಲವು ವಚನಗಳು ಕಳೆದುಹೋಗಿವೆ. ಇದನ್ನು ತಮ್ಮ ಓದಿಗಾಗಿ ಹಿಂದಿನ ಕೆಲವು ತಾಳೆಯೋಲೆಗಳಿಂದ ಬರೆದುಕೊಂಡು ಸಂಗ್ರಹ ಮಾಡಿರಬೇಕು. ಕೆಲವು ಕಡೆಗೆ 'ಱ'ದ ಬಳಕೆಯನ್ನು ಕಾಣಬಹುದು.

ಇಲ್ಲಿ ಹೆಚ್ಚಿನ ವಚನಗಳೆಂದು ಸಂಪಾದಿಸಿದ ೨೪ ವಚನಗಳು ಕ. ವಿ. ವಿ. ಪ್ರಕಟನೆಯಾದ 'ಚನ್ನಬಸವಣ್ಣನವರ' ವಚನಗಳ ಸಂಗ್ರಹದಲ್ಲಿ ನನ್ನ ಪ್ರಯತ್ನಕ್ಕೆ ದೊರೆತಿಲ್ಲ. ಕೆಲವು ವಚನಗಳು ಚನ್ನಬಸವಣ್ಣನವರ 'ಕರಣಹಸುಗೆ' ಮಿಶ್ರಾರ್ಪಣದಲ್ಲಿಯ ವಿಷಯಕ್ಕೆ ಹೋಲಬಹುದು. ಆದರೂ ಅವು 'ಅವೇ' ಅಲ್ಲ. ಇದ್ದರೂ ಅದನ್ನು ನಿರ್ಣಯಿಸಲು ಅನುಕೂಲವಾಗಲೆಂದು ಎಲ್ಲರ ನಿದರ್ಶನಕ್ಕೆ ತಂದಿರುವೆ.

ಹರಿದುಹೋದ ಅಕ್ಷರಗಳನ್ನು X ಈ ಚಿಹ್ನೆಯಿಂದಲೂ ಸಂಶಯುಬಂದ ಶಬ್ದವನ್ನು ( ) ಈ ಸಂಕೇತದಿಂದಲೂ ಗುರುತಿಸಿರುವೆ.

## ವಚನಗಳು

೧

ಹೊಲೆಹೊಲೆಯನೆಂದು
ಹೊರಗಿರು ಎಂದೆಂಬರು
ಹೊಲೆಯನೆಂತವನಯ್ಯಾ
ತನ್ನ ಹೊಲೆಯ ತಾನರಿಯದೆ

ಮುನ್ನಿನವರ ಹೊಲೆಯನರಸುವ
x x x ಭ್ರಷ್ಟರಿಗೆ ಏನೆಂಬೆನಯ್ಯಾ
ಮಹಾದಾನಿ ಕೂಡಲಚನ್ನಸಂಗಮದೇವಾ

೨

ಪ್ರಥಮಸ್ಥಲ ಸೂತಕದಲ್ಲಿ ಹೊಲೆ
ದ್ವಿತಿಯಸ್ಥಲ ಜನನದಲ್ಲಿ ಹೊಲೆ
ತೃತಿಯಸ್ಥಲ ಮರಣದಲ್ಲಿ ಹೊಲೆ
ಇಂತಿವ ಹೊಲೆಯ ತನ್ನೊಳಗೆ ಇದರಿಟ್ಟು
ಮುಂದಿನವರ ಹೊಲೆಯನರಸುವ
ಅನ್ಯಾಯಿಗಳ ಮಾತ
ಕೇಳಲಾಗದು ಕೇಳಲಾಗದು ಕಾಣಾ
ಕೂಡಲಚನ್ನಸಂಗಮದೇವಾ

೩

ಲಿಂಗದೇಹಿಯಾದ ಬಳಿಕ
ಲಿಂಗೈಕ್ಯನಾಗದನ್ನಕ್ಕ
ಲಿಂಗದೇಹಿ ಎಂತಹನೋ ಅಯ್ಯಾ ?
ಲಿಂಗದೇಹಿಯಾದ ಬಳಿಕ
ಲಿಂಗಾಂಗರ ಕೂಡ ಗೋಷ್ಠಿ
ಲಿಂಗಾಂಗರ ಕೂಡ ಸಂಗತಿ
ಲಿಂಗಾಂಗರ ಕೂಡ ಸನ್ನಿಧಿ
ಲಿಂಗಾಂಗರ ಕೂಡ ನಡೆ ನುಡಿ
ಲಿಂಗಾಂಗಿಗಳಲ್ಲದ ಅಂಗಹೀನರ ಕೂಡ
ಸಂಗವ ಬೆರಸಿ ನಡೆದರೆ
ಆತಂಗೆ ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ
ಪಾದತೀರ್ಥ ಪ್ರಸಾದವಿಲ್ಲ ಕಾಣಾ
ಮಹಾದಾನಿ ಕೂಡಲಚನ್ನಸಂಗಮದೇವಾ

೪

ಅಘ್ಘವಣಿಯನೆ ತುಂಬಿ
ಪುಷ್ಪವನೆ ತಂದು ಪೂಜಿಸಿ ಲಯಕೊಳಗಾದಿದರು

ಜನ ಮರುಳೊ ಜಾತರೆ ಮರುಳೊ
ಅಪ್ಪುವಣಿಯನೆ ತುಂಬಿಪ ಜಲ ಬತ್ತಿಹೋಯಿತ್ತು
ಪುಷ್ಪವನೆ ತಂದುತಂದು ಗಿಡು ಅಡವಿ ಕೂಡಿತ್ತು
ನೀ ಪೂಜಿಸಿದ ಪೂಜೆ
ಗಿಡುವು ಮಡುವಿಗಲ್ಲದೆ ನಿನಗೆಲ್ಲಿಹುದೋ
ಮಾಡಿಮಾಡಿ ಮಡಕಿ ಕೇಡು
ಮಾಡಿ ಮನ ಮರುಗದೆ
ನೀಡಿ ನಿಜವಿಲ್ಲದೆ
ಅಣ್ಣಗಳ ಕೆಟ್ಟ ಕೇಡು ನೋಡಾ
ಮಹಾದಾನಿ ಕೂಡಲಚನ್ನಸಂಗಮದೇವಾ

೫

ಜಂಗಮ ಜರಿದು ಲಿಂಗವ ಮ x x ಅಂಗಹೀನನಾದ ಬಳಿಕ
ಸಂಗ ಸಂಯೋಗ ಎಲ್ಲಿಹುದೋ ಅಯ್ಯಾ
x x ಮಮೋಹಿ ಜರಿಯಬಲ್ಲನೆ?
ಲಿಂಗಮೋಹಿ ಮರಿಯಬಲ್ಲನೆ?
ಜಾತಿಕಾರ x ನ ಭಂಡರ ಮೆಚ್ಚುವನೆ
ನಮ್ಮ ಜಾತ ಅಜಾತ ಕೂಡಲಚನ್ನಸಂಗಮದೇವಯ್ಯಾ

೬

ನೀಡಿನೀಡಿ ನಿಜವಿಲ್ಲದೆ ಕೆಟ್ಟೆ
ಮಾಡಿಮಾಡಿ ಘನವಿಲ್ಲದೆ ಕೆಟ್ಟೆನಯ್ಯಾ
ಅಟಮಟದ ಬೆಂದ ಸಂಸಾರವ ಹಿಡಿದು
ಒಡಲ ಹೊರೆವೆನೆಂದು ಭವಭಾರಿಯಾದೆನಯ್ಯಾ
ಕುಹಕವೆಂಬ ಮಡುವಿನ ಕೆಸರೊಳು ಬಿದ್ದು
ಪಶುವಿನಂತಾದೆನಯ್ಯಾ
ನನ್ನವಗುಣವ ಸಂಪಾದಿಸದಿರಯ್ಯಾ
ಎನ್ನ ಭವಪಾಶವ ಹರಿದು
ಇನ್ನಾದರೂ ಕರುಣಿಸೈ ಮಹಾದಾನಿ ಕೂಡಲಚನ್ನಸಂಗಮ
ದೇವಯ್ಯಾ

೭

ಗುರುವನು ಲಿಂಗವನು ಒಂದೆಂಬ ಸಂತೆಯ ಸುದ್ದಿಯ
ಬಾಲಭಾಷೆಯ ಕೇಳಲಾಗದು.
ಅದು ಹೇಗೆಂದರೆ :
ಲಿಂಗಸಹಿತ ಪ್ರಸಾದಭೋಗ
ಲಿಂಗಸಹಿತ ನಿದ್ರೆ
ಗುರುವನು ಲಿಂಗವನು ಒಂದೆಂದು ಕಾಣಲಾಗದು ನರಕ.
ಸಾಕ್ಷಿ : ಗುರೋರ್ಮೂರ್ತಿ ಶಿವೋರ್ಭಾವೊಂ
ಶಿವಾಭವಂ ಗುರೋರಪಿ
ಪತ್ತುಲ್ಯಂ ಸಮಾಭವಂ ಚ
ಕುಂಭಿ ಪಾಪಂ ನ ಸಂಶಯಃ
ಇಂತೆಂಬುದಾಗಿ
ಗುರುವನು ಲಿಂಗವನು ಒಂದೆಂದು ಕರೆದಡೆ
ಅಘೋರ ನರಕ ಕೂಡಲಚನ್ನಸಂಗಮದೇವಾ

೮

ಗುರು ನರನೆಂದೆನಾದಡೆ ಸ್ವಾನನ ಬಳಗದೊಳಗಿಪ್ಪನು
ಗುರೂಪದೇಶವ ಮೀರಿದೆನಾದಡೆ ಭವಕರ್ಮ ಹಿಂಗದು
ಅಜ್ಞಾಯ ಬಾಲಬುದ್ಧಿಶ್ಚ | ನರಬುದ್ಧಿಶ್ಚ ತತ್ರೈವ ಚ |
ಅಜಿಷ್ಟ ಬುದ್ಧಿಯೋನಾಥಾ | ಅಜ್ಞಿನೋಲುತ್ಪ ಕಾರಣ |
ನರರೂಪಂಗುರೋರ್ಭವಂ | ಗುರುವಾಕ್ಯಂ ನಲಂಘಟತಿ
ಗುರುಮಂತ್ರ ಪರಿತ್ಯಾಗಿ | ರೌರವಂ ನರಕಂ ವ್ರಜೇತ್ ||
ಇದು ಕಾರಣ
ಶ್ರೀ ಗುರುಲಿಂಗವ ಭಾರ್ಗೋದೇವವೆಂದರಿವುದು
ಕೂಡಲಚನ್ನಸಂಗಯ್ಯ ಇದ ನಂಬದಿದ್ದರೆ ಭವ ಹಿಂಗದು

೯

ಬಂದವಸರವನರಿತು ಸಮಯಾಚಾರವ ಮಾಡಬೇಕಯ್ಯಾ
ಬಂದವಸರವನರಿತು ಸಮಯಾಭಕ್ತಿಯ ಸಮ್ಮಂಧವ ಮಾಡಬೇಕು
ಬಂದವಸರವ ತಪ್ಪಿಸಬಾರದು

ಸಾಕ್ಷಿ : "ಉತ್ತಮ ಜಂಗಮಪೂಜಾ
ವಿಷಮಂ ಸಮಮಾರ್ಚಕಂ"
ಇಂತೆಂಬುದಾಗಿ
ಕೂಡಲ ಚ x x ಂಗನ ಸಮಯಾಚಾರಕ್ಕೆ ಇದೇ ಯುಕ್ತಿ

೧೦

ಗುರುಲಿಂಗ ಸನ್ಮತವಾದ ಕ್ರಿಯುಹುದಾಗದೆಂಬ
ಸತ್ಕ್ರಿಯುವಿಡಿದು ತನು ಗಮಿಸುವದು
ಅರಿವುಪಿಡಿದು ಮನವ ರಮಿಸುವದು
ಸಾಕ್ಷಿ : ಕ್ರಿಯಾದ್ವೈತವನಕರ್ತವ್ಯಂ
ಭಾವದ್ವೈತ ಸಮಾಚರೇತ್
ಕ್ರಿಯುಯಾ ನಿರ್ವಹಿತೆಯುಸ್ತು
ಭಾವಶುದ್ಧಂತು ಶಂಕರಿ' ಎಂಬುದಾಗಿ
ಅನುಭಾವದಿಂದ ಸಕಲೇಂದ್ರಿಯಗಳು
ಕೂಡಲಚನ್ನಸಂಗಯ್ಯನಲ್ಲಿ ತದ್ರೂಪ

೧೧

ಒಬ್ಬರಿಗೊಬ್ಬರು ಮಚ್ಚರಿಸಿ ನರಕ ಇಳಿಯು ಹೇಳಿಕೊಟ್ಟನೆ
ಶ್ರೀ ಗುರುಲಿಂಗವನು
ಸಾಕ್ಷಿ : 'x x x ಭಕ್ತ ಸತ್ರುತ್ಪಷ
ಸತ್ರುತ್ ಲಿಂಗೇನ ದೂಷಕಃ
ಯುಗಕೋಟಿ ಕ್ರಿಮಿಪ್ಪತ್ವಾಪಿಮಾಯು ಜಾತೆ ಕ್ರಿಮಿ'
ಇಜನರಿಮು
ಶಿವಭಕ್ತರು ಮದ ಮಚ್ಚರವ ಬಿಟ್ಟು
ಗುರುಲಿಂಗಜಂಗಮಕ್ಕೆ ಮಾಡುವ ಸದ್ಭಕ್ತನ
ಶಿವನೆಂದು ಕಾಣದಿದ್ದರೆ
ಅಘೋರ ನರಕದಲ್ಲಿಕ್ಕುವ ಕೂಡಲಚನ್ನಸಂಗಮದೇವ

೧೨

ಭಕ್ತನಾಗಿ ಬಯುಕೆಯುಮಾಡಿ ನೋಡುವದು ಭಕ್ತಿಯು ಸ್ಥಲವಲ್ಲ
ಬಯುಸಿಮಾಡುವುದೆ ಭಕ್ತಿಯುಕೇಡು
ಕೂಡಿಸಿ ಮಾಡುವುದೇ (ಕೂಟುಂಡು)

(ಸಯುಸ)ವಿಲ್ಲದೆ ಸಮತಿಯ ಮಾಡಿ
ಬೋನವ ನೀಡಿಹೆನೆಂಬುದು ಸಜ್ಜನತ್ವಕೇಡು
ಇಂಥ ಬಯಕೆಯ ಮಾಡಿ ನೀಡುವವನ ಭಕ್ತಿ
ಬರಿಯ ಮಡಕೆಯನಟ್ಟು ಹೊರಗೆ
ಹುಲಿಯೋದಿಸಿದಂತಾಯಿತ್ತು ಕಾಣಾ
ಅವನ ಭಕ್ತಿ(ಕೂ)ಜಪತಪನೇಮನಿತ್ಯ
ಅನುಷ್ಟದಾರ್ಚನೆ ಷೋಡಶ ಉಪಚಾರವ
ಮಾಡಿ ಮುಕ್ತಿಯ ಪಡೆದೆನೆಂದು
ಗುರುವಿನಲ್ಲಿ ಆಜ್ಞೆಯಮಾಡಿಕೊಂಡು
ಸಮಯಾಚಾರಕ್ಕೆ ಜಂಗಮದೇವರ ತಂದು
ಪ್ರಸಾದ ಕೃತ್ಯವೆಂದು ಕಟ್ಟುಮಾಡಿ ತನ್ನಲ್ಲಿ ಇಟ್ಟುಕೊಂಡು
ಆಯುತದ ಅಷ್ಟುವಣಿ ಆಯುತದವೆಂದು ಮಾಡುವನ್ನಕ್ಕ
ಆ ಜಂಗಮದೇವರ ತಂದು ತನ್ನ ಮನೆಯಲ್ಲಿಟ್ಟುಕೊಂಡು
ಆ ಜಂಗಮಕ್ಕೆ ಇಚ್ಛಾಭೋಜನವ ನೀಡಿ ತೃಪ್ತಿಯಿಂ ಬಡಿಸಿ
ಮುಂದೆ ಕೃತ್ಯವ ಮಾಡುವುದೆ ಸತ್ಯ ಸದಾಚಾರ ಶೀಲ
ಧರ್ಮದ ನಡೆ ಧರ್ಮದ ನುಡಿ ಇದು ತಪ್ಪದೇ ಒಪ್ಪದು ಕಾಣಾ
ಇದರ ಅಂತವನರಿಯದೆ
ತನ್ನ ಮನೆಯ ಆಯುತದ ಬೋನವಾಗುವನ್ನಕ್ಕ
ಆ ಜಂಗಮದೇವರು ಹಸಿದು ಬಳಲಿಸುಯೆಂದು
ಆಯುತವ ಕಟ್ಟಿಕೊಟ್ಟನೆ ನಿಮ್ಮ ಗುರುನಾಥನು ?
ಇಂಥ ಕಟ್ಟಳೆಯ ಕಟ್ಟಿದಾತ ಗುರುವಲ್ಲ
ಕಟ್ಟಿಕೊಂಡಾತ ಭಕ್ತನಲ್ಲ, ಭವಿ(ಯಲ್ಲ)
ಇಂತೀ ಗುರುವಲ್ಲ ನರನು ಇಂತಿವರು ಭಕ್ತರಲ್ಲ
ಒಲಿದು ಭಕ್ತಿಯ ಮಾಡಿಹನೆಂದು
ಭಕ್ತನ ಅಂತವನರಿಯದೆ ಮುಂದುಗಾಣದೆ
ಕೃತ್ಯವ ಕಟ್ಟುವ ಗುರುವಿಗೆ ಹಿಂದೆ ಬಹ ನರಕ
ಇವರಿಗೆ ಇಂದೇ ಅಘೋರನಾಕ ಕಾಣಾ
ಮಹಾದಾನಿ ಕೂಡಲಚನ್ನಸಂಗಮದೇವಯ್ಯಾ

೧೩

ಕಲ್ಲುದೇವರ ಪೂಜೆಯಮಾಡಿ
    ಕಲಿಯುಗದ ಕತ್ತಿಗಳಾಗಿ ಹುಟ್ಟಿದರಯ್ಯಾ
ಮಣ್ಣದೇವರ ಪೂಜೆಯಮಾಡಿ
    ಮಣ್ಣಾಗಿ ಹುಟ್ಟಿದರಯ್ಯಾ
ಮರನ ದೇವರ ಪೂಜೆಯಮಾಡಿ
    (ವಗ್ಗ್ಯ)ಗಳಾದರಯ್ಯ
ಜಂಗಮದೇವರ ಪೂಜೆಯಮಾಡಿ
    ಪ್ರಾಣಲಿಂಗಿ ಪ್ರಸಾದಿಗಳಾದರಯ್ಯಾ

ಅದೆಂತೆಂದಡೆ:

ಜಂಗಮದೇವರು ನಡಸಿದರೆ ನಡೆವರು
    ನುಡಿಸಿದರೆ ನುಡಿವರು
ಒಡನೆ ಮಾತಾಡುವರು
    ತಪ್ಪಿದರೆ ಬುದ್ಧಿಯ ಹೇಳುವರು
ಜಂಗಮದೇವರ ಪೂಜೆಯಮಾಡಿ
    ಕೈಲಾಸಕ್ಕೆ ಯೋಗ್ಯರಾದರಯ್ಯಾ
ಕೂಡಲಚನ್ನಸಂಗಮದೇವಯ್ಯಾ

೧೪

ಗಂಡಭೇರುಂಡನೆಂಬ ಪಕ್ಷಿಗೆ
    ತಲೆ ಎರಡು ದೇಹವೊಂದು
ಒಂದು ತಲೆಯಲ್ಲಿ ಹಾಲನೆರೆದು
    ಒಂದು ತಲೆಯಲ್ಲಿ ವಿಷವನೆರೆದಡೆ
ಆ ಪಕ್ಷಿಗೆ ಮರಣವಲ್ಲದೆ
    ಜಯವಪ್ಪುದೇ ಅಯ್ಯ
ಲಿಂಗವ ಪೂಜಿಸಿ ಜಂಗಮವ ಮರೆದಡೆ
    ಕುಂಭಿನಿ ನರಕ ತಪ್ಪದು ಕಾಣಾ
ಕೂಡಲಚನ್ನಸಂಗಮದೇವಯ್ಯಾ

೧೫

ಚನ್ನಬಸವಣ್ಣನವರ ರಾಜಯೋಗದ ವಚನ :
ಆತ್ಮಸ್ಥಿತಿಯೋಗ ಶಿವಯೋಗವೆಂತೆಂದಡೆ ಹೇಳುವೆ ಕೇಳಿರಣ್ಣಾ
ಪೃಥ್ವಿ ಅಪ್ಪು ತೇಜ ವಾಯು ಆಕಾಶವೆಂಬೀ ಪಂಚತತ್ವದ
ವಿವರಮ ಪೇಳ್ವೆ
ರಸ ಅಸ್ತಿ ಮಾಂಸ ರುಧಿರ ಚರ್ಮ ಮೇದಸ್ಸು ಮಜ್ಜೆ
ಎಂಬಿವು ಸಪ್ತಧಾತುಗಳು
ಇದರ ಆಹಾರವೆಂಬುದು ಎಲ್ಲಿಹುದು ?
ಶ್ರೋತ್ರ ನೇತ್ರ ಘ್ರಾಣ ಜಿಹ್ವೆ ತ್ವಕ್ಕು ಎಂಬಿವು
ಜ್ಞಾನೇಂದ್ರಿಯಂಗಳ ಶರೀರ ಎನಿಸಿಕೊಂಬುವು
ಶಬ್ದ ಸ್ಪರ್ಶನ ರೂಪ ರಸ ಗಂಧವೆಂಬ ಪಂಚವಿಷಯ
ಪ್ರಾಣ ಅಪಾನ ವೇನ ಉದನ ಸಮಾನ ನಗ ಕೂರ್ಮ
(ಕೃಕರ)ಕಿಕ್ಕೀಲ ದೇವದತ್ತ ಧನಂಜಯವೆಂಬ
ದಶವಾಯುಗಳ ಸಸ್ತಾನಂಗಳನರಿದು
ಆಧ್ಯಾತ್ಮಿಕ ಆದಿಭೌತಿಕ ಆದಿದೈವಿಕವೆಂಬ
ಗುಣತ್ರಯಂಗಳನಳಿದು
ಮನ ಬುದ್ಧಿ ಚಿತ್ತ ಅಹಂಕಾರವೆಂಬ
ಅಂತಃಕರಣ ಚತುಷ್ಟಯಂಗಳ ತಿಳಿದು
ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಂಗಳೆಂಬ
ಅರಿಷಡ್ವರ್ಗಂಗಳ ಗೆಲಿದು
ಅಸ್ತಿತೆ ಜಾಯತೆ ವಿವರ್ಧತೆ (ವಿ)ಪರಿಣಾಮತೆ
ಪಿಪಾಕ್ಷತೆ ಪಿನಶ್ಯತೆ ಎಂಬ ಷಡ್ಭಾವ ವಿಕಾರಂಗಳಂ ಬಿಟ್ಟು
ಕ್ಷುತ್ ಪಿಪಾಕ್ಷತೆ ಶೋಕ ಮೋಹ ಜನನ ಮರಣವೆಂಬ
ಅರಿಷಡ್ವರ್ಗಂಗಳಂ ಗೆಲಿದು
ಜಾತಿ ವರ್ಣ ಆಶ್ರಮ ಕುಲ ಗೋತ್ರ ನಾಮವೆಂದೆಂಬ
ಷಡ್ಭ್ರಮೆಗಳಂ ತಟ್ಟಲೀಯದೆ
ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯ
ಆನಂದಮಯವೆಂಬ
ಪಂಚಕ್ಲೇಶ (ಕೋಶ ?)ಗಳ ಸಮ್ಮಂಧವನರಿದು
ಕುಲ ಛಲ ಧನ ರೂಪ ಯೌವ್ವನ ವಿದ್ಯೆ ರಾಜ್ಯ ತಪವೆಂಬ
ಅಷ್ಟಮದಂಗಳಂ ಕೆಡಿಸಿ

ಧರ್ಮಾರ್ಥ ಕಾಮಾರ್ಥವನು ಏಕಾರ್ಥವಂ ಮಾಡಿ
ಕಪಿಲವರ್ಣ ನೀಲವರ್ಣ ಮಂಜಿಷ್ಟ್ಯವರ್ಣ ಗೌರವರ್ಣ ಶ್ವೇತವರ್ಣ
ಕಪ್ಪುವರ್ಣ ಕುಂಕುಮವರ್ಣವೆಂಬ ಸಪ್ತ ಧಾತುಗಳಂ
ಸ್ವಸ್ತನವಂಮಾಡಿ
ಜಾಗ್ರತ ಸ್ವಪ್ನ ಸುಸುಪ್ತಿ ಎಂಬ ಅವಸ್ಥಾತ್ರಯಂಗಳಂ ಮೀರಿ
ಜೀವಾತ್ಮ ಅಂತರಾತ್ಮ ಪರಮಾತ್ಮ ಆತ್ಮತ್ರಯಂಗಳನೊಂದು ಮಾಡಿ
ಅಣಿಮ ಮಹಿಮ ಗರಿಮ ಲಗಿಮ ಪ್ರಾಪ್ತಿ ಪ್ರಕಾಮ್ಯ
ಈಶತ್ವ (...?...)ವೆಂಬ ಅಷ್ಟೈಶ್ವರ್ಯಗಳಂ ಬಿಟ್ಟು
ಅಂಜನ ಸಿದ್ಧಿ ಗುಡಕಸಿದ್ಧಿ ರಸಸಿದ್ಧಿ ಶರೀರಸಿದ್ಧಿ
ಪರಕಾಯ ಪ್ರವೇಶಸಿದ್ಧಿ ಮೂರಶ್ರವಣ ದೂರದೃಷ್ಟಿ
ತ್ರಿಕಾಲಜ್ಞಾನವೆಂಬ
ಅಷ್ಟಮಹಾಸಿದ್ಧಿಗಳಂ ತೃಣಕೃತಿಯಂ ಮಾಡಿ
ತನುವ್ಯಸನ ಮನವ್ಯಸನ ಧನವ್ಯಸನ ರಾಜ್ಯವ್ಯಸನ ವಿಷಯವ್ಯಸನ
(ಉಚ್ಛಾಹಾ)ವ್ಯಸನ ಸೇವಕವ್ಯಸನವೆಂಬ ಸಪ್ತವ್ಯಸನಂಗಳು
ಮೋಕ್ಷವೆಂಬ ಚತುರ್ವಿಧ ಪುರುಷಂಗಳಂ ಕೆಡಿಸಿ
ಸಾಲೋಕ್ಯ ಸಾಮೀಪ್ಯ ಸಾರೋಪ್ಯ ಸಾಯುಜ್ಯ
ಎಂಬ ಚತುರ್ವಿಧ ಬಯಕೆಯಂ ಬಯಸದೆ
ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ
ಜಾತಿಸೂತಕ ಭೇದವಿಲ್ಲವೆಂದರಿದು
ಆಧಾರ ಸ್ವಾಧಿಷ್ಠಾ ಮಣಿಪೂರಕ ಅನಾಹತ ವಿಶುದ್ಧಿ ಅಗ್ನಿ
ಎಂಬ ಷಡಧರ ಚಕ್ರಮ ಭೇದಿಸಿ
ಕೃತಯುಗ ತ್ರೇತಾಯುಗ ದ್ವಾಪರಯುಗ ಕಲಿಯುಗಂಗಳಡಗಿ
ಪೃಥ್ವಿ ಅಪ್ಪು ತೇಜ ವಾಯು ಆಕಾಶ ರವಿ ಶಶಿ ಆತ್ಮರೆಂಬ
ಅಷ್ಟತನು ಮಧ್ಯಂಗಳ ಭೇದ ಭೇದಿಸಿ
ಸ್ಥೂಲ ಸೂಕ್ಷ್ಮ ಕಾರಣ ಚಿದ್ರೂಪ ಚಿನ್ಮಯ ಆನಂದಮಯ
ಶುದ್ಧ ಅಧ್ಯುತವೆಂಬ ಅಧ್ಬುತಂಗಳಂ ಬಿಟ್ಟು
ವಡಬಾಗ್ನಿ ಉದರಾಗ್ನಿ ಶೋಕಾಗ್ನಿ ಮಂದಾಗ್ನಿ ಕಾಮಾಗ್ನಿ
ಎಂಬ ಪಂಚಾಗ್ನಿಯ ಕಳೆದು
ಶರೀರಾರ್ಥ, ಪರಹಿತಾರ್ಥ, ಯೋಗಾರ್ಥ, ಪರಮಾರ್ಥ
ತತ್ವಾರ್ಥಂಗಾ ಅವಧನಿಯಾಗಿ

ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ,
ಪ್ರಸಾದಲಿಂಗ, ಮಹಾಲಿಂಗವೆಂಬ ಷಡ್ವಿಧ ಸ್ಥಲವಂ ಭೇದಿಸಿ
(ದಾಸ ವೀರದಾಸ) ಭೃತ್ಯ ಸಜ್ಜನ ಸದಾಚಾರ
ಸಕಲವ(ಸ್ತು) ಅರ್ಚನೆ ಎಂಬ
ಷಡ್ವಿಧ ದಾಸೋಹದಿಂದ ನಿರಂತರ ತದ್ಗತನಾಗಿ
ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ
ಧಾರಣಾಯೋಗ ಸಮಾಧಿ ಎಂಬ
ಅಷ್ಟಾಂಗಯೋಗದಲ್ಲಿ ಯುಕ್ತನಾಗಿ
ಬಾಲ ಬೋಳ ಪಿಶಾಚಿ ರೂಪಿಗೆ ಬಾರದ ಹಟಯೋಗವನರಿದು
ಅನಿತ್ಯವಂ ಬಿಡುವುದು
ಲಯಯೋಗವನರಿದು ಹಲವ ಬಿಡುವುದು
ಮಂತ್ರಯೋಗವನರಿದು ವ್ಯಸನವಂ ಬಿಡುವುದು
ಸ್ಫಟಿಕ ಘಟಂಗಳಡಗಿ ಮಾಣಿಕ್ಯದಂತೆ ಬೆಳಗುವಾತ ಶರಣ
ಆತ ರಾಜಯೋಗಿ, ಆತಂಗೆ ನಮೋ ನಮೋ ಎಂಬೆನಯ್ಯಾ
ಕೂಡಲಚನ್ನಸಂಗಮದೇವಾ

೧೬

ಪೃಥ್ವ್ಯಾದಿ ಪಂಚಭೂತಗಳು ಇವಕೆ ವಿವರ :
ಅಸ್ಥಿ ಚರ್ಮ ಮಾಂಸ ರೋಮ ಮಜ್ಜ ಇವೈದು ಪೃಥ್ವಿಯ ಅಂಶ
ಮೂತ್ರ ಶುಕ್ಲ ಶ್ಲೇಷ್ಮ ಪಿತ್ತ ರಕ್ತ ಇವೈದು ಅಪ್ಪುವಿನ ಅಂಶ
ಹಸಿವು ತೃಷೆ ನಿದ್ರೆ ಜಾಡ್ಯ ಸ್ತ್ರೀಸಂಭೋಗ
ಇವೈದು ಅಗ್ನಿಯ ಅಂಶ
ಹರಿವುದು ಕಳ್ಳಿರುವುದು ಆಕಳಿಸುವುದು ಮೈಮುರಿವುದು
ನಡೆವುದು ಇವೈದು ವಾಯುವಿನ ಅಂಶ
(ಡಂಬು) ಪ್ರಕಟ ಪ್ರಪಂಚ ಅಭ್ರಛಾಯ ಆನಂದ
ಇವೈದು ಆಕಾಶದ ಅಂಶ
ಇಂತು ಅಂಗಸ್ಥಲಂಗಳ ಬಿಟ್ಟು ಲಿಂಗವ ಕೂಡ ಬಲ್ಲಡೆ
ಕೂಡಲಚನ್ನಸಂಗಮನಲ್ಲಿ ಶರಣನೆನಿಸುವನು

೧೭

ಶ್ರೋತ್ರಾದಿ ಜ್ಞಾನೇಂದ್ರಿಯಂಗಳು ಇವಕ್ಕೆ ವಿವರ:
ನೇತ್ರಗಳು ಸಪ್ತವರ್ಣಂಗಳ ಕಂಡು ಸುಖಿಸುತಿಹವು

ಶ್ರೋತ್ರವು ಸರ್ವ ಶಬ್ದಾವನಾದವಂ ಬಲ್ಲುದು
ಘ್ರಾಣ ಗಂಧ ದುರ್ಗಂಧವ ಬಲ್ಲುದು
ಜಿಹ್ವೆ ಮಧುರಾಂಬ್ರ ತಿಕ್ತ ಕಟು ಲವಣ ಕಷಾಯಂಗಳಂ ಬಲ್ಲುದು
ಸ್ಪರ್ಶನ (ಆದ) ಕಠಿಣ ಶೀತೋಷ್ಣ ಮೃದು ಬಲ್ಲುದು
ಇಂತು ಇಂದ್ರಿಯ ಜ್ಞಾನಂಗಳ ಸಂಚಲವನರಿದು
ನಿಜವ್ರಳಿಯ ಬಲ್ಲಡೆ
ಕೂಡಲಚನ್ನಸಂಗಯ್ಯನಲ್ಲಿ ಶರಣನೆನಿಸುವನು

೧೮

ಶಬ್ದಾದಿ ವಿಷಯಂಗಳು ಇವಕೆ ಗುಣ :
ಶಬ್ದ ಆಕಾಶಗುಣ, ಶಬ್ದ(ಪ್ಪ)ರುಷನ ವಾಯುವಿನ ಗುಣ
ಶಬ್ದಪ್ಪರುಷನ ರೂಪು ಅಗ್ನಿಯಗುಣ
ಶಬ್ದಪ್ಪರುಷನ ರೂಪುರಸ ಅಪ್ಪುವಿನಗುಣ
ಶಬ್ದಪ್ಪರುಷನ ರೂಪುರಸಗಂಧ ಪೃಥ್ವಿಯ ಗುಣಂಗಳು
ಒಂದ ಗುಣಕೂಡ x x x x x (ಹರಿದು ಹೋಗಿದೆ)

೧೯

*ಆಧಾರಾದಿ ಷಡುಚಕ್ರಂಗಳು ಇವಕ್ಕೆ ವಿವರ :
ಆಧಾರಸ್ಥಾನದಲ್ಲಿ ಚತುರ್ದಳಪದ್ಮವಿಹುದು, ಅದರ ವರ್ಣ ಸುವರ್ಣ
ಅದಕ್ಕೆ ಅಕ್ಷರ, ವ ಶ ಷ ಸ ಎಂಬ ನಾಲ್ಕಕ್ಷರ, ಅಧಿದೇವತೆ ಬ್ರಹ್ಮನು
ಸ್ವಾದಿಷ್ಟಾನದಲ್ಲಿ ಷಡುದಳ ಪದ್ಮವಿಹುದು ಅದು ಕಪ್ಪುವರ್ಣ
ಅದಕ್ಕೆ ಅಕ್ಷರ, ಬ ಭ ಮ ಯ ರ ಲ ಎಂಬ ಷಡಕ್ಷರ,
ಅಧಿದೇವತೆ ವಿಷ್ಣು
ಮಣಿಪೂರಕದಲ್ಲಿ ದಶದಳಪದ್ಮವಿಹುದು, ಕುಂಕುಮವರ್ಣ
ಅದಕ್ಕೆ ಅಕ್ಷರ, ಡ ಢ ಣ ತ ಥ ದ ಧ ನ ಪ ಫ ಎಂಬ ದಶಕ್ಷರ,
ಅಧಿದೇವತೆ ರುದ್ರನು
ಅನಾಹತಸ್ಥಾನದಲ್ಲಿ ದ್ವಾದಶದಳ ಪದ್ಮವಿಹುದು, ಪಚ್ಚವರ್ಣ
ಅದಕ್ಕೆ ಅಕ್ಷರ, ಕ ಖ ಗ ಘ ಙ ಚ ಛ ಜ ಝ ಞ ಟ ಠ
ಎಂಬ ದ್ವಾದಶಕ್ಷರ, ಅಧಿದೇವತೆ ಈಶ್ವರನು

* ಇದು 'ಮಿಶ್ರಾರ್ಪಣದಲ್ಲಿ' ಜ. ವ. ಪು. ೬೮೯ ರಲ್ಲಿ 'ಇಂತೀ ಷಡ್ವಿಧಹಸ್ತ, ಸ್ವಸ್ಥವಾಗಿ ನೆಲೆಗೊಂಬ ಭೇದದ ಪೇಳ್ವೆ ಅದೆಂತೆಂದಡೆ' ಎಂದು ಮುಂದೆ ನಿರೂಪಿಸಿದ ಷಡ್ವಿಧ ಚಕ್ರದ ನಿರೂಪಣೆಯಂತೆ ಇದೆ. ಆದರೂ ಅದರಿಂದ ಭಿನ್ನವಾಗಿದೆ, ವಚನರೂಪದಲ್ಲಿದೆ.

ವಿಶುದ್ಧಿಸ್ಥಾನದಲ್ಲಿ ಷೋಡಶದಳಪದ್ಮವಿಹುದು, ಅದು ಸ್ಫಟಿಕವರ್ಣ
ಅದಕ್ಕೆ ಅಕ್ಷರ, ಅ ಆ ಇ ಈ ಉ ಊ ಋ ೠ ಎ ಏ ಐ
ಒ ಓ ಔ ಅಂ ಅಃ ಎಂಬ ಷೋಡಶ ಅಕ್ಷರ, ಅಧಿದೇವತೆ ಸದಾಶಿವನು
ಅಗ್ನಿಯಸ್ಥಾನದಲ್ಲಿ ದ್ವಿದಳಪದ್ಮವಿಹುದು, ಅದು ಮಾಣಿಕವರ್ಣ
ಅದಕ್ಕೆ ಅಕ್ಷರ, ಹಂ ಕ್ಷ ಎಂಬ ದ್ವಿಯಕ್ಷರ, ಅದಿದೇವತೆ ಪರಶಿವನು
ಅಲ್ಲಿಂದತ್ತ ಮೇಲೆ ಬ್ರಹ್ಮರಂಧ್ರಸ್ಥಾನದಲ್ಲಿ
ಸಹಸ್ರದಳಪದ್ಮವಿಹುದು
ಆ ಪದ್ಮ ಹೇಮವರ್ಣ
ಓಂಕಾರ ಅಕ್ಷರ, ಪರಂಜ್ಯೋತಿ ಪರಬ್ರಹ್ಮ
ಅದು ಅನಂತಕೋಟಿ ಸೂರ್ಯಪ್ರಕಾಶವಾಗಿ ಬೆಳಗುತಿಹುದು
ಅಧಿದೇವತೆ ಗುಹೇಶ್ವರನು
ಇಂತು ಷಡಾಧರ ಚಕ್ರಂಗಳಂ ತಿಳಿದು ಪರತತ್ವದಲ್ಲಿ
ಉಳಿದು ಇರಬಲ್ಲಡೆ
ಕೂಡಲಚನ್ನಸಂಗಯ್ಯನಲ್ಲಿ ಶರಣನೆನಿಸುವನು

೨೦

ಸಕಳ ನಿಷ್ಕಳ, ರೂಪ ನಿರೂಪ, ಮಾಯ ನಿರ್ಮಾಯ, ಕಾರಣದೇಹ
ನಿರ್ದೇಹದಲ್ಲಿ ಅವಧಾನಿಯಾಗಿ
ಸಾವಯ ನಿರ್ವಯ, ಸಂಕಲ್ಪ ವಿಕಲ್ಪ, ಸಂಯೋಗ ವಿಯೋಗ,
ಪುಣ್ಯ ಪಾಪ, ಧರ್ಮಕರ್ಮಗಳೆಂಬ (ಕಾಲುವೇರಿ) ಗಳಿಂದ
ನಿರಂತರನಾಗಿ
ಇಂತೀ ಸಂಪಾದನೆಗಳ ಸಂಪಾದಿಸಿ ಕೂಡಬಲ್ಲಡೆ
ಕೂಡಲಚನ್ನಸಂಗಯ್ಯನ ಶರಣ ಕಾರುಣ್ಯವ ಪಡೆವುದು
ಪಶುಪತಿ ಜ್ಞಾನವಲ್ಲದ ಮಾತನಾಡಲಾಗದು
ಉತ್ಪತ್ತಿ ಸ್ಥಿತಿ ಲಯವೆಂಬ ಕಾಲತ್ರಯದಲ್ಲಿ ಬೀಳದೆ
ಜಾಗ್ರ ಸ್ವಪ್ನ ಸುಸುಪ್ತಿಗಳಂ(ವ್ಯಾ)ಪಕತ್ರಯದಲ್ಲಿ ಅನುಮಾನವರಿತು
ಆಧ್ಯಾತ್ಮ ಆದಿಭೌತಿಕ ಆದಿದೈವಿಕವೆಂಬ ತಾಪತ್ರಯಕ್ಕೊಳಗಾಗದೆ
ಪುತ್ರೇಷಣ ಅರ್ಥೇಷಣ ಧಾತ್ರೀಷಣವೆಂಬ ಈಷಣತ್ರಯದ
ಭಾವ ಬೆಳೆಯದೆ
ಅಭಾವ ಸ್ವಭಾವ ನಿರ್ಭಾವದಲ್ಲಿ ಶುದ್ಧನಾಗಿ
ದೀಕ್ಷೆ ಶಿಕ್ಷೆ ಸ್ವಾನುಭವವೆಂಬ ದೀಕ್ಷತ್ರಯದನುಮಾನವರಿತು
ಇಷ್ಟಲಿಂಗ ಪ್ರಾಣಲಿಂಗ ತೃಪ್ತಿಲಿಂಗತ್ರಯದ ಭೇದವನು ಭೇದಿಸಿ

ಸ್ವರ್ಗ ಮರ್ತ್ಯ ಪಾತಾಳಲೋಕವನತಿಗಳೆದು
ಇಹ ಪರಹ ಸ್ವಹನೆಂಬ ಮುಕ್ತಿತ್ರಯದ ಹಂಗು ಹಿಂಗಿ
ಮದನ ನಿರ್ಮದನ ಸನ್ಮದನವೆಂಬ ಮದನತ್ರಯದಲ್ಲಿ
ನಿರಾತಂಕನಾಗಿ........
[ಮುಂದಿನ ಭಾಗ ಹರಿದುಹೋಗಿದೆ]

೨೧

ಕುಲ ಛಲ ಮೊದಲಾದ ಅಷ್ಟಮದಂಗಳನರಿತು
ದಾಸೋಹಕ್ಕೆಡೆಯಾಗಿರಬೇಕು
ಪೃಥ್ವಿ ಅ(ಷ್ಟ)ತನುವೆಂಬ ಮಹಿಯಾಗಿದ್ದು
ಲಿಂಗಾವಧಾನಿಯಾಗಿರಬೇಕು
ತ್ರೈಲೋಕ್ಯಂಗ ವಸ್ತ್ರ ಆಭರಣ ಸುಗಂಧದ್ರವ್ಯ ಷಡುರಸಾಯನ
ಸತಿಸಂಗ ಸುಖದುಃಖಂಗಳು ಲಿಂಗ ಮುಂತಾಗಿ
ಪ್ರಸಾದಯೋಗಿಯಾಗಿಪ್ಪುದು
ಯಮನಿಯಮಾಸನದಿ ಅಷ್ಟಾಂಗಯೋಗದಿ ನಿರಂತನಾದರೇನು
ದಾಸೋಹಕ್ಕೆ ಸ್ವಯನಾಗಿರಬೇಕು
ಗೃಹ ಗ್ರಾಮ ತಟಾಕ ಕೂಪ ಗೋಕುಲ ವಾಹನ ಪರಿಜನ
ಕೀರ್ತಿಯೊಳಗಿರ್ದ್ದು ಶರಣರ ಮರೆಯದಿರಲಾಗದು
ಇಂದ್ರಾದಿ ದೇವತೆಗಳು ಅಷ್ಟದಿಕ್ಕಿನಲ್ಲಿ ಕರ್ತರಾಗಿ ನಿಮ್ಮ
ನಿಜಭೃತ್ಯರಾಗಿದ್ದರು
ಇಂತೀ ಅಷ್ಟಸಂಪಾದನೆ ನಾಲ್ವತ್ತೆಂಟರಿಂದ
ಕೂಡಲಚನ್ನಸಂಗನ ಶರಣರು ಲೋಕಾಧಿಪತಿಗಳು

೨೨

ಶೃಂಗಾರಾದಿ ನವರಸ ರಸಿಕನಾದೆನೆಂಬವ
ಖಂಡ ಮಂಡಲಾಧಾರದಲ್ಲಿ ಕರಚಂಡನಾಗದೆ
ನವವಿಧ ಬಂಧನಕ್ಕೊಳಗಾಗದೆ
ನವನಾಳದಲ್ಲಿ ಕಳೆಹೀನನಾಗದೆ
ಇಂತೀ ಸಂಪಾದನೆಯ ಮೂವತ್ತಾರು ಪ್ರಕಾರಂಗಳು
ಪ್ರಾಣಲಿಂಗಕ್ಕೆ ಸಲ್ಲುವ ಅನುವರಿತು ಸಲಿಸುವದು
ಸಲ್ಲದಿದ್ದರೆ ತಾನಾಗಿ ಚಿಂತಿಸಲಾಗದು ಕೂಡಲಚನ್ನಸಂಗಮದೇವಾ

೨೩

ದಶದ್ವಾದಶಂಗಳ ಮೇಲಣ ಬಾಗಿಲಲ್ಲಿದ್ದು
ಕುಲ ಛಲ ಜನನ ಮರಣವೆಂಬ ಬಾಗಿಲ ಹೊಗವೆ
(ಹೊನ್ನಾರೆ) ಬಣ್ಣವಾಗದಂತೆ ಮಾಡಿಕೊಂಬುದು
ಸಂಕುಲನಾಗವೆ ದಶದಿಕ್ಕಿನಲ್ಲಿ ವಿದೇಶಿಗನಾಗವೆ ದೇಶಿಗನಾಗಿರಬೇಕು
ದಶಸ್ಥಾನಂಗಳ ನೋಡಿ ಲಿಂಗಸ್ಥಾನದಲ್ಲಿದ್ದೂ
ಇಂತಿದ (ಸ)ಸಂಪಾದನೆಯು ಮೂವತ್ತಾರರಿಂದ
ಸಂಸಾರ ಮೃಗ ಮರೀಚಿಕಾಜಲ ಮಾಯವೆಂದರಿದು
ನಿಶ್ಚಲಮತಿಯಿಂದ ಶುದ್ಧಾತ್ಮನಾಗಿ ಆರಾಧಿಸಬೇಕು
ಕೂಡಲಚನ್ನಸಂಗನ ಶರಣರು

೨೪

ಆಕಾರವೇ ಭಕ್ತ
ನಿರಾಕಾರವೇ ಮಹೇಶ್ವರ
ಸಹಕಾರವೇ ಪ್ರಸಾದಿ
ಸನ್ಮತ ಈಗಲೇ ಪ್ರಾಣಲಿಂಗಿ
ಲೋಕವಿರಹಿತನೇ ಶರಣ
ಈ ಭ್ರಾಂತುವಿನ ಬಲೆಯೊಳಗೆ ಸಿಲ್ಕದಾತನೇ ಐಕ್ಯ
ಅದು ಎಂತು ಎಂದಡೆ,
ಪೃಥ್ವಿ ಈಗಲೇ ಭಕ್ತ
ಅಪ್ಪು ಈಗಲೇ ಮಹೇಶ್ವರ
ಅಗ್ನಿ ಈಗಲೇ ಪ್ರಸಾದಿ
ವಾಯು ಈಗಲೇ ಪ್ರಾಣಲಿಂಗಿ
ಆಕಾಶ ಈಗಲೇ ಶರಣ
ಈ ಪಂಚತತ್ವದ ಒಳಗೆ
ಬೆಳಕು ಕತ್ತಲೆ ಐಕ್ಯ
ಇದು ಕಾರಣ ಕೂಡಲಚನ್ನಸಂಗಮದೇವಯ್ಯ
ನಿಮ್ಮ ಶರಣ ಪಂಚತತ್ವದಾ ಒಳಗೆ
ಪಂಚತತ್ವ ಪಂಚತತ್ವ ಎಂಬ ಅಣ್ಣಗಳಿರಾ ನೀವು ಕೇಳಿರಾ

---

* ಇದು ಕೊಡೆಕಲ್ಲ ಮಠವಲ್ಲಿಯ ಒಂದು ಪ್ರತಿಯಲ್ಲಿಯದು. ಶ್ರೀ ಶಾಂತರಸರ ಮುಖಾಂತರ ದೊರೆತುದು.

# ಮೋಟನಹಳ್ಳಿ ಹಸನಸಾಹೇಬರ ಪದಗಳು

ಸಂ : ವಿ. ಶಿವಾನಂದ

ಕಲಬುರ್ಗಿ ಜಿಲ್ಲೆಯ ಚಿತ್ತಾಪೂರಕ್ಕೆ ಹೋದಾಗ ಅಲ್ಲಿನ ಹಿರಿಯರಾದ ಶ್ರೀ ಕಲ್ಲಪ್ಪಣ್ಣ ರೇಶ್ಮಿ ಅವರ ಮನೆಯಲ್ಲಿ ಕೆಲವು ಅಪೂರ್ವ ಹಸ್ತಪ್ರತಿಗಳು ದೊರಕಿದವು. ಅವುಗಳಲ್ಲಿ ಹಾಡುಗಳ ಸಂಗ್ರಹವಿದ್ದ ಒಂದು ಕೋರಿ ಕಾಗದದ ಪ್ರತಿಯಲ್ಲಿ ಈಗ ಸಂಗ್ರಹಿಸಿರುವ 'ಹಸನಸಾಹೇಬರ ಪದ್ಯಗಳು' ನನ್ನನ್ನು ಆಕರ್ಷಿಸಿದವು. 'ಶಿಶುನಾಳ ಶರೀಫ'ರಂತೆ ಮುಸ್ಲೀಮರಾಗಿದ್ದು, ವೀರಶೈವ ಭಕ್ತಿ ಹಾಗೂ ಅನುಭಾವಮಾರ್ಗಕ್ಕೊಲಿದು ಅವರಂತೆ ಅನೇಕ ಸೊಗಸಾದ ಅನುಭಾವ ಪದ್ಯಗಳನ್ನು ರಚಿಸಿದ ಇವರ ಸಾಹಿತ್ಯ, ಈ ವರೆಗೂ ಅಪ್ರಕಟಿತವಾಗಿರುವದರಿಂದ ಅವನ್ನು ಬೆಳಕಿಗೆತರುವ ಹಂಬಲ ಹೆಚ್ಚಿತು. ಬಹುಶಃ ಇವರು ನೂರಾರು ಹಾಡುಗಳನ್ನು ಬರೆದಿರಬೇಕು. ಅವುಗಳ ಒಟ್ಟು ಸಂಗ್ರಹ ಇನ್ನೂ ಹೊರಬರಬೇಕು. ನನಗೆ ದೊರೆತ ಹತ್ತು ಹಾಡುಗಳನ್ನು ಸಹೃದಯರ ಗಮನಕ್ಕೆ ತರಲು ಬಯಸುತ್ತೇನೆ.

ಹಸನಸಾಹೇಬರು ಕಲಬುರ್ಗಿ ಜಿಲ್ಲೆಯ ಸೇಡಂ ತಾಲೂಕಿನ ಮೋಟನಹಳ್ಳಿಯವರು. ೫೦ ವರ್ಷಗಳ ಹಿಂದೆ ಬದುಕಿದ್ದ ಅವರನ್ನು ನೋಡಿದ ಕೆಲವು ವೃದ್ಧರು ಈಗಲೂ ಇದ್ದಾರೆ. ಅನುಭಾವಿ ಮತ್ತು ವರಕವಿಯಾಗಿದ್ದ ಹಸನಸಾಹೇಬರು, ಊರಿನ ಒಬ್ಬ ಲಿಂಗವಂತ ಭಕ್ತನ ಮನೆಯಲ್ಲೇ ಇರುತ್ತಿದ್ದರು. ಒಮ್ಮೆ ಆ ಭಕ್ತನ ಮನೆಯಲ್ಲಿ ಲಗ್ನದ ಕಾಲಕ್ಕೆ ಹೊರಡಿಸಿದ ಗುಗ್ಗಳ ಮೆರವಣಿಗೆಯಲ್ಲಿ ಗುಗ್ಗಳ ಆರಿತು. ಕೆಲವರು ಆ ಭಕ್ತನಿಗೆ 'ನಿನ್ನ ಮನೆಯಲ್ಲಿರುವ ಹಸನು ಬಹಳ ದೊಡ್ಡವನೆನ್ನುವಿ, ಅವನಲ್ಲಿ ಶಕ್ತಿ ಇದ್ದರೆ ಆರಿದ ಗುಗ್ಗಳವನ್ನು ಹೊತ್ತಿಸಲಿ, ಅಂದರೆ ಅವನನ್ನು ನಾವು ಹೊಗಳುತ್ತೇವೆ' ಎಂದು ಅಣಕಿಸಲು, ಈ ಸುದ್ದಿ ಗೊತ್ತಾಗಿ ಹಸನಸಾಹೇಬ ಬಂದರು. ಹೃದಯದಲ್ಲಿ ಪಿಠಪುರೀಶನನ್ನು ಸ್ಮರಿಸಿಕೊಂಡು ಭಾವೋದ್ರೇಕದಿಂದ 'ಆಡ ಗುಗ್ಗಳ ಅಡಿಗಡಿಗಾಡಿಸೊ ಗುಗ್ಗಳ' ಎಂಬ ಪದವನ್ನು ಕಟ್ಟಿ ಹಾಡಿದರು. ಹಸನಸಾಹೇಬರಿಂದ ಈ ಹಾಡು ಹೊರಹೊಮ್ಮುತ್ತಿದ್ದಂತೆ ಪುರವಂತನ ಮೈಯಲ್ಲಿ ವೀರಾವೇಶ ಬಂದಿತು. ಅವನು ಕುಣಿಯತೊಡಗಿದನು. ಆರಿದ ಗುಗ್ಗಳ ಒಮ್ಮೆಲೇ ಭುಗ್ಗೆಂದು ಉರಿಯತೊಡಗಿತು. ಈ ದೃಶ್ಯವನ್ನು ಕಂಡ ಅನೇಕರು ಹಸನಸಾಹೇಬರ ಹೆಸರನ್ನು ಇಂದಿಗೂ ಸ್ಮರಿಸಿಕೊಳ್ಳುತ್ತಾರೆ.

ಆತ್ಮಜ್ಞಾನ, ಗುರುಮಹಿಮೆ, ಭಕ್ತಿಮಹಿಮೆ ಮತ್ತು ಯೋಗವಿಚಾರಗಳು ಅವರ ಪದ್ಯದ ವಸ್ತುವಾಗಿವೆ. ತ್ರಿಕೂಟ, ಈಡ-ಪಿಂಗಳ, ಪಶ್ಚಿಮಪೀಠ, ಅಸ್ತಿಭಾತಿ ಮೊದಲಾದ ಯೋಗ ಪರಿಭಾಷೆಯಿಂದ ಹಸನಸಾಹೇಬರು ಯೋಗದ ಮುಖ್ಯವಾಗಿ ಶಿವಯೋಗದ ರಹಸ್ಯವನ್ನರಿತಿದ್ದರು. ಇವರ ಹಾಡುಗಳು ಆಧ್ಯಾತ್ಮ ಭಾವದಿಂದಲೂ ಉಚ್ಚ ತತ್ವದಿಂದಲೂ ಕೂಡಿವೆ. ರಚನೆ ಎಲ್ಲಿಯೂ ನೀರಸವಾಗಿಲ್ಲ. ಎಲ್ಲ ಹಾಡುಗಳಿಗೂ ತಾಳವಿದೆ, ತಾಳಕ್ಕೆ ತಕ್ಕ ಮೇಳವಿದೆ. ಅಂಶಗಣಪ್ರಧಾನವಾದ ಚೌಪದಿ, ದ್ವಿಪದಿ ಮತ್ತು ಲಲಿತಲಯದ ಸೊಗಸು ಇಲ್ಲಿದೆ. ಯಾವುದೇ ಅನುಭವವನ್ನು ಸುಂದರವಾದ ಪ್ರತಿಮೆಯಾಗಿಸಿ ಹೇಳುವ ಕಲಾತ್ಮಕತೆಯಿಂದಾಗಿ ಹಸನಸಾಹೇಬರ ಹಾಡುಗಳು ಆಧ್ಯಾತ್ಮದ ಸುಂದರ ಭಾವಗೀತೆಗಳಾಗಿವೆ. 'ಹೋಗುತ ಒಂದಿನ ಹಸನ' ಎಂಬಲ್ಲಿ ಹಸನ ಪದಕ್ಕೇ ಮೋಕ್ಷವಿತ್ತ ವರಕವಿ ಹಸನಸಾಹೇಬ ಅವರ ಸಾಹಿತ್ಯ, ಇಂದಿಗೂ ಗೌರವಭಾಜನವಾಗಿದೆ.

## ಪದಗಳು

### ೧. ಆಟವಾಡೆಲೊ

ರಾಗ : ಭೈರವಿ ] [ ತಾಳ : ದಾದರಾ

ಆಟವಾಡೆಲೊ ಬಯಲ್ ಬೈಲಾಟವಾಡೆಲೊ
ಆಟವಾಡೆಲೊ ತ್ರಿಕೂಟಸ್ಥಾನದಿ
ನೋಟ ಬಲಿದು ಭಾನುಕೋಟಿ ಪ್ರಕಾಶನ | ಆಟವಾಡೆಲೊ... ||ಪಲ್ಲವಿ||

ಮೇಲ್ಭಾವನೆಗೊಂಡು ಮೇಲ್ಗಿರಿ ಮೂಲವ ನೆಲೆಗೊಂಡು
ಬಾಲ್‌ಬೋಲಾಗದೆ ಭವದ ಬಂಧನ ನೀಗಿ
ಗಾಲ್ಮೇಲಾಗದೆ ಘನ ನೀಲವರ್ಣದ | ಆಟವಾಡೆಲೊ... || ೧ ||

ನಾನತ್ವವ ಬಿಟ್ಟು ಸಕಲ ಮೌನತ್ವವ ತೊಟ್ಟು
ಮಾನಿತ ಮಹಾಂತ ಹರಿಯದೆ ಮರೆಯದೆ
ಶೂನ್ಯಕೆ ಶೂನ್ಯ ನಿಶ್ಶೂನ್ಯ ನಿರಾಲಂಬದ | ಆಟವಾಡೆಲೊ... || ೨ ||

ಶಾಂತಿಯನೊಳಕೊಂಡು ಸಕಲ ಭ್ರಾಂತಿಯ ಕಳಕೊಂಡು
ಇಂತಪ್ಪ ತದ್ರೂಪ ವಿಠಪುರೀಶನ ಕೃಪ
ಚಿಂತೆಯಳಿದು ನಿಶ್ಚಿಂತ ನಿರಾಲಂಬದ | ಆಟವಾಡೆಲೊ... || ೩ ||

## ೧. ಆಡಗುಗ್ಗಳ

ರಾಗ : ಹಂಸಧ್ವನಿ ] [ ತಾಳ : ಕೇರವಮಿಶ್ರ

ಆಡಗುಗ್ಗಳ ಅಡಿಗಡಿಗಾಡಿಸೊ ಗುಗ್ಗಳ
ಈಡ ಪಿಂಗಳವೆಂಬ ಜೋಡಿನ ಗೆಳೆಯರು
ಕೂಡಿಕೊಂಡು ನಡುನಾಡಿ ಬೆಳಗಿನೊಳು ||ಪಲ್ಲವಿ||

ಆರುಸ್ಥಲಗಳ್ಹಿಡಿದು ಆರುವಕ್ಷರ ನುಡಿದ
ಭಾರಿ ನಗಾರಿ ನೌಬತ್ತು ಬಾಜಿಯಿಂದ
ಕೇರಿಕೇರಿ ಖತ್‌ಖಲಲಲವೆನಿಸುತ | ಆಡಗುಗ್ಗಳ... || ೧ ||

ಎಚ್ಚರದಲಿ ನೋಡು ಒಳಂಬರ ಬಿಚ್ಚಿ ಭಜನೆಮಾಡು
ಪಶ್ಚಿಮಪೀಠದಿ ನಿಶ್ಚಯ ಪದವಿದು
ಆಶ್ಚರ್ಯವಾಡವೆ ತೋಂಕಿಟ ಧಿಮಿಯೆಂದು | ಆಡಗುಗ್ಗಳ... || ೨ ||

ಸಟೆಯಾಗದ ಒಂದು ಘಟಸಿತು ಉನ್ಮನಿಯ ಸಂದು
ವಿಠಪುರೀಶನ ಹಿತದಿಂದೆ ಭಜಿಸಲು
ಪುಟಿದು ಪುಟಿದು ಬಹುಪರಾಕ ಪರಾಕೆಂದು | ಆಡಗುಗ್ಗಳ... || ೩ ||

## ೨. ಬಯಲೆ ಬ್ರಹ್ಮ

ರಾಗ : ಕಲಾವತಿಮಿಶ್ರ ] [ ತಾಳ : ಖವಾಲಿ

ಬಯಲೆ ಬ್ರಹ್ಮವೆಂದು ಭಜಿಸುವಾತನೆ ಶರಣ
ಬಯಲೆ ಭಕ್ತನ ಪ್ರಾಣ ಬಯಲೆ ಗುರುಕರುಣ || ಪಲ್ಲವಿ ||

ಭಯ ಭಕ್ತಿ ನಿಜಮುಕ್ತಿ ನಂಬಿಗೆ ನೆಲೆಗೊಂಡು
ಸ್ವಯಲಿಂಗಧಾರಣ ಗೆಲಿದನೆ ಜನನ ಮರಣ | ಬಯಲೆ... || ೧ ||

ಮಮಕಾರ ಮಾಯ ಕತ್ತಲೆ ಕಳಕೊಂಡು
ನಿಮಿಷಮಾತ್ರಕೆ ತಾ ನಿಶ್ಚಲನೊ
ಶಮದಮೆಯನು ತಡೆದು ಸುಷುಮ್ನಾನಾಳನೆ ಪೊಕ್ಕು
ಘಮನ ಘಮನವೆಂದು ಮೆರೆವ ಗಂಭೀರನೊ || ೨ ||

ಉಬ್ಬು ಉರಿನೇತ್ರದ ಪಿಡಿನಾಂಗೆ ಮಂತ್ರ
ಹಬ್ಬಿಬ್ಬಿ ಲಿಂಗಕ್ಕೆ ಸಂಗ್ಗವವೊ
ಕಬ್ಬು ಗಾಣಕೆ ಕೊಟ್ಟ ರಸಪಿಂಡ ಪರಿಯಂತೆ
ಮುಬ್ಬಿಬ್ಬಿ ಸುರಿವ ಅಮೃತಪಾನವನೊ || ೩ ||

ಸಟೆಯು ಶಾಶ್ವತವಲ್ಲ ದಿಟವು ಕಾರಣವೆಂದು
ಘಟದ ದುರ್ಗುಣವನು ಗ್ರಹಿಸುವ
ನಿಟಿಲ ಭ್ರೂಮಧ್ಯದಿ ಪುಟಿದು ಕೂಡುತಲಿರುವ
ಶಿಶಪುರೀಶನ ಕೂಡಿ ಹಿಗ್ಗುತಲಿಹನೊ || ೪ ||

## ೪. ಓಂ ಎಂಬೊ ಪ್ರೇಮು ಅಸ್ತಿಭಾತಿ

ರಾಗ : ದಾನಿಮಿಶ್ರ ] [ ತಾಳ : ಕೇರವ

ಓಂ ಎಂಬೊ ಪ್ರೇಮು ಅಸ್ತಿಭಾತಿಯು ಪಡಿ
ಒಂದೆಯೋಟಿನ್ಯಾಗ ಮಾಡು ಮೂರ್ ತುಕುಡಿ
ಝುಮ್ಮೆಂದು ಝಣತಕ ಜವದಿ ನುಡಿ
ಹಂ ಕ್ಷಂ ತಡೆಯದೆ ಬಿಡುಗಡಿ || ೧ ||

ಸಾವಧಾನ ಸಾವಧಾನ ಸದ್ಗುಣದೆ ಸಲೆಮನ
ಭಾವನಿಧಾನ ಸಂಭ್ರಮದೆ
ಭಾವಪೂರಿತನಾಗಿ ಭಾವಸಂಪೂರ್ಣದೆ
ಕೇವಲಮೂರ್ತಿನ ಬೆರೆಯಬಾರದೆ || ೨ ||

ಅಷ್ಟಯೋಗ ಸಾಧನಯುಕ್ತಿ ಅರಿತು ಭವ
ಗಟ್ಟಿಯಾಗಿ ಮಾಡು ಚತುರ್ವಿಧ ಭಕ್ತಿ
ಇಷ್ಟಪ್ರಾಣಭಾವಲಿಂಗಮೂರ್ತಿ
ನಿಷ್ಠೆಯಿಂದೊಡಗೂಡಲು ನಿಜಮುಕ್ತಿ || ೩ ||

ಮೂರು ವಚನವೆ ಮೂರು ಜಗ ಬೋಧ
ಮೂರೆರಡು ಮುಖವೆ ಆರೂಢ ಶೋಧ
ಆರು ಮೂರಗಲದೆ ಶಿಶಪುರೀಶನೊಳು
ಸೇರಿ ಸುಖಿಸೊ ನೀ ಮೂಲಪ್ರಸಾದ || ೪ ||

## ೫. ತಿಳಿ ಮನವೆ

ರಾಗ : ಸಾರಂಗ ] [ ತಾಳ : ದೀಪಚಂದಿ

ತಿಳಿತಿಳೀ ತಿಳಿ ಮನವೆ ತಿಳಿದರೆ ಮಹಿಘನವೆ
ಹಳಿ ನಿನ್ನ ದುರ್ಗುಣ ಹಳಿದಿದ್ದರೆ ಗರಣ || ಪಲ್ಲವಿ ||

ಮಂದಮತಿಯು ಭ್ರಾಂತಿ ಮಾಡುವದಲವೊ ನಿಚಿಂತಿ
ಮುಂದ ಹರಿಯದೆ ಕುಂತಿ ಮೂರು ದಿನದ ಸಂತಿ || ೧ ||

ತಾಮಸಗುಣ ತಾನು ತನ್ನೊಳಗೆ ತಾ ಜಾಣ
ಸ್ವಾಮಿ ಪ್ರಭೂನ ಕಾಣದೆ ಸ್ವಾನವಾಗಿ ತಿರುತಿರುಗೂವೇನ || ೨ ||

ಪರರ ಗೊಡವಿ ಸಾಕು ಪರರೂಪಿ ನಿನಗೇನ ಬೇಕು
ಹರ ನುಡಿಗಳ ಸೋಂಕು ಮರೆಯದೆ ಹೊಡಿ ಜೋಕು || ೩ ||

ಕುಟಿಲತನವು ಬೇಡ ಕಟಕಟಿಸುವದೇನು ಪಾಡ
ವಿಠಪುರೀಶನ ಕೂಡ ಘಟದೊಳಗೆ ನೋಡನೋಡ || ೪ ||

## ೬. ಹ್ಯಾಂಗಾದೀತು ಜನ್ಮಸಾರ್ಥ

ರಾಗ : ಪಹಾಡಿ ] [ ತಾಳ : ಖವಾಲಿ

ಹ್ಯಾಂಗಾದೀತು ಜನ್ಮಸಾರ್ಥ
ಭವನೀಗದ ಬಾಳ್ವೆಯು ಸಾರ್ಥ || ಪಲ್ಲವಿ ||

ಹಿಂದೆ ಮಾಡಿದ ಪುಣ್ಯದಿಂದ
ಇಂದು ಮಾನವಜನ್ಮಕೆ ಬಂದು
ಮಂದಮತಿಯು ಮಾಯ ಸಂದುಗೊಡದು ಈಗ
ಎಂದೆನಿಸಿಕೊಂಡಿ ಗುರುಜ್ಞಾನಿಯೆಂದು || ೧ ||

ಗುರು ಮುಟ್ಟಿ ಗುರುವಾಗಬೇಕೊ
ಗುರುಲಿಂಗಜಂಗಮಭಾವ ನೆಲೆಗೊಂಡಿರಬೇಕೊ
ಗುರುಹಿರಿಯರ ಕಂಡು ನಯ ಭಯವಿರಬೇಕೊ
ಗುರುಪುತ್ರನೆನಿಸಿಕೊಂಡು ಗುರುಮಂಚಿಗ್ಯಾಕೊ || ೨ ||

ಕುಟಿಲ ಕುಹಕತನ ಬೇಡ ಕುಟಿ
ಘಟಿತ ತರದ ಗುಣ ಪಟುತರ ಬಿಡಬೇಡ
ಸುಳ್ಳೆ ವಟವಟವೊದರಿ ಹೊತ್ತುಗಳಿಬ್ಯಾಡ
ವಿಠಪುರೀಶನ ಒಲಿಸಿಕೊಳ್ಳೊ ಮೂಢ || ೩ ||

## ೭ ಹ್ಯಾಂಗ ಮರೆಯಲಿ ನಾನು

ರಾಗ : ಮಿಶ್ರಡುಮರಿ ] [ ತಾಳ : ಕೇರವ

ಹ್ಯಾಂಗ ಮರೆಯಲಿ ನಾನು ಎನ್ನ ಮನಪ್ರೊಲಿಸಿದಾತನ
ಹ್ಯಾಂಗ ಮರೆಯಲಿ ನಾನು ಚೆನ್ನಿಂಗ ಚೆಲುವನ
ಅಂಗರಹಿತ ಭವ ಅಗಣಿತ ಮಹಿಮನ || ಪಲ್ಲವಿ ||

ತನ್ನ ನಂಬಿದೆನೆಂದು ತಾ ಮೋಹದಲಿ ಬಂದು
ಮನ್ನಿಸಿ ಬೆರೆದಂಥ ಮನಮೋಹನಯ್ಯನ ||೧||

ಪರತತ್ವದ ಜ್ಞಾನಪರಿಯ ಬೋಧಿಸಿಯೆನ್ನ
ಪರವಶಮಾಡಿದ ಪರಮ ದಯಾಳನ ||೨||

ನಿಟಿಲ ಭ್ರೂಮಧ್ಯದಿ ತ್ರಿಕೂಟದಿ ಕೂಡುತಲಿಹ
ಘಟದೊಳು ಮೆರೆವಂಥ ಶಿಶಪುರೀಶನ ||೩||

## ೮. ತುರುಕರೊ ನಾವು ತುರುಕರೊ

ರಾಗ : ಜಾಂದಮಿಶ್ರ ] [ ತಾಳ : ದಾದರಾ

ತುರುಕರೊ ನಾವು ತುರುಕರೊ
ಇಂಥ ಕರಕರಿ ಸಂಸಾರಶರಧಿ ದಾಟಿರುವಂಥ || ಪಲ್ಲವಿ ||

ಮರೆವು ಮಾಯ ಮೊದಲಾದ ಮೈಲಿಗೆ ಬಿಟ್ಟು
ಗುರುಭಕ್ತಿ ಗುಡಗಿ ಚಣ್ಣವನೆ ತೊಟ್ಟು
ಅರುವಿನ ಅಂಗಿ ಬಂಧುರ ಮುಂಡಾಸ
ಮುರುಗಿ ಹೊಡೆದು ಮೂರು ಜಗವ ಸುತ್ತಿರುವಂಥ ||೧||

ಮುರುಕು ಮನೆಯು ಬಿಟ್ಟು ಮೂರು ಗುಣವ ತೊಟ್ಟು
ಸರಕಾರಕ ಮನವೊಪ್ಪಿ ಸೈಯನಾಗಿರಲು
ಗುರು ಕೊಟ್ಟ ಬಿರ್ದಾವಳಿ ಕರಕೆ ಕಂಕಣ ಕಟ್ಟಿ
ಅರಕೇರಿ ಠಾಣೆಯೊಳು ಮೆರಕೋಂತ ಇರುವಂಥ ||೨||

ಧೈರ್ಯದ ಥಾಲು ವೈರಾಗ್ಯದ ಸುರಾಯಿ
ವೈರಿಗಳನೆಲ್ಲ ವರಗೀಸಿ
ಕರಣದೊಳು ಗೆದ್ದ ಶಿಶಪುರೀಶನೊಳು
ಮರೆಯಲಾಗದ ತಂಪನ್ನದೊಡ ಮುಕ್ತಿ ಪಡೆದಂಥ ||೩||

## ೯. ಇದು ನೋಡು ಹೊಸ ಆಟ

ರಾಗ : ಮಾಯಮಾಳಗೌಳ ] [ ತಾಳ : ಆದಿತಾಳ

ಇದು ನೋಡು ಹೊಸ ಆಟ
ಇದರನುಭವ ತಿಳಿದರೆ ಭವ ಹಸನಾಟ || ಪಲ್ಲವಿ ||

ಸದ್ಗುರು ಶಿಷ್ಯಪ್ರಿಯರ ಸಮಾನ
ಸಾಧಿಸಬೇಕೊ ವಿಕದಸಿಜ್ಞಾನ
ಸದ್ಭಕ್ತರಿಗೆ ಸಂಧಾನ ಸದಾ
ಮುಕ್ತಾಂಗಗೆ ಮೊರೆಯಿಂದೊ ಜಾಣ ||೧||

ಬಾಗಿಬಾಗಿ ನಮಿಸುವದೆ ಪಾಡೊ
ಕೈಲಾಗದೆಂತೆನಬೇಡೊ
ಸೋಗಿಲಿ ಶಿವಶರಣರನೆಲೆ ಸುಳಿದಾಡೊ
ಸಾಗಿ ಹೋಗಿ ಮುಂದ ಶಿವಲಿಂಗ ಕೂಡೊ ||೨||

ಕೆಳಗಿನ ಮಾಟ ಮೇಲಿನ ನೋಟ
ಎಡಬಲ ಕೂಟ ಅಷ್ಟದಳಪೀಠ
ಮೃಡಹರ ಶಿಶಪುರೀಶನ ಕಡಿಯಾಟ
ತಿಳಕೊಂಡರೆ ಮಹಿರಾಟ ||೩||

## ೧೦. ಹೋಗುತ ಒಂದಿನ ಹಸನ

ರಾಗ : ಭೈರವಿ ] [ ತಾಳ : ಖವಾಲಿ

ಹೋಗುತ ಒಂದಿನ ಹಸನ
ಭವನೀಗಿ ಜಳಜಳಾ ಹಸನ ||ಪಲ್ಲವಿ||

ಹೋಗುವ ಸುಪ್ತದೊಳು ಜಾಗ್ರತ ಅರವಿಸಿ
ಸಾಗುವ ಸದ್ಗುರು ಯೋಗಮಂಟಪದೊಳು ||೧||

ಭಸಿತ ಶರಣರಿಗೆ ಶರಣ ಮುಸಲಮಾನರಿಗೆ ಶರಣ
ಬಸವನ ಸಂಪ್ರದಾಯಕರಿಗೆ ಶರಣ ಸಕಲರಿಗೆ ಶರಣ ||೨||

ಅಕಾರ ಉಕಾರವೆಲ್ಲವಳಿದು ಮಕಾರ ಮಾರ್ಗವ್ಹೊಂದೆ ಸುಳಿದು
ಸಕಾರವಿಲ್ಲದೆ ಯಮನೊಳು ಸಿಲ್ಕದೆ ನಿಜಾಲನಾಗಿ ಹಕಾರಿ
ಹೊಡೆಯುತ ||೩||

ಜಯಜಯ ಜಯಜಯ ಮನೋಹರ ಜಯ ಶಿಶುಪುರೀಶನೆ ಧೀರ
ಜಯ ಶೋಭಿತವರ ಜಯ ನಮಃ ಪಾರ್ವತೀಪತಿ ಹರಹರವೆಂದು ||೪||

# ತಿಗಳಾರಿ ಲಿಪಿ

ಜಿ. ಎಂ. ಹೆಗಡೆ

ಒಂದು ಜನಾಂಗದ ಸಂಸ್ಕೃತಿಯ ಸ್ವರೂಪ, ಸೌಂದರ್ಯಪ್ರಜ್ಞೆಯ ವಿಕಾಸಗಳನ್ನು ಅರಿಯಲು ಹಲವು ಸಾಧನಗಳಿರುವಂತೆ ಲಿಪಿಯೂ ತಕ್ಕಮಟ್ಟಿಗೆ ನೆರವು ನೀಡುತ್ತದೆ. ಲೋಕದ ತುಂಬ ಹಬ್ಬಿಕೊಂಡಿರುವ ಸಾವಿರಾರು ಬಗೆಯ ಲಿಪಿಗಳನ್ನು ಉಗಮ, ವಿಕಾಸ ಪ್ರಯೋಜಕ ದೃಷ್ಟಿಯಿಂದ ವಿಶ್ಲೇಷಿಸಿ, ಸಂಶ್ಲೇಷಿಸಿ ನೋಡುವದು ಅತ್ಯವಶ್ಯವಾಗಿದೆ. ಇಂಥ ಲಿಪಿಪ್ರಪಂಚದಲ್ಲಿ ದಕ್ಷಿಣಭಾರತದ ಪುರಾತನ ಲಿಪಿಗಳಲ್ಲಿ ಒಂದಾದ "ತಿಗಳಾರಿ" ಈ ಲೇಖನದ ಮುಖ್ಯ ವಿಷಯ. ಕನ್ನಡ ನಾಡಿನ ಮಲೆನಾಡು, ಕರಾವಳಿ ಪ್ರದೇಶ ಮತ್ತು ಮಲೆಯಾಳ ಪ್ರದೇಶಗಳಲ್ಲಿಯ ವೈದಿಕ ಬ್ರಾಹ್ಮಣ ಕುಟುಂಬಗಳಲ್ಲಿ ಬಹಳ ಕಾಲದಿಂದಲೂ ಅಸ್ತಿತ್ವದಲ್ಲಿದ್ದು ಸಂಶೋಧಕರ ಕುತೂಹಲವನ್ನು ಕೆರಳಿಸಿದೆ, ಈ ಲಿಪಿ. ಹೀಗೆ ಸಮಾಜದ ಒಂದೇ ವರ್ಗದಲ್ಲಿ ಪ್ರಚಲಿತವಿರುವದರಿಂದ ಇದನ್ನು " ಸಾಮಾಜಿಕ ಲಿಪಿ " (Social Script) ಎಂದು ಹೇಳಬಹುದು.

ತಿಗಳಾರಿ ಲಿಪಿಯಲ್ಲಿ ಬರೆದ ತಾಳೆಗರಿ, ಕಾಗದಪ್ರತಿ, ಹೊತ್ತಿಗೆಗಳು ಸಾವಿರಕ್ಕೂ ಮೇಲ್ಪಟ್ಟು ಉತ್ತರಕನ್ನಡ ಜಿಲ್ಲೆಯ ಉಚ್ಚವರ್ಗದ ಮನೆತನಗಳಲ್ಲಿ ಇಂದಿಗೂ ಉಪಲಬ್ಧವಿವೆ. ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯಲ್ಲಿ ಎರಡುನೂರಕ್ಕೂ ಮೇಲ್ಪಟ್ಟು ತಿಗಳಾರಿ ಲಿಪಿಯ ತಾಡವೋಲೆ ಗ್ರಂಥಗಳಿವೆ. ಅವುಗಳಲ್ಲಿ "ಜಾತಕ ಲೇಖನ ಸಂಗ್ರಹ", "ನಳೋದಯ ಕಾವ್ಯ", "ರಾಮಾಯಣ", "ಮಹಾಭಾರತ", "ಭಾಗವತ", "ಸೂರ್ಯಸಿದ್ಧಾಂತ", "ಅಭಿನವ ಸಾರಾವಲಿ", "ಪ್ರಾಯಶ್ಚಿತ್ತೇಂದು ಶೇಖರ", "ಮನುಷ್ಯಾಲಯ ಚಂದ್ರಿಕಾ", "ಮಂತ್ರವಾದ", "ತರ್ಕಸಂಗ್ರಹ", "ವೈದ್ಯಸಾರ", "ಋಗ್ವೇದ", "ಯಜುರ್ವೇದ", "ಶೈವ ಕರುಣಾಮೃತ ಸಿದ್ಧಾಂತ", "ಶಿವತತ್ವ ವಿವೇಕಾಖ್ಯಾನ", "ಸಾಂಖ್ಯಯೋಗ", "ಕೂರ್ಮಪುರಾಣ", "ನರ್ಮದಾ ಮಹಾತ್ಮೆ", "ಅಗಸ್ತ್ಯಾಶ್ರಮ ವರ್ಣನೆ"—ಮುಂತಾದ ಕಾವ್ಯಶಾಸ್ತ್ರ ಕೃತಿಗಳಿವೆ. ಸಾಮಾನ್ಯವಾಗಿ ಸಂಸ್ಕೃತ ಮತ್ತು ಕನ್ನಡ ಭಾಷೆಯ ಗ್ರಂಥಗಳಿಗೆ ಈ ಲಿಪಿಯನ್ನು ಬಳಸಲಾಗಿದ್ದು ಕಾವ್ಯಶಾಸ್ತ್ರಗಳೊಂದಿಗೆ ಹೆಚ್ಚಾಗಿ ಈ ಹೊತ್ತಿಗೆಗಳು ಜ್ಯೋತಿಷ, ತರ್ಕ, ಔಷಧ ವಿದ್ಯೆಗೆ ಸಂಬಂಧಪಟ್ಟುವಾಗಿವೆ.

ಕ್ವಚಿತ್ತಾಗಿ 'ತಿಕಳಾರಿ' ಎಂದು ಕರೆಸಿಕೊಳ್ಳುತ್ತಿರುವ ಈ ಲಿಪಿಯ ಹೆಸರು ತಿಗಳಾರಿ ಎಂದೇ ಇರಬೇಕು. 'ತಿಗಳಾರಿ' ಪದದ ನಿಷ್ಪತ್ತಿ ವಿಚಾರ, ಅದರ ಲಿಪಿಯಷ್ಟೇ ಅಪರಿಚಿತವಾಗಿದೆ. ಇದನ್ನು ತಿಗುಳ್+ಆರಿ ಎಂದು ಬಿಡಿಸಬೇಕೆಂದು ತೋರುತ್ತದೆ. ತಿಗುಳ ಎಂದರೆ ತಮಿಳು. ಇದಕ್ಕೆ

"ನಿಜಾಂಕ ಮಾಲೆಯಂ... ... ... ... ...
ಮಾನವ ಮನೋಘಂ ಬರೆವನಾದರದಿಂ ವಿಟಚಕ್ರವರ್ತಿಘಾ
ತ್ರೀಯುತಮಾಗಿ ತಿಲು ತಿಗುಳ ಕಂನಡ ನಾಗರದಕ್ಕರಂಗಳಂ"[೧]

ಬಳ್ಳಾರಿ ಜಿಲ್ಲೆಯ ಹಿರೇಹಡಗಲಿಯ ಈ ಶಾಸನ ಪದ್ಯವೂ

"ತಿಗುಳ ಜನಗಣೆಯಿಂದ | ಬೊಗಳುವ ಶುನಿ ಲೇಸು
ಮುಗುಳಿಯ ಮರದ ನೆರಳಿಂದ ನುಂಗುವ
ನೆಗಳು ಲೇಸೆಂದ ಸರ್ವಜ್ಞ"[೨]

ಎಂಬ ಸರ್ವಜ್ಞ ವಚನವೂ ನಿದರ್ಶನ. 'ತಿಗುಳರ್' ಎಂದು ಕನ್ನಡಿಗರು ತಮಿಳರನ್ನು ಪ್ರಾಚೀನಕರ್ನಾಟಕದಲ್ಲಿ ಕರೆಯುವ ವಾಡಿಕೆಯಿತ್ತು.[೩] ತಿಗುಳರ ಭಾಷೆಗೆ ಅನ್ವಯಿಸುವಂಥದು 'ತಿಗಳಾರಿ', ಇದು ಬಹುಶಃ, ಏಕೆ? ಖಚಿತವಾಗಿ ತಮಿಳು+ಆರ್ಯ ಎಂಬುದರ ಆಡುಮಾತಿನ ರೂಪ. ತಿಗುಳ್ [ತಮಿಳು> ದ್ರಮಿಳ್>ದ್ರಾವಿಡ] ಪ್ರದೇಶದಲ್ಲಿ ನೆಲೆನಿಂತ ಬ್ರಾಹ್ಮಣ ಲಿಪಿಯೆಂದೇ ಇದಕ್ಕೆ ಅರ್ಥ.

ತಿಗಳಾರಿ ಲಿಪಿ ಐವತ್ತು ಅಕ್ಷರಗಳ ಧ್ವನಿಸಂಕೇತ [Sound Symbols] ವನ್ನು ಹೊಂದಿದ್ದು ತನ್ನದೇ ಆದ ಕಾಗುಣಿತ ಮಾದರಿಯನ್ನು ಒಳಗೊಂಡಿದೆ. ಧ್ವನಿಯನ್ನು ಕೊರತೆಯಿಲ್ಲದೇ ಸೂಚಿಸಲಿಕ್ಕೆ ಉಪಯುಕ್ತ ಸಂಕೇತವಿದೆ. ವ್ಯಂಜನಾಕ್ಷರಗಳೊಡನೆ ಸ್ವರಗಳ ಸಂಯೋಗವಿದ್ದುದನ್ನು ಲಿಪಿಯಲ್ಲಿ ಕಾಣಬಹುದು. ಇದರಲ್ಲಿ ದೇವನಾಗರಿಯಂತೆ ದೀರ್ಘ 'ಎ' 'ಒ' ಕಾರಗಳಿಲ್ಲ, ಬದಲು 'ಲೃ' 'ಲೄ' ವಿದೆ. ಸಂಸ್ಕೃತ ವಾಙ್ಮಯವನ್ನು ದ್ರಾವಿಡ ನಾಡಿನಲ್ಲಿ ಹಬ್ಬಿಸುವ ಪ್ರಯತ್ನ, ಆದರಿಂದ ಪ್ರಭಾವಿತವಾದ ಸ್ವರೂಪ ಈ ಲಿಪಿಯಲ್ಲಿ ಅಚ್ಚಳಿಯದಂತೆ ಉಳಿದುಕೊಂಡಿದೆ. ಲಿಪಿಯ ಕಾಲಾನುಸಾರಿಯಾದ ವಿಕಾಸವನ್ನು ಹಸ್ತಪ್ರತಿಗಳಲ್ಲಿ

---

೧. SII IX—೧೧೮ ಹಿರೇಹಡಗಲಿ, ಬಳ್ಳಾರಿ ಜಿಲ್ಲೆ (೧೦೫೭)
(ಕೃಪೆ : ಡಾ. ಎಂ. ಎಂ. ಕಲಬುರ್ಗಿಯವರು.)

೨. ಸರ್ವಜ್ಞನ ವಚನಗಳು—ಸಂ: ಉತ್ತಂಗಿ ಚೆನ್ನಪ್ಪ
ನೀತಿಪದ್ಧತಿ ಪದ್ಯ ೧೩೭೬—ಪು. ೨೧೯.

೩. Tamil Lexicon—Volume III. Page 1865.

ಕಾಣುವುದು ಸಾಧ್ಯ. ತಮಿಳಿಗಿಂತ ಹೆಚ್ಚಾಗಿ ಮಲೆಯಾಳಲಿಪಿಗೆ ಅಧಿಕವಾದ ಸಾಮ್ಯದಿಂದ ಹತ್ತಿರದ ಸಂಬಂಧವನ್ನು ಲಿಪಿಯ ಬೆಳವಣಿಗೆಯಲ್ಲಿ ಕಾಣಬಹುದು. ದ್ರಾವಿಡ ಲಿಪಿಗಳ ಸಮೀಪಿನ ಪ್ರಭಾವದಿಂದ ಹಸ್ತಪ್ರತಿಗಳಲ್ಲಿ ಬೇರೆಬೇರೆ ಪ್ರಯೋಗಗಳು ಅಕ್ಷರಗಳಿಗೆ ಬಳಕೆಯಾಗಿವೆ. ಇವು ಲಿಪಿಯ ವರ್ಣಾತ್ಮಕ ಪರಿಶೀಲನೆಯಿಂದ ಗೊತ್ತಾಗುವ ಮಹತ್ವದ ಅಂಶಗಳು.

ಐತಿಹ್ಯಗಳು, ನಾಗರಿಕ ಪ್ರಪಂಚಕ್ಕೆ ಸಾಂಸ್ಕೃತಿಕ ದಾಖಲೆಗಳು. ತಿಗಳಾರಿ ಲಿಪಿಯ ಕುರಿತು ಉತ್ತರಕನ್ನಡ ಜಿಲ್ಲೆಯಲ್ಲಿ ಪ್ರಚಲಿತವಿರುವ ಐತಿಹ್ಯಗಳನ್ನು ಸಂಗ್ರಹಿಸಿದಾಗ ಎರಡು ಬೆಲೆಯುಳ್ಳ ಗುರಿಗಳು ಲಿಪಿಯ ಬಳಕೆಯಲ್ಲಿ ಕಂಡು ಬರುತ್ತವೆ. ಅಲ್ಲಿಯ ಸಂಸ್ಕೃತ ಬಲ್ಲ ಪಂಡಿತರು—ಇದು ಮಲೆಯಾಳ ದೇಶದಿಂದ ನಮ್ಮ ನಾಡಿನಲ್ಲಿ ಹರಡಿದೆ. ಹಿಂದೆ ಜ್ಯೋತಿಷ, ಆಯುರ್ವೇದಗಳಲ್ಲಿ ನಿಷ್ಣಾತರಾದ ಮಲೆಯಾಳಿ ವಿದ್ವಾಂಸರಲ್ಲಿ ಕರಾವಳಿಪ್ರದೇಶದಿಂದ ವಿದ್ಯಾವ್ಯಾಸಂಗಕ್ಕೆಂದು ಕೇರಳದ ಭಾಗಗಳಿಗೆ ತೆರಳಿ, ಅಲ್ಲಿಂದ ಮರಳುವಾಗ ಕಾವ್ಯಶಾಸ್ತ್ರದ ಪಾಂಡಿತ್ಯದೊಡನೆ ಲಿಪಿಯನ್ನು ತಂದು ತಾಡವೋಲೆಗಳಲ್ಲಿ ಬರೆದಿಟ್ಟರು. ಮುಂದೆ ಮಲೆನಾಡ ತುಂಬ ಹಸ್ತಪ್ರತಿಗಳಲ್ಲಿ ಕಾಣಿಸಿಕೊಳ್ಳಲು, ಈ ಐತಿಹ್ಯ ಐತಿಹಾಸಿಕವಾಗಿಯಲ್ಲದಿದ್ದರೂ ಸಮರ್ಪಕವಾದುದು. ರಾಮಾಯಣ, ಮಹಾಭಾರತ, ವೇದ, ನಿರುಕ್ತ ಇವು ಸಾಮಾನ್ಯರ ಬೀದಿಪಾಲಾಗಿ ಹೋಗದೇ ಗುಪ್ತನಿಧಿಯಾಗಿ ಉಳಿದಲ್ಲಿ ಅವು ಶಾಶ್ವತವಾಗಬಹುದು, ಎಂದು ತಿಗಳಾರಿಯಲ್ಲಿ ಸಾಮಾನ್ಯರ ಭಾಷೆಯಾದ ಕನ್ನಡದಿಂದ ದೂರವಾಗಿ ತಾಡುವೋಲೆಗಳಲ್ಲಿ ಬಳಸಲಾಯಿತೆಂಬುದು ತಥ್ಯಾಂಶವಿಲ್ಲದ್ದೆಂದು ತೋರಿದರೂ ಲಿಪಿಯ ಗೌಪ್ಯತೆಯ ಪರಿಚಯವಾಗದಿರದು. ಹೇಗಿದ್ದರೂ ದೇವನಾಗರೀ ಲಿಪಿಗಿರುವ ಪಾವಿತ್ರ್ಯ, ಮಹತ್ವ, ವರ್ಚಸ್ಸು ತಿಗಳಾರಿಲಿಪಿಗೆ ಪ್ರಾಪ್ತವಾಗಿದೆ.

ತಿಗಳಾರಿಲಿಪಿಯ ಐತಿಹಾಸಿಕ ಮಹತ್ವದ ಕುರಿತು ಸತ್ಯಸಂಗತಿಗಳನ್ನು ಚರ್ಚಿಸಬಹುದು. ದ್ರಾವಿಡ ಲಿಪಿವಿಜ್ಞಾನದಲ್ಲಿ ಮಹತ್ತರವಾದ ಪಾತ್ರವಹಿಸುವ 'ತಿಗಳಾರಿ', ಬೃಹದ್ ಭಾರತ ದೇಶದ ಎಲ್ಲ ಲಿಪಿಗಳೂ ಕನ್ನಡ ತೆಲಗು ಮುಂತಾದ ದಕ್ಷಿಣದ ಲಿಪಿಗಳು ಬ್ರಾಹ್ಮೀ ಲಿಪಿಯಿಂದ ಹುಟ್ಟಿ ಬೆಳೆದಂತೆ[೪] ಇದೂ ಅದರಿಂದ ಹೊರತಾಗಿಲ್ಲ. ಇನ್ನು ತಿಗಳಾರಿ, ತುಳು ಲಿಪಿಯೇ(?) ಎಂಬ ಸಂಶಯವನ್ನು ಸಂಶೋಧಕರಲ್ಲಿ ಡಾ. ಬರ್ನೆಲ್‌ರು ಹುಟ್ಟಿಸಿದ್ದಾರೆ. ಹಳೆಯ ತುಳು (ತಿಕಳಾರಿ) ಚೇರ ಲಿಪಿಯಿಂದಾದ ಹಳೆಯ ಗ್ರಂಥದಿಂದ ಹುಟ್ಟಿದೆಯೆನ್ನುತ್ತಾರೆ. ಅವರ ಪರಿಶೋಧನೆಯ ಸಾರವನ್ನು ದಕ್ಷಿಣಭಾರತದ ಲಿಪಿಗಳ ವಿಕಾಸದ ಹಿನ್ನೆಲೆಯಲ್ಲಿ ಕಾಣಬಹುದು[೫] ತುಳುಭಾಷೆಗೆ ಲಿಪಿಯಿಲ್ಲವೆಂದೇ ವಿದ್ವಾಂಸರ ವಿಕಾಸದ ಅಭಿಪ್ರಾಯವಿದೆ.

---

೪. ಕರ್ನಾಟಕದಲ್ಲಿ ಅಶೋಕ ಧರ್ಮಲಿಪಿಗಳು—ಡಾ. ಜಿ. ಎಸ್. ಗಾಯಿ. ಪ್ರಬುದ್ಧ ಕರ್ನಾಟಕ ಸಂ: 49, ಸಂ. 1.

೫. Elements of South Indian Palaeography —Dr. A. C. Burnel, P. 14.

**ದಕ್ಷಿಣಭಾರತದ ಲಿಪಿಗಳ ವಿಕಾಸ**

ಕ್ರಿ. ಶ. ಪೂ. ೨೫೦ — ದಕ್ಷಿಣ ಅಶೋಕನ ಶಾಸನ ಲಿಪಿಗಳು

ಕ್ರಿ. ಶ. ೧ನೆಯ ಶತಮಾನ — ಗುಹಾಲಿಪಿ; ಗುಪ್ತಲಿಪಿ

ಕ್ರಿ. ಶ. ೩ನೆಯ ಶತಮಾನ — ಚೇರ; ಚಾಲುಕ್ಯ; ವೆಂಗಿ; ನಾಗರಿ

ಕ್ರಿ. ಶ. ೬೫೦ — ಹಳೆಯ ಗ್ರಂಥ; ವಟ್ಟೆಳುತ್ತು; ಪ. ಚಾಲುಕ್ಯ, ಪೂ. ಚಾಲುಕ್ಯ; ಹಳೆಯ ಜಾವಾ ಕುಯಿ; ಹಳೆಯ ನಂದಿನಾಗರಿ

ಆಧುನಿಕ ಜಾವಾ; ನಂದಿ ನಾಗರಿ

ಕ್ರಿ. ಶ. ೧೨೦೦ — ಹಳೆಯ ತುಳು, ಮಲೆಯಾಳ; ಮಧ್ಯ ಗ್ರಂಥ; ತಮಿಳು; ಪರಿವರ್ತನ ಶೀಲ

ಕ್ರಿ. ಶ. ೧೬೦೦ — ತುಳು; ಮಲೆಯಾಳ; ಗ್ರಂಥ; ಹಳೆಗನ್ನಡ, ಹಳೆತೆಲುಗು

ಕನ್ನಡ; ತೆಲುಗು

- ದಕ್ಷಿಣ ಅಶೋಕನ ಶಾಸನ ಲಿಪಿಗಳು
  - ಗುಹಾಲಿಪಿ
    - ಚೇರ
      - ಹಳೆಯ ಗ್ರಂಥ
        - ಹಳೆಯ ತುಳು, ಮಲೆಯಾಳ
          - ತುಳು
          - ಮಲೆಯಾಳ
        - ಮಧ್ಯ ಗ್ರಂಥ
          - ಗ್ರಂಥ
    - ಚಾಲುಕ್ಯ
      - ವಟ್ಟೆಳುತ್ತು
        - ತಮಿಳು
      - ಪ. ಚಾಲುಕ್ಯ, ಪೂ. ಚಾಲುಕ್ಯ
        - ಪರಿವರ್ತನ ಶೀಲ
          - ಹಳೆಗನ್ನಡ
            - ಕನ್ನಡ
          - ಹಳೆತೆಲುಗು
            - ತೆಲುಗು
    - ವೆಂಗಿ
      - ಹಳೆಯ ಜಾವಾ ಕುಯಿ
        - ಆಧುನಿಕ ಜಾವಾ
  - ಗುಪ್ತಲಿಪಿ
    - ನಾಗರಿ
      - ಹಳೆಯ ನಂದಿನಾಗರಿ
        - ನಂದಿ ನಾಗರಿ

ತಿಗಳಾರಿ, ತುಳು ಲಿಪಿಯಲ್ಲವೆನ್ನಲು ಸಾಕಷ್ಟು ಆಧಾರಗಳಿವೆ. "ತುಳು ಲಿಪಿಯನ್ನು ಬಳಸುವ ತುಳುವನೊಬ್ಬನೂ ಪ್ರಾಯಶಃ ಇಲ್ಲ".[೧] ಇದನ್ನು ಡಾ. ಬರ್ನೆಲ್‌ರೂ ಒಪ್ಪಿ ತಮ್ಮ ಹೊತ್ತಿಗೆಯ ವಿಷಯ ವಿವರಣೆಯಲ್ಲಿ ಸ್ಪಷ್ಟ ಪಡಿಸಿದ್ದಾರೆ.[೨] ತಿಗಳಾರಿ ಕಾಗದಪತ್ರ, ತಾಡವೋಲೆ, ಗ್ರಂಥಗಳಲ್ಲಿ ತುಳು ಭಾಷೆಯ ನುಡಿಗಳು ಎಲ್ಲೂ ಕಾಣಿಸಿಕೊಳ್ಳುವುದಿಲ್ಲ. ಯಾವುದೇ "ಒಂದು ಲಿಪಿಯು ಹುಟ್ಟು ಮತ್ತು ಬೆಳವಣಿಗೆ ಅದನ್ನು ಉಪಯೋಗಿಸುವ ಜನರ ಸಂಸ್ಕೃತಿಯ ಪ್ರತೀಕವಾಗಿರುತ್ತದೆ. ಪ್ರತಿಯೊಂದು ಶಬ್ದದ ಉಚ್ಚಾರಣೆಗೆ ಅಸಂದಿಗ್ಧವಾದ ಸಂಜ್ಞೆಯಿರಬೇಕು; ಬರೆದಂತೆ ಓದುವಂತಿರಬೇಕು. ಅಂದರೆ ಉಚ್ಚಾರಿತ ಅಕ್ಷರ ಹಾಗು ಲಿಖಿತ ವರ್ಣ ಇವುಗಳ ಸಂಬಂಧ ಸಂಪೂರ್ಣವಿರಬೇಕು"[೩] ಎಂಬ ಮಾತಿಗೆ ತಿಗಳಾರಿಗೂ ತುಳುವಿಗೂ ಭಿನ್ನತೆ ತೋರುತ್ತದೆ. "ಅಚ್ಚ ತುಳುಭಾಷೆಯ ವರ್ಣಸಮಾಮ್ನಾಯ ನೋಡಿದಾಗ ಅದರಲ್ಲಿ ಕನ್ನಡದಂತೆಯೇ ಮಹಾಪ್ರಾಣಾಕ್ಷರಗಳಿಲ್ಲ".[೪] ಆದ್ದರಿಂದ ತುಳುವಿನಲ್ಲಿ ವರ್ಗೀಯ ವ್ಯಂಜನಗಳು ಕೇವಲ ೧೫. ತಿಗಳಾರಿಲಿಪಿ ಮಹಾಪ್ರಾಣಾಕ್ಷರವನ್ನೊಳಗೊಂಡಿದೆ. " 'ಐ' ಕಾರ 'ಔ' ಕಾರಗಳು ತುಳುಭಾಷೆಯ ಶಬ್ದಗಳನ್ನು ಉಪಯೋಗಿಸಲು ಅಗತ್ಯವಿಲ್ಲ". ತಿಗಳಾರಿಯಲ್ಲಿ 'ಐ' 'ಔ' ಕಾರಗಳಿವೆ. "ತುಳುವಿನಲ್ಲಿ ಈಗ ಇರುವ 'ಹ' ಕಾರಯುಕ್ತ ಪದಗಳು ಕನ್ನಡವೇ ಮೊದಲಾದ ಅನ್ಯಭಾಷೆಗಳಿಂದ ಬಂದಿದ್ದು, 'ಹ' ಕಾರದ ಬದಲು 'ಪ' ಕಾರವನ್ನು ಬಳಸಲಾಗುತ್ತದೆ. ಆದ್ದರಿಂದ ಅಚ್ಚ ತುಳುವಿನಲ್ಲಿ ಯ್, ರ್, ಲ್, ವ್, ಸ್, ಳ್ ಎಂಬ ಆರು ಅವರ್ಗೀಯ ವ್ಯಂಜನಗಳಿವೆ. ಶ್, ಷ್ ಗಳು ತುಳುವಿನಲ್ಲಿಲ್ಲ" ತಿಗಳಾರಿಲಿಪಿಯಲ್ಲಿ 'ಹ'ಕಾರ 'ಹ'ಕಾರವಾಗಿಯೇ 'ಪ'ಕಾರ 'ಪ'ಕಾರವಾಗಿಯೇ 'ಶ' 'ಸ'ಗಳಿಂದ ಕೂಡಿ ಅವರ್ಗೀಯ ವ್ಯಂಜನಗಳು ಹನ್ನೊಂದಾಗಿವೆ. ಇಲ್ಲಿ ಭಾಷೆಗೂ ಲಿಪಿಗೂ ಸಂಬಂಧವಿಲ್ಲವೆಂದು ವಾದಿಸಬಹುದಾದರೂ ಅದು ಪ್ರಮಾಣಜ್ಞಾನ, ಹಾಗೂ ವೈಜ್ಞಾನಿಕವಾಗಿಯೂ ಅಸಮರ್ಪಕ

---

೧. ತೌಳವ ಭಾಷೆ—ಕೆ. ವೆಂಕಟರಾಮಾಚಾರ್ಯ
ಪ್ರಬುದ್ಧ ಕರ್ನಾಟಕ ಸಂ. 47. ಸಂಚಿಕೆ 2. 1965, ಪು. 135.

೨. Elements of South Indian Palaeography.
—Dr. A. C. Burnel, Page 41.

೩. ಕನ್ನಡ ಲಿಪಿ–ಕನ್ನಡ ವಿಶ್ವಕೋಶ.
—ಸಂ. III ಪು. 807-808.

೪. ತುಳು ಭಾಷೆ, ಒಂದು ಅಧ್ಯಯನ—ಬಿ. ವಿವೇಕ ರೈ.
ಪ್ರಬುದ್ಧ ಕರ್ನಾಟಕ ಸಂ. 53, ಸಂಚಿಕೆ 2, ಪು. 82-83.

ವಾಗುತ್ತದೆಯೆಂದು ನಮ್ಮ ಅಭಿಪ್ರಾಯ. ಇದರಿಂದ ತುಳು ಭಾಷೆಯ ವರ್ಣಮಾಲೆ ತಿಗಳಾರಿಲಿಪಿಯಲ್ಲಿ ವ್ಯತ್ಯಾಸವನ್ನು ಪಡೆಯುವುದರಿಂದಲೂ[10] ತುಳುವಿನ ಆಡುನುಡಿಯ ಧ್ವನ್ಯನುರೂಪತೆ ತಿಗಳಾರಿಲಿಪಿಯ ಗ್ರಂಥಗಳಲ್ಲಿ ಕಾಣಿಸಿಕೊಳ್ಳದಿರುವುದರಿಂದಲೂ ತುಳುಲಿಪಿ ತಿಗಳಾರಿಯಲ್ಲವೆಂದು ಹೇಳಬಹುದಾದರೂ ವಿದ್ವಾಂಸರಾದ ಡಾ. ಬರ್ನೆಲ್‌ರು ತಿಗಳಾರಿಯನ್ನು ತುಳುವೆಂದು ಹೇಗೆ ಗ್ರಹಿಸಿದರು ಎಂಬುದೇ ವ್ಯಕ್ತವಾಗುವುದಿಲ್ಲ. ಆದರೆ ತುಳು ಹಾಗೂ ತಿಗಳಾರಿ ಲಿಪಿಗೆ ಕೆಲವೊಂದು ನಿಟ್ಟಿನಲ್ಲಿ ಹೋಲಿಕೆಗಳಿರುವುದು ಸಾಧ್ಯವಿದೆ.

ಅಪೂರ್ವವಾದ ಈ ಲಿಪಿಯ ಕುರಿತು ವಿಶ್ಲೇಷಣೆ, ವ್ಯಾಸಂಗ ನಡೆಯಬೇಕಾಗಿರುವಾಗ ಕೆಲವು ಸಮಂಜಸವೆಂದು ತೋರಿದ ಮಹತ್ವದ ಅಂಶಗಳನ್ನು ವ್ಯಕ್ತಪಡಿಸಬಹುದು. ಭಾರತದ ಲಿಪಿಪ್ರಪಂಚದಲ್ಲಿ ದ್ರಾವಿಡ ಲಿಪಿವಿಜ್ಞಾನಕ್ಕೆ ಮಹತ್ತರವಾದ ಸ್ಥಾನವಿದೆ. ಪೂರ್ವದ್ರಾವಿಡದಿಂದ ಹುಟ್ಟಿದ ದ್ರಾವಿಡಭಾಷೆಗಳಲ್ಲಿ ತಮಿಳು, ತೆಲುಗು, ಕನ್ನಡ, ಮಲೆಯಾಳಂ ಭಾಷೆಗಳು ಇಂದಿನ ವರೆಗೆ ಲಿಪಿಯ ಬೆಳವಣಿಗೆಯನ್ನು ಹೊಂದಿವೆ. ತಮಿಳು, ಚೇರ ಮೂಲದ ಹಳೆಯ ಗ್ರಂಥ ಹಾಗೂ ವಟ್ಟೆಳುತ್ತು ಶಾಖೆಯಿಂದ ಉದ್ಭವಿಸಿವೆ; ಮಲೆಯಾಳ ಲಿಪಿ ಕೂಡ ಈ ಹಳೆಯ ಗ್ರಂಥಲಿಪಿಯಿಂದಲೇ ಹುಟ್ಟಿದೆ. ಪುರಾತನ ಗ್ರಂಥಲಿಪಿಯಿಂದ ಹುಟ್ಟಿದ ಅನೇಕ ಲಿಪಿಗಳಲ್ಲಿ ತಿಗಳಾರಿ ಕೂಡ ಒಂದು ಸಮಾಜದ ಉಚ್ಚ ವರ್ಗದಲ್ಲಿ ಇದು ಬಳಕೆಯಾಗುತ್ತ ಬಂದಿರುವುದರಿಂದ ಇಂದಿಗೂ ಹಸ್ತಪ್ರತಿ, ತಾಡವೋಲೆಗಳಲ್ಲಿ ಶತಶತಮಾನಗಳಿಂದ ಅಸ್ತಿತ್ವವನ್ನು ಹೊಂದಿದೆ. ತಮಿಳು ಮತ್ತು ಮಲೆಯಾಳಂ ಲಿಪಿಯು ಬೇರಾದ ಗ್ರಂಥಲಿಪಿಯಿಂದ ಅವು ಬೇರೆಬೇರೆ ಕವಲೊಡೆಯುವ ಕಾಲದ ಪರಿವರ್ತನಶೀಲ ಲಿಪಿ ಅಥವಾ ಮಧ್ಯಂತರದ ಲಿಪಿಯಾಗಿ ಉಳಿದುಕೊಂಡಿರಬೇಕು. ದ್ರಾವಿಡ ನೆಲದಲ್ಲಿ ನಿಂತ ಆರ್ಯಪೀಳಿಗೆಗೆ ಸಂಸ್ಕೃತ ಮುಂತಾದ ಭಾರತೀಯ ಆರ್ಷೇಯ ವಾಙ್ಮಯದ ಪ್ರತಿನಿಧಿತ್ವವನ್ನು ವಹಿಸಲು ಆ ಸಮಾಜದ ಒಂದೇ ವರ್ಗ ವಂಶಪಾರಂಪರ್ಯವಾಗಿ ಬೆಳಸಿಕೊಂಡು ಬಂದಿರಬೇಕು. ತಿಗಳಾರಿ ಗ್ರಂಥಲಿಪಿಯಿಂದ ಉದ್ಭವಿಸಿದ ಸ್ವತಂತ್ರಲಿಪಿ ಎಂಬುದು ಖಚಿತವಾಗಿದೆ. ಕ್ರಮೇಣ ಕನ್ನಡ ಮುಂತಾದ ದ್ರಾವಿಡ ಪರಂಪರೆಯನ್ನೂ ತನ್ನಲ್ಲಿ ಮೈಗೂಡಿಸಿಕೊಳ್ಳುವಂತಾಯಿತು.

---

೧೦. ಆರ್. ಎಸ್. ಪಂಚಮುಖಿಯವರು ತುಳುಲಿಪಿ ಹಾಗೂ ತಿಗಳಾರಿಲಿಪಿಗಳು ಬೇರೆ ಬೇರೆಯಾಗಿದ್ದು ಪ್ರಾದೇಶಿಕ ಸಂಬಂಧದಿಂದ ಒಂದಕ್ಕೊಂದು ಹೋಲಿಕೆಯನ್ನು ಪಡೆಯುವವರ ಜೊತೆಗೆ ಅವು ಮೂಲ ಗ್ರಂಥಲಿಪಿಯಿಂದ ಉದ್ಭವಿಸಿದ ಎರಡು ಭಿನ್ನ ಮಾದರಿಯ ಸ್ವತಂತ್ರ ಲಿಪಿಗಳೆಂದು (ಸಂದರ್ಶನದಲ್ಲಿ) ಅಭಿಪ್ರಾಯಪಟ್ಟಿದ್ದಾರೆ.

ತಿಗಳಾರಿಲಿಪಿಗಳ ಕಾಗದಪ್ರತಿ, ತಾಡಪ್ರೋಲೆ, ಗ್ರಂಥಗಳ ಪರಿಶೀಲನೆ, ಸಂಶೋಧನೆ, ಅಧ್ಯಯನದಿಂದ ನಮ್ಮ ಕನ್ನಡ ನಾಡಿನ ಧಾರ್ಮಿಕ ಪರಂಪರೆ, ವೈಚಾರಿಕ ಭೂಮಿಕೆ, ಸಾಂಸ್ಕೃತಿಕ ಇತಿಹಾಸಕ್ಕೆ ಹೊಸ ಬೆಳಕು ನೀಡಬಹುದು. ಆಯುರ್ವೇದ, ವೈದ್ಯಕೀಯ, ಜ್ಯೋತಿಷಶಾಸ್ತ್ರದಲ್ಲಿ ಕೂಡ ಸಾಹಿತ್ಯದಂತೆ ಕನ್ನಡಿಗರು ಮಾಡಿದ ಕೈಂಕರ್ಯದ ವ್ಯಾಪಕ ಪರಿಚಯದೊಡನೆ ಈಗಿನ ಸಂಶೋಧಿತ ವಿಷಯಕ್ಕೂ ಹೆಚ್ಚಿನ ಧವಳಪರಂಪರೆ ಕರ್ನಾಟಕಕ್ಕೆ "ತಿಗಳಾರಿ" ಲಿಪಿಯ ಗ್ರಂಥಗಳ ಅವಲೋಕನದಿಂದ ಪ್ರಾಪ್ತವಾಗುತ್ತವೆ.

ಈ ಲೇಖನವನ್ನು ಸಿದ್ಧಪಡಿಸುವಲ್ಲಿ ತಿದ್ದಿ, ಸಲಹೆ ನೀಡಿದ ನನ್ನ ವಿದ್ಯಾಗುರುಗಳಾದ ಡಾ. ಮಲ್ಲಿನಾಥ ಕಲಬುರ್ಗಿ ಹಾಗೂ ಡಾ. ಕೆ. ಜಿ. ಶಾಸ್ತ್ರಿ ಅವರಿಗೆ ಋಣಿಯಾಗಿರುವೆ.

# ತಿಗಳಾರಿ ಲಿಪಿ

ಅ ಆ ಇ ಈ ಉ ಊ ಋ ೠ ಌ ೡ ಎ ಐ ಒ ಔ ಅಂ ಅಃ

ಕ ಖ ಗ ಘ ಙ ಚ ಛ ಜ ಝ ಞ ಟ ಠ ಡ ಢ ಣ ತ ಥ ದ ಧ ನ ಪ ಫ ಬ ಭ ಮ

ಯ ರ ಲ ವ ಶ ಷ ಸ ಹ ಳ ಕ್ಷ ಜ್ಞ

ಕ ಕಾ ಕಿ ಕೀ ಕು ಕೂ ಕೆ ಕೈ ಕೊ ಕೌ ಕಂ ಕಃ

# ಪಂಪಭಾರತದ ಪಾಠಾಂತರಗಳು :
## (ದ್ವಾದಶ, ತ್ರಯೋದಶ, ಚತುರ್ದಶ ಆಶ್ವಾಸಗಳು)

ಹೇಮಲತಾ ಪದಕಿ

೧೨-೩: ಅರ್ಜುನ ಮಹೋಗ್ರವಾದ ಅರಿನೃಪಸಮುದಾಯವನ್ನು ಗೆದ್ದು, ಮರಳಿ ಕಾಳಗಕ್ಕೆ ಬಂದು ನಿಂತನು. ದ್ರೋಣನು, ತನ್ನ ಸಂರಕ್ಷಣೆಗೆ ಕೌರವ ನೊಪ್ಪಿಸಿದ ಸೈಂಧವನನ್ನು ಕಾಯುವೆನೆಂದು ಪ್ರತಿಜ್ಞೆ ಮಾಡಿರುವಲ್ಲಿ **ಅ**ವನು ದೈವಗತಿಯಿಂದ ತನಗಿಂತ ಮುಂಚೆಯೇ ಸತ್ತುಹೋದುದನ್ನು ತಾನು ತಪ್ಪಿಸು ವುದು ಸಾಧ್ಯವಾಗಿರಲಿಲ್ಲವೆಂದೂ, ಸೈಂಧವನೇನಾಗುವನೋ ತಾನೂ ಅದೇ ಆಗುವೆ ನೆಂದು ಹೇಳಿದ ತನ್ನ ಮೊದಲ ಪ್ರತಿಜ್ಞೆಗೆ ಈಗಲೂ ತಪ್ಪುವನಲ್ಲವೆಂದು ಹೇಳಿ ಯುದ್ಧಕ್ಕೆ ಸಿದ್ಧನಾಗುತ್ತಾನೆ. ಈ ವಿಷಯಗಳನ್ನೊಳಗೊಂಡ ೩ನೆಯ ಪದ್ಯದಲ್ಲಿ 'ಕಮ್ಮಱಿ' ಪದ ವಿಚಾರಾರ್ಹವಾದದ್ದು. ದ್ರೋಣ ತನಗೆ ತಾನೇ ಹೇಳಿಕೊಳ್ಳು ತ್ತಾನೆ— "ಈ ಉಪಾಧ್ಯಾಯ, ಯುದ್ಧದಲ್ಲಿ ಏನು ತಿಳಿದವನು? ಬೇರೆಯವರಿಗೆ ಉಪದೇಶಿಸುತ್ತಾನೆಯೇ ಹೊರತು ತನ್ನ ವಿಷಯಕ್ಕೆ ಆ ಉಪದೇಶವನ್ನು ಅನ್ವ ಯಿಸಿಕೊಳ್ಳುವುದಿಲ್ಲ. ಇದು ತಪ್ಪು. ಈತ ನುಡಿದಂತೆ ನಡೆಯದವನು ಎಂಬ ಮಾತನ್ನು ಸುಳ್ಳುಮಾಡುತ್ತೇನೆ." ಇಲ್ಲಿ ಕಮ್ಮಱಿ ಪದ ಸರಿಯಾದ ಅರ್ಥ ನೀಡುವುದಿಲ್ಲ. ಇದು ಸಂಸ್ಕೃತ ಕರ್ಮಕಾರದಿಂದ ಬಂದದ್ದೆಂದು ಪಂ. ಭಾ. ಕೋಶಕಾರರು ಹೇಳಿದ್ದಾರೆ. ಇದರ ಅರ್ಥ ಕಮ್ಮಾರ ಎಂದು. ಆದರೆ ನಿಜವಾಗಿ ಇದು ಕರ್ಮಾರಿ (ಸಂ) > ಕಮ್ಮರಿ. ಕರ್ಮಾರಿ ಎಂದರೆ ಕರ್ಮಕ್ಕೆ ಶತ್ರುವಾದವನು, ಕೆಲಸ ಮಾಡದವನು ಎಂದರ್ಥ. ಇದನ್ನು ಬೆಂಬಲಿಸುವಂತೆ ಆದಿಪುರಾಣದಲ್ಲಿ (೨-೬೧), ಚಂದ್ರಪುರಾಣ (೧೦-೧೨೪) ದಲ್ಲಿ ಕಮ್ಮರಿಯೋಜ ಎಂಬ ಪ್ರಯೋಗಗಳು ಕೆಲಸ ಮಾಡದವ ಎಂಬರ್ಥದಲ್ಲಿ ಇವೆ. ಗದಾಯುದ್ಧ ದಲ್ಲಿಯೂ ಕರ್ಮಕ್ಕೆ ಶತ್ರು ಎಂಬರ್ಥದಲ್ಲಿಯೇ ಈ ಪದ ಉಪಯೋಗಿಸಲ್ಪಟ್ಟಿದೆ. ಆದ್ದರಿಂದ ಪ್ರಯೋಗದಲ್ಲಿರುವ ಕಮ್ಮಱಿಯೊಜಂ ತಪ್ಪು, ಅದು ಕಮ್ಮರಿ ಯೊಜಂ. ಇಲ್ಲಿಯೂ ಕೂಡ 'ರ'ಕಾರಯುಕ್ತ ಪಾಠವೇ ಇರಬೇಕಾದದ್ದು.

೧೨-೪೨ : ದ್ರೋಣನನ್ನು ಹೀಯಾಳಿಸಿ ಕರ್ಣ ಮಾತನಾಡಿದಾಗ ಅದನ್ನು ಕೇಳಿ ಅಶ್ವತ್ಥಾಮ ಕರ್ಣನ ಮೇಲೇರಿ ಹೋಗುತ್ತಾನೆ ಮುನಿಸಿನಿಂದ. ಆಗ ಅವನನ್ನು ತಡೆಯುತ್ತ ಕೃಪ ಈ ರೀತಿ ಹೇಳುತ್ತಾನೆ— "ನಮ್ಮ ಸೇನೆ ಅಸದೃಶ ವಾಗಿದ್ದರೂ ಈ ಒಳಜಗಳಗಳಿಂದ ಶಕ್ತಿಹೀನವಾಗುತ್ತಿದೆ" ಇಲ್ಲಿ "ಖಳವ್ಯಸನ"

ಪಾಠ ಗಮನಾರ್ಹ. ಕ, ಖ, ಘ ಪ್ರತಿಗಳಲ್ಲಿ 'ಬಳವ್ಯಸನ' ಎಂಬ ಭಿನ್ನ ಪಾಠವಿದೆ. ಈ ಪಾಠವೇ ಹೆಚ್ಚು ಸೂಕ್ತವೆನಿಸುತ್ತದೆ. ಬಳವ್ಯಸನ ಇದು ಅರ್ಥಶಾಸ್ತ್ರದ ಪರಿಭಾಷೆ. ಇದರಲ್ಲಿ ಸೈನ್ಯದಲ್ಲಿಯ ಒಳಜಗಳ ಮುಂತಾದವುಗಳು ಸಮಾವೇಶಗೊಳ್ಳುತ್ತವೆ. ಪ್ರಸ್ತುತ ಸಂದರ್ಭಕ್ಕೆ 'ಬಳವ್ಯಸನ' ಪಾಠವೇ ಹೆಚ್ಚು ಸೂಕ್ತ, ಖಳವ್ಯಸನ ತಪ್ಪು ಪಾಠ.

೧೨-೫೨ : ಈ ಪದ್ಯದಲ್ಲಿ ಕರ್ಣನಿಗೆ ಸೇನಾಪತಿ ಪಟ್ಟಗಟ್ಟಿದ ಚಿತ್ರಣವಿದೆ. ಭೇರಿಗಳು ಮೊರೆಯುತ್ತಿರಲಾಗಿ, ವೇಶ್ಯಾಸಮೂಹ ನರ್ತಿಸುತ್ತಿರಲಾಗಿ ಪುಣ್ಯಜಲಂಗಳನು ತರಿಸಿ ಅಭಿಷೇಕ ಮಾಡುತ್ತ ಕರ್ಣನಿಗೆ ದುರ್ಯೋಧನ ವೀರಪಟ್ಟವನ್ನು ಕಟ್ಟಿದ. 'ಜಲಂಗಳಂ ತರಿಸಿ' ಎಂಬುದಕ್ಕೆ ಬದಲಾಗಿ ಮುದ್ರಿತ ಪ್ರತಿಯಲ್ಲಿ 'ಜಲಂಗಳಿಂ ತರಿಸಿ' ಎಂದಿದೆ. ತೃತೀಯೆಯ ಪ್ರಯೋಗ ದೋಷಪೂರ್ಣವಾದದ್ದು. 'ಕ' ಪ್ರತಿಯ ಪಾಠ 'ಜಲಂಗಳಂ ತರಿಸಿ' ದೋಷರಹಿತವಾದದ್ದು. ಆದ್ದರಿಂದ 'ಕ' ಪತಿಯ ಪಾಠ ಸ್ವೀಕಾರಾರ್ಹವೆನಿಸುತ್ತದೆ.

೧೨-೫೫ : ಅಂಗಾಧಿಪತಿ ವೀರಪಟ್ಟ ಕಟ್ಟಿಸಿಕೊಂಡು ಕುರುಪಿತಾಮಹರ ಕ್ಷಮೆ ಯಾಚಿಸಿ, ಆಶೀರ್ವಾದ ಪಡೆಯಲು ಹೋಗುತ್ತಾನೆ. ಅಲ್ಲಿ ಭೀಷ್ಮರಿಗೆ ಅವನು ಹೇಳುವ ಮಾತುಗಳಿವು— "ಯುದ್ಧದಲ್ಲಿ ನೀವು ಕೂಡ (ನಿಮ್ಮಡಿಯುಂ) ಆ ಪಾಂಡುಸುತರನ್ನು ಗೆಲ್ಲಲು ಅಸಾಧ್ಯರಾದವರು. ಇನ್ನು ನಮ್ಮಂಥವರು ಗೆಲ್ಲುವುದು ಆಶ್ಚರ್ಯದ ಮಾತು. ಆದ್ದರಿಂದ ಅರ್ಜುನನೊಡನೆ ಹೋರಾಡಿ ನನ್ನ ಛಲವನ್ನೇ ಸಾಧಿಸುತ್ತೇನೆ". ಇಲ್ಲಿ ಬರುವ 'ನಿಮ್ಮಡಿಯುಂ' ಗೌರವಾರ್ಥ ಸೂಚಕ ಪದ. ಶಬ್ದಶಃ ಅರ್ಥ—ನಿಮ್ಮ ಪಾದಗಳು— ಇಲ್ಲಿ ಹೊಂದುವುದಿಲ್ಲ. ಈ ಪದಕ್ಕಿರುವ ಶಬ್ದಶಃ ಅರ್ಥವನ್ನು ನಾವು ನಿರಾಕರಿಸಿದಾಗ ಅದರ ಕ್ರಿಯಾಪದ 'ಗೆಲಲರಿಯರುಂ' ಎಂಬುವನ್ನೂ ಕೂಡ ತ್ಯಜಿಸಬೇಕಾಗುತ್ತದೆ. ಗ, ಘ, ಪ್ರತಿಗಳಲ್ಲಿ 'ಗೆಲಲರಿಯರು' ಎಂಬ ಭಿನ್ನ ಪಾಠವಿದೆ. ಇದು ಗೌರವಾರ್ಥಸೂಚಕ 'ನಿಮ್ಮಡಿಯುಂ' (ನೀವು ಕೂಡ) ಕರ್ತೃವಿಗೆ ತಕ್ಕ ಕ್ರಿಯಾಪದ. ಆದ್ದರಿಂದ ಗ, ಘ ಪ್ರತಿಗಳ ಪಾಠ ಯೋಗ್ಯವಾದದ್ದು.

೧೨-೬೧ : ಈ ಪದ್ಯದಲ್ಲಿ ಕೃತವರ್ಮ ಚಿತ್ರಸೇನನ ವಧೆಮಾಡಿದ ವಿಷಯವನ್ನು ಹೇಳಲಾಗಿದೆ. ಮೇಲೆ ಬೀಳುವ ಬಾಣಗಳನ್ನು ನಾನಾಕಾರದ ಬಾಣಗಳಿಂದ ಕತ್ತರಿಸಿ ಚಿತ್ರಸೇನನನ್ನು ಕೃತವರ್ಮ ವಿಚಿತ್ರರೀತಿಯಿಂದ ವಧಿಸಿದನು. ಇಲ್ಲಿ, 'ಚಿತ್ರವಧಮಾಗೆ' ಎಂಬ ಪದ ಚಿಂತನೀಯ. 'ಚಿತ್ರವಧಮಾಗೆ ಕೊಂದೊಡೆ' ಎಂದರೆ ಇಲ್ಲಿ ಪುನರುಕ್ತಿದೋಷ ಕಂಡುಬರುತ್ತದೆ. ಆದರೆ ಖ, ಗ, ಘ ಪ್ರತಿಯ 'ವಿಧಮಾಗಿ' ಎಂಬ ಪಾಠವನ್ನು ಇಟ್ಟುಕೊಂಡರೆ ದೋಷ ದೂರವಾಗು

ತ್ತದೆ. 'ಚಿತ್ರ ವಿಧವಾಗಿ ಕೊಂದೊಡೆ' ಎಂದರೆ ವಿಚಿತ್ರರೀತಿಯಿಂದ ಕೊಂದಾಗ ಎಂಬ ಅರ್ಥ ಉಂಟಾಗುತ್ತದೆ. ಆದ್ದರಿಂದ ಖ, ಗ, ಘ ಪ್ರತಿಗಳ ಪಾಠ ಅರ್ಥ ದೃಷ್ಟಿಯಿಂದ ಸೂಕ್ತ ಪಾಠವೆನಿಸುತ್ತದೆ.

೧೨-೭೧ : ಈ ಪದ್ಯದಲ್ಲಿ ಭೀಮ ಅಶ್ವತ್ಥಾಮರ ಮಧ್ಯ ನಡೆದ ಯುದ್ಧದ ವರ್ಣನೆಯಿದೆ. ಭೀಮನ ಶರಾಘಾತದಿಂದ ಅಶ್ವತ್ಥಾಮನ ದೇಹದಿಂದ ರಕ್ತ ಧಾರಾಕಾರವಾಗಿ ಸೋರುತ್ತದೆ. ಇಲ್ಲಿ ಬರುವ 'ಸರ್ಪಯೋನಿ' ಪಾಠ ವಿಚಾರಾರ್ಹ. 'ಸ[ರ್ಪ]ಯೋನಿ]'ಯೆಂದು ಮುದ್ರಿತ ಪ್ರತಿಯ ಸಂಪಾದಕರು ಪರಿಷ್ಕರಿಸಿದ್ದಾರೆ. ಕ, ಗ, ಘ ಪ್ರತಿಗಳಲ್ಲಿ 'ಸರ್ಪರೋಗಿ' ಪಾಠವೂ, ಖ ಪ್ರತಿ ಯಲ್ಲಿ 'ಸರ್ಪಯೋಗಿ' ಪಾಠವೂ, ಇದೆ. ಸರ್ಪಯೋನಿ, ಸರ್ಪರೋಗಿ, ಸರ್ಪ ಯೋಗಿ ಈ ಮೂರು ಪಾಠಗಳ ಅರ್ಥ ಈ ಸಂದರ್ಭಕ್ಕೆ ಹೊಂದುವುದಿಲ್ಲ. 'ಸರ್ಪ' ಎಂಬ ಪರಿಷ್ಕೃತ ಪಾಠದ ಜೊತೆಗೆ ಕ, ಗ, ಘ, ಪ್ರತಿಯ ಪಾಠದ ಉತ್ತರಾರ್ಧವನ್ನು ಅಂದರೆ 'ರೋಗಿ' ಎಂಬುದನ್ನು ಇಟ್ಟುಕೊಂಡು 'ಸರ್ಪ ರೋಗಿ' ಎಂಬ ಹೊಸ ಪಾಠವನ್ನು ಸೃಷ್ಟಿಸಿದರೆ ಅರ್ಥದ ಹೊಂದಾಣಿಕೆಯಾಗು ತ್ತದೆ. ಡಾ|| ಡಿ. ಎಲ್. ಎನ್. ಕೂಡ 'ಸರ್ಪರೋಗಿ' ಎಂಬ ಪಾಠವನ್ನೇ ಇಟ್ಟುಕೊಂಡಿದ್ದಾರೆ. ಸರ್ಪರೋಗಿ ಎಂದರೆ ವಿಸರ್ಪಿಯೆಂಬ ರೋಗವನ್ನುಳ್ಳ ವನು. ಅವನ ರಕ್ತನಾಳವನ್ನು ಕತ್ತರಿಸಿದರೆ ವಿಷಯುಕ್ತ ಕಪ್ಪು ರಕ್ತ ಹರಿಯು ವಂತೆ ಇಲ್ಲಿಯೂ ಭೀಮನ ಬಾಣಗಳಿಂದ ಗಾಯಗೊಂಡ ಅಶ್ವತ್ಥಾಮನ ದೇಹ ದಿಂದ ಉಗುರುಬೆಚ್ಚಗಿನ, ಕರಿದಾದ ರಕ್ತ ಹರಿಯಿತು ಎಂದು ಅರ್ಥವಾಗು ತ್ತದೆ. ಈ ಹೊಸ ಪಾಠಸೃಷ್ಟಿ ಉಚಿತವೆಂದು ತೋರುತ್ತದೆ.

೧೨-೧೪೭ : " ಪ್ರತಿಸ್ಪರ್ಧಿಗಳಾದ ದುಶ್ಶಾಸನ-ಭೀಮ ಇವರಿಬ್ಬರೂ ಬದ್ಧವೈರದಿಂದ ಯುದ್ಧಮಾಡುವ ಸನ್ನಿವೇಶದಲ್ಲಿ ಬರುವ ಪದ್ಯ ೧೨-೧೪೭. ಅಸಹನೆ ಎದ್ದ (?) ಶತ್ರುವಿನ ಬೇರನ್ನು ಕತ್ತರಿಸಿ, ಅಧಿಕವಾಗಿ ವ್ಯಾಪಿಸಿದ ಹಳೆಯ ಮಾತ್ಸರ್ಯದಿಂದ ಮರ್ಮಸ್ಥಾನಗಳನ್ನು ಮೂದಲಿಸಿ, ಒಬ್ಬರು ಮತ್ತೊಬ್ಬರ ಆಯುಸ್ಥಾನಕ್ಕೆ ಹೊಡೆದರಂತೆ. ಈ ಪದ್ಯದ ಪ್ರಾರಂಭದ ಪಾದದ ಪೂರ್ವಾರ್ಧದಲ್ಲಿನ 'ಕಱುಪೆಲ್ದು' ಪದ ವಿಚಾರಾರ್ಹವಾದದ್ದು. ಅದು ಕಱುಪು+ ಎಲ್ದು = ಕಱುಪೆಲ್ದು ಎಂದಾಗಿದೆ. ಕಱುಪು ಎಂದರೆ ಅಸಹನೆ; ಎಲ್ದು ಎಂದರೆ ಎದ್ದು. ಆದರೆ ಅಸಹನೆ ಎದ್ದ ಎಂಬೀ ವಿವರಣೆಯಲ್ಲಿ ಹೊಂದಾಣಿಕೆಯಿಲ್ಲ. ಈಗ ಎಲ್ದು ಪದಕ್ಕಿರುವ ಪಾಠಾಂತರ ಗಮನಿಸೋಣ. ಪಂ. ಭಾ. ದ ಖ, ಗ ಪ್ರತಿಗಳಲ್ಲಿ 'ಎರ್ದ' ಎಂಬ ಪದವಿದೆ, ಆದರೆ ಎರ್ದ ಪದ ಎಲ್ದು ಪದದ ತದ್ರೂಪಾ ಯದ ರೂಪವಾದುದರಿಂದ ಸ್ವೀಕಾರಾರ್ಹವಲ್ಲ. ಘ ಪ್ರತಿಯಲ್ಲಿ 'ಇರ್ದ' ಎಂಬ

ಪದವಿದೆ. ಈ ಪಾಠ ಅತ್ಯಂತ ಯೋಗ್ಯವಾಗಿದೆ. 'ಬಾಲ್ಯದಿಂದಲೂ ಒಬ್ಬರಿಗೊಬ್ಬರಿಗೆ ಅಗಲದೆ ಮಿತ್ರರಾಗಿರುವ ನಾವಿಬ್ಬರೂ ಹಗೆಯ ಬಾಣಗಳನ್ನೇ ಕತ್ತು ಕತ್ತರಿಸುವಂತೆ ಹೋರಾಡಿದರು'—ಎಂಬುದರಲ್ಲಿ ಔಚಿತ್ಯವಿದೆ. ಅದ್ದರಿಂದ ಕಣೆಪೆದ್ದ ಎಂಬುದು ಕಣೆವಿರ್ದ ಎಂದಾಗುವುದು ಸರಿ."[೧]

೧೩-೨೩— ರಣರಂಗದಲ್ಲಿ ಕಾದಿ ಮಡಿದ ಕರ್ಣನನ್ನು, ಅಂಬಿಗನೊಡನೆ ದುರ್ಯೋಧನನಿಗುಂಟಾದ ಋಣಸಂಬಂಧವನ್ನು ಬಿಡಿಸಲು ಯಾರಿಗೆ ಸಾಧ್ಯ? ಎಂದು ಪ್ರಲಾಪಿಸುತ್ತಾನೆ ಅಶ್ವತ್ಥಾಮ. ಈ ಪದ್ಯದಲ್ಲಿ 'ಬಿಸುಡಲ್ಕೆ' ಪಾಠ ವಿಚಾರಾರ್ಹವಾದದ್ದು. ಸಂಬಂಧವನ್ನು ಬಿಸುಡುವುದು ಎಂಬ ಮಾತಿಗಿಂತ ಸಂಬಂಧವನ್ನು ಬಿಡಿಸುವುದು ಎಂಬುದೇ ಹೆಚ್ಚು ಬಳಕೆಯಲ್ಲಿದ್ದುದು ಮತ್ತು ಯೋಗ್ಯವಾದದ್ದು. 'ಬಿಸುಡಲ್ಕೆ' ಪಾಠವನ್ನು ಸಂಪಾದಕರು 'ಬಿಡಿಸಲ್ಕೆ' ಎಂದು ಪರಿಷ್ಕರಿಸಿ ಅದನ್ನು ಸ್ವೀಕರಿಸದೆ ಅಡಿಟಿಪ್ಪಣಿಯಲ್ಲಿ ಕೊಟ್ಟಿದ್ದಾರೆ. ಪರಿಷ್ಕೃತ 'ಬಿಡಿಸಲ್ಕೆ' ಪಾಠ ಪದಪ್ರಯೋಗದ ದೃಷ್ಟಿಯಿಂದ ಉಚಿತವಾದದ್ದು.

೧೩-೩೮ : ಪಾಂಡವ ಕೌರವ ಬಲಗಳು ಎದುರಾಗಿ ನಿಂತು ಯುದ್ಧ ಮಾಡುತ್ತಿರುವಾಗಿನ ವರ್ಣನೆ ಇಲ್ಲಿದೆ. ಕಾದಲು ಬರುವ ವೇಗದಲ್ಲಿ ಹಲವು ರಾಜಚಿಹ್ನೆಗಳು ಬೆಳ್ಗೊಡೆಗಳನ್ನು ತಾಗಲು 'ವಿನ[ಕ್ಷ]ತ್ರಕಚ್ಛತ್ರಪಿಂಡ' ಕಂಗೊಳಿಸಿತ್ತು. 'ವಿನಕ್ಷತ್ರಕಚ್ಛತ್ರಪಿಂಡ' ಪಾಠ ದೋಷಪೂರ್ಣವೆಂದು ಅನಿಸುತ್ತದೆ. ಇದಕ್ಕೆ 'ಕ' ಪ್ರತಿಯಲ್ಲಿ 'ಕನಚ್ಛತ್ರ', ಬ, ಗ, ಘ ಪ್ರತಿಗಳಲ್ಲಿ 'ವಿನಚ್ಛತ್ರ', ಘ೩ ಪ್ರತಿಯಲ್ಲಿ 'ಚಳಚ್ಚಂದ್ರ' ಎಂಬ ಪಾಠಾಂತರಗಳಿವೆ. ವಿನಕ್ಷತ್ರಕ-ಹೆಚ್ಚಾದ ನಕ್ಷತ್ರಗಳುಳ್ಳ, ಛತ್ರಪಿಂಡ-ಛತ್ರಿಗಳ ಸಮೂಹ. ರಾಜಚಿಹ್ನೆಗಳು ಬೆಳ್ಗೊಡೆಗಳನ್ನು ತಾಗಿದಾಗ ಅಲ್ಲಿ ಹೆಚ್ಚಾದ ನಕ್ಷತ್ರಗಳನ್ನುಳ್ಳಂತಹ ಬೆಳ್ಗೊಡೆ ಆಕರ್ಷಕವಾಗಿ ಕಾಣಿಸುತ್ತಿತ್ತು ಎಂದರೆ ವಿವರಣೆ ಸಮಂಜಸವೆನಿಸುವುದಿಲ್ಲ. ನಕ್ಷತ್ರಗಳಿಂದ ಬೆಳ್ಗೊಡೆಯನ್ನು ಮಾಡಿರುವುದಿಲ್ಲ. ಅದರ ಅದಕ್ಕೆ ನವಿಲುಗರಿಗಳನ್ನು ಅಲುಗಾಡುವಂತೆ ಹಚ್ಚುತ್ತಾರೆ. ಈ ಅರ್ಥ ಬರುವಂತೆ ಘ೩ ಪ್ರತಿಯಲ್ಲಿ 'ಚಳಚ್ಚಂದ್ರಕ' ಎಂಬ ಪಾಠವಿದೆ. ಚಳತ್-ಅಲುಗಾಡುವ, ಚಂದ್ರಕ-ನವಿಲುಗರಿ, ಛತ್ರಪಿಂಡ-ಛತ್ರಿಗಳ ಸಮೂಹ. "ಬೆಳ್ಗೊಡೆ ಹಾಗೂ ರಾಜಚಿಹ್ನೆಗಳು ಒಂದಕ್ಕೊಂದು ತಾಗಿದಾಗ ಬೆಳ್ಗೊಡೆಯ ಅಂಚಿನಲ್ಲಿದ್ದ ನವಿಲುಗರಿಗಳು ಅಲುಗಾಡಿ ಆ ಕೊಡೆಗಳ ಸಮೂಹ ಮನೋಹರವಾಗಿ ಕಾಣಿಸುತ್ತಿತ್ತು" ಇದು ಇಲ್ಲಿರಬೇಕಾದ ವರ್ಣನೆ. 'ವಿನಕ್ಷತ್ರಕಚ್ಛತ್ರಪಿಂಡ' ಪಾಠ ಅಸಮಂಜಸ

೧. ಪಂಪಭಾರತದ ಕೆಲವು ಪಾಠಾಂತರಗಳು—ಹಂಪನಾ.

ಪ್ರತಿಯಲ್ಲಿ 'ನೀವರ್ಮನಸನೆನೆ' ಎಂಬ ಪಾಠಾಂತರವಿದೆ. ದೀಪಿಕೆಕಾರರೂ ಈ ಪಾಠವನ್ನೇ ಸ್ವೀಕರಿಸಿದ್ದಾರೆ. 'ಮಾನಸಿಕೆಯಿಂ ದೊರೆಗಿಡೆ ನೀಂ ಮಾನಸನೆನೆ' ಎಂದರೆ ಮನುಷ್ಯತ್ವವನ್ನು ಕಳೆದುಕೊಂಡ ನೀನು ಮನುಷ್ಯನಾಗಿದ್ದೀ ಎಂಬರ್ಥ ಸರಿಯೆನಿಸುವುದಿಲ್ಲ. ಮನುಷ್ಯತ್ವವನ್ನು ಕಳೆದುಕೊಂಡು ನೀನೀಗ ನೀರಿನಲ್ಲಿರುವ ಪ್ರಾಣಿಯಂತೆ ಆಗಿರುವೆ ಎಂಬ ಅರ್ಥವೇ ಇಲ್ಲಿ ಬರಬೇಕಾದದ್ದು. ಆದ್ದರಿಂದ 'ಕ' ಪ್ರತಿಯ 'ನೀವರ್ಮನಿಸನೆನೆ' ಪಾಠ ಯೋಗ್ಯವಾದದ್ದು.

೧೩–೯೭ : ದುರ್ಯೋಧನನ ಮರಣದ ನಂತರ ಬಂದ ಪದ್ಯವಿದು. ಅವನಲ್ಲಿರುವ ಎಲ್ಲ ವಿಶೇಷ ಗುಣಗಳನ್ನು ಇಲ್ಲಿ ಎತ್ತಿತೋರಿಸಲಾಗಿದೆ. ಒಂದು ಬಾರಿ ನುಡಿದುದನ್ನು ತನ್ನ ಕೊನೆಗಾಲದವರೆಗೂ ನುಡಿದನು. ಹಠ ಹಿಡಿದು ಕೈಕೊಂಡ ಪ್ರತಿಜ್ಞೆಯನ್ನು ಶಕ್ಯವಿರುವಷ್ಟು ಪೂರ್ಣಮಾಡಿದನು...... ಇತ್ಯಾದಿಯಾಗಿ ಅವನ ಗುಣಗಳ ವರ್ಣನೆ ಇಲ್ಲಿ ಬರುತ್ತದೆ. ಪ್ರಸ್ತುತ ಪದ್ಯದಲ್ಲಿ 'ಬಿಡಿದುದನ್' ಪಾಠ ಗಮನಾರ್ಹ ಇಲ್ಲಿ ಇರಬೇಕಾದದ್ದು 'ಚಲಂ+ಪಿಡಿದು+ಅದನ್' ಸಂಧಿಯಾಗಿ 'ಚಲಂಬಿಡಿದದನ್' 'ಬಿಡಿದುದನ್' ಎಂಬಲ್ಲಿ ವ್ಯಾಕರಣ ದೋಷ ಕಂಡುಬರುವುದರಿಂದ ದೀಪಿಕೆಯಲ್ಲಿ ಇದನ್ನು 'ಬಿಡಿ[ದ]ದನ್' ಎಂದು ಪರಿಷ್ಕರಿಸಲಾಗಿದೆ. ಈ ಪರಿಷ್ಕೃತ ಪಾಠವೇ ಸ್ವೀಕಾರಾರ್ಹವಾದದ್ದು.

[ ಮುಗಿದುದು ]

"ಪಂಪಭಾರತದ ಪಾಠಾಂತರಗಳು" ಈ ಲೇಖನಮಾಲೆ ಪ್ರಕಟವಾಗಲು ಕಾರಣರಾದ ಡಾ. ಕಲಬುರ್ಗಿಯವರಿಗೂ, ಸಹಾಯಮಾಡಿದ ಶ್ರೀ ಹಂಪ ನಾಗರಾಜಯ್ಯನವರಿಗೂ, ಮಾರ್ಗದರ್ಶನ ಮಾಡಿದ ಡಾ. ಬೆಟಗೇರಿ ಕೃಷ್ಣಶರ್ಮರಿಗೂ ನಾನು ಕೃತಜ್ಞಳು.

# ಮೈಸೂರು ಪ್ರದೇಶದ ಪ್ರಕಟಿತ ಶಾಸನಗಳ ಸಮೀಕ್ಷೆ ಮತ್ತು ಅಪ್ರಕಟಿತ ಶಾಸನಗಳ ಸೂಚಿ

ಎಸ್. ಶೆಟ್ಟರ್
ಎಸ್. ರಾಜಶೇಖರ

| ಅ.ನಂ. | ಗ್ರಾಮ | ತಾಲೂಕು | ಜಿಲ್ಲೆ | ಕ್ರಿ.ಶ. | ಆಳುವ ಅರಸ | ಅರಸುಮನೆತನ | ಶಾಸನದ ವಿವರ | ವರದಿ ಮತ್ತು ಉಲ್ಲೇಖ |
|---|---|---|---|---|---|---|---|---|
| ೧. | ಹೊಂಗನೂರು | ಚಾಮರಾಜನಗರ | ಮೈಸೂರು | — | ಶ್ರೀಪುರುಷ | ಗಂಗ | ತ್ರುಟಿತ. ಅರಸನ ಹೆಸರು ಮತ್ತು ಬಿರುದುಗಳನ್ನು ಉಲ್ಲೇಖಿಸುತ್ತದೆ. | ಆ.ಸ.ಮೈ.ಆ.ರಿ. ೧೯೧೭, ಪು.೭೯ |
| ೨. | ಛತ್ರಹಳ್ಳಿ | ಹೊಸಕೋಟೆ | ಬೆಂಗಳೂರು | ಸು. ೮೦೦ | ಶಿವಮಾರ | ,, | ವೀರಗಲ್ಲು. ಕಾಡುಪೆಟ್ಟಿಯು ಪೆಂಜಜು (ಹೆಂಜೆಜು)ವನ್ನು ಕಾವಳ್ಳಿಯು ಹೊಕ್ಕಾಗ ಕಲಿತ್ತೊರನ್‌ನ ಮರಣ ಮತ್ತು ಅವನಿಗೆ ಕೊಟ್ಟ ದತ್ತಿಯ ಉಲ್ಲೇಖ. | ಅದೇ. |
| ೩. | ಹೆಬ್ಬ | ಶ್ರೀನಿವಾಸಪುರ | ಕೋಲಾರ | ೧೦ನೆಯ ಶತಮಾನ | ಮಾರಸಿಂಹ | ,, | ಮಂತ್ರಕಲ್ಲು. ಶ್ರೀಮಾರಸಿಂಗನು ಹಸುಗಳಿಗೆ ಒಳ್ಳೆಯದನ್ನುಂಟು ಮಾಡಿದನೆಂದು ಉಲ್ಲೇಖಿಸುತ್ತದೆ. | ಅದೇ. |

| ಅ.ಸಂ. | ಗ್ರಾಮ | ತಾಲೂಕು | ಜಿಲ್ಲೆ | ಕ್ರಿ.ಶ. | ಆಳುವ ಅರಸ | ಅರಸುಮನೆತನ | ಶಾಸನದ ವಿವರ | ವರದಿ ಮತ್ತು ಉಲ್ಲೇಖ |
|---|---|---|---|---|---|---|---|---|
| ೯. | ಉಮ್ಮತ್ತೂರ್ | ಚಾಮರಾಜ ನಗರ | ಮೈಸೂರು | ಸು. ೧೦೦೦ | — | ಗಂಗ | ಪಿಮುಳಚಂದ್ರನ ಶಿಷ್ಯನೂ ಸೊಟ್ಟಯೂರ ಅರಸ ಮಾರಯ್ಯನ ಮಗನೂ ಆದ ಸಿಂದಯ್ಯನ ನಿಶಿಧಿ. | ಆ.ಸ.ಮೈ.ಆ.ರಿ. ೧೯೧೭, ಪು. ೩೯ |
| ೧೦. | ಹಕಿಹಳ್ಳಿ | ಆನೇಕಲ್ | ಬೆಂಗಳೂರು | ,, | — | ,, | ವೀರಗಲ್ಲು. ವೀರನೊಬ್ಬನ ಸಾವನ್ನೂ ಕಂಡಗಿಯು ಕಾರಿಗೆಯನ್ನು ಆಳುತ್ತಿದ್ದಾಗ ಬುಕ್ಕಯ್ಯರ್‌ನಿಗೆ ಗೊರವಗೆಜ್ಜೆಯಲ್ಲಿ ಕೊಟ್ಟ ಭೂದತ್ತಿಯನ್ನು ಉಲ್ಲೇಖಿಸುತ್ತದೆ. | ಆ.ಸ.ಮೈ.ಆ.ರಿ. ೧೯೧೯, ಪು. ೩೦ |
| ೧೧. | ಕುದೇರು | ಚಾಮರಾಜ ನಗರ | ಮೈಸೂರು | ೧೧೧೫ | — | ,, | ವೀರಗಲ್ಲು. ಸಿಮ್ಮಣ್ಣನು ಕಾದು ಮಡಿದು, ತನ್ನ ಸಹೋದರನಿಗೆ ಕನಸಿನಲ್ಲಿ ಕಾಣಿಸಿಕೊಂಡನೆಂದು ತಿಳಿಸುತ್ತದೆ. | ಆ.ಸ.ಮೈ.ಆ.ರಿ. ೧೯೧೭, ಪು. ೩೯ |

| ಅ.ನಂ. | ಗ್ರಾಮ | ತಾಲೂಕು | ಜಿಲ್ಲೆ | ಕ್ರಿ.ಶ. | ಆಳುವ ಅರಸ | ಅರಸುಮನೆತನ | ಶಾಸನದ ವಿವರ | ವರದಿ ಮತ್ತು ಉಲ್ಲೇಖ |
|---|---|---|---|---|---|---|---|---|
| ೧೨. | ರಾಜಾಪುರ | ಆನೇಕಲ್ | ಬೆಂಗಳೂರು | — | — | ಗಂಗ | ಅಪೂರ್ಣ ತಾಮ್ರಶಾಸನ. ಗಂಗರ ವಂಶಾವಳಿ ಅಪೂರ್ಣವಾಗಿದೆ. ಮತ್ತು ಪತ್ರಿಯ ವಿವರವಿದೆ. ಬಹುಶಃ ಇದು ನಕಲು ಇರಬಹುದು. | ಆ.ಸ.ಮೈ.ಆ.ರಿ. ೧೯೧೯, ಪು. ೩೦ |
| ೧೩. | ಜೋಡಿದಳಸಿಗೆರೆ | ಹೊಸಕೋಟೆ | ,, | ಸು. ೮೭೦ | ಮಯಿಂದ ನೊಳಂಬ | ನೊಳಂಬ | ವೀರಗಲ್ಲು. ಮಯಿಂದನ ಆಡಳಿತದಲ್ಲಿ ರೊಸಗಲಯನ್ ಪೊಸಮುಂಡಿಯು ನೆಲ್ಲಿಗೆಱೆಯ ತುರುಗಾಳಗದಲ್ಲಿ ಸ್ವರ್ಗವನ್ನೇರಿದ. ಪ್ರಯೋಳಮನ್ ಶಾಸನ ಕೊರೆದ. | ಅದೇ, ಪು. ೩೧ |
| ೧೪. | ಸುಬ್ಬರಾಯನಪೇಟೆ | ಚಿಂತಾಮಣಿ | ಕೋಲಾರ | ಸು. ೮೮೦ | ಮೈಂದಯ್ಯರಸ | ,, | ವೀರಗಲ್ಲು. ಬದಿಪ್ಪಳನ ಗೋಗ್ರಹಣದಲ್ಲಿ ತಳರಪ ಮಂಡಿಯು ತನ್ನ ಸಹೋದರನೊಡನೆ ಕಾದಿ ಮಡಿದ. | ಆ.ಸ.ಮೈ.ಆ.ರಿ. ೧೯೧೭, ಪು.೪೯-೫೦ |

| ಅ.ನಂ. | ಗ್ರಾಮ | ತಾಲೂಕು | ಜಿಲ್ಲೆ | ಕ್ರಿ.ಶ. | ಆಳುವ ಅರಸ | ಅರಸುಮನೆತನ | ಶಾಸನದ ವಿವರ | ವರದಿ ಮತ್ತು ಉಲ್ಲೇಖ |
|---|---|---|---|---|---|---|---|---|
| ೧೫. | ಅಬ್ಬಿನ ಹೊಳೆ | ಹಿರಿಯೂರು | ಚಿತ್ರದುರ್ಗ | ೯೨೩ | ಅಯ್ಯಪ | ನೊಳಂಬ | ವೀರಗಲ್ಲು. ವಿಜಯರಾಸಿಯ ಆಡಳಿತದಲ್ಲಿ ಗಾವುಂಡನು ಜಾಗಿಲವನ್ನು ಹೊಕ್ಕು ಹೋರಾಡಿ ಮಡಿದ ಮತ್ತು ದತ್ತಿಯ ಉಲ್ಲೇಖ. | ಆ.ಸ.ಮೈ.ಆ.ರಿ. ೧೯೧೮, ಪು. ೪೩ |
| ೧೬. | ಸುಬ್ಬ ರಾಯನಪೇಟೆ | ಚಿಂತಾಮಣಿ | ಕೋಲಾರ | ೯೫೦ | ಇರಿವ ನೊಳಂಬ | ,, | ಮಹಾರಾಜನು ಬೆಟ್ಟುಗೊಟ್ಟದ ಕದನದಲ್ಲಿ ಗೊಣಕಯ್ಯನ ಮರಣ ಮತ್ತು ದತ್ತಿಯ ಉಲ್ಲೇಖ. | ಆ.ಸ.ಮೈ.ಆ.ರಿ. ೧೯೧೭, ಪು. ೪೦ |
| ೧೭. | ಬನಹಳ್ಳಿ | ಹೊಸ ಕೋಟೆ | ಬೆಂಗ ಳೂರು | ೯೬೨ | ,, | ,, | ನೆಲೆಯಗಾವುಣ್ಡ ಮತ್ತು ಇನ್ನಿಬ್ಬರಿಂದ ಕೆರೆಯ ತೂಬಿನ ನಿರ್ಮಾಣ. | ಆ.ಸ.ಮೈ.ಆ.ರಿ. ೧೯೧೯, ಪು.೩೧ |
| ೧೮. | ಬಾಜಿಹೊಸ ಹಳ್ಳಿ | ,, | ,, | ಸು.೭೦೦ | ಬಿನಯಾ ದಿತ್ಯ | ಬಾಣ | ಬಿನಯಾದಿತ್ಯನ ಆಡಳಿತದಲ್ಲಿ ಕಾಮಯನಿಗೆ ಗದ್ದೆಯ ದಾನ. | ಅದೇ. |

| ಅ.ನಂ. | ಗ್ರಾಮ | ತಾಲೂಕು | ಜಿಲ್ಲೆ | ಕ್ರಿ.ಶ. | ಆಳುವ ಅರಸ | ಅರಸುಮನೆತನ | ಶಾಸನದ ವಿವರ | ವರದಿ ಮತ್ತು ಉಲ್ಲೇಖ |
|---|---|---|---|---|---|---|---|---|
| ೧೯. | ಬಿಸನಹಳ್ಳಿ | ಹೊಸ ಕೋಟೆ | ಬೆಂಗ ಳೂರು | ಸು.೧೦೫೫ | ರಾಜೇಂದ್ರ ದೇವ | ಚೋಳ(?) | ತ್ರುಟಿತ. ಪ್ರಜೆಗಳು ಕೊಡಬೇಕಾದ ಸುಂಕದ ವಿಷಯವಾಗಿ ಪರಕೇಶರಿ ಮೂವೇಂದವೇಳಾನ್ ಮತ್ತು ವಳವರಾಹಾಯ–ಮೂವೇಂದವೇಳಾನ್‌ರ ಎದುರಿನಲ್ಲಿ ಮಾಡಿದ ಒಪ್ಪಂದ. | ಆ.ಸ.ಮೈ.ಆ.ರಿ. ೧೯೧೯, ಪು.೩೧ |
| ೨೦. | ಜೋಡಿ ಕೆಂಪನಪುರ | ಚಾಮರಾಜ ನಗರ | ಮೈಸೂರು | ೯೯೧ | ರಾಜ ರಾಜ I | ಚೋಳ | ಕೊಯಿತೂರಿನ ಪ್ರಜೆಯೊಬ್ಬನಿಂದ ಸೋಮರಾಸಿ ಭಟ್ಟಾರಕನಿಗೆ ಭೂದತ್ತಿ. | ಆ.ಸ.ಮೈ.ಆ.ರಿ. ೧೯೧೭, ಪು. ೪೨ |
| ೨೧. | ವಾಗಟ | ಹೊಸ ಕೋಟೆ | ಬೆಂಗಳೂರು | ೧೦೨೮ | ರಾಜೇಂದ್ರ ಚೋಳ | ,, | ಸೇವಕನೊಬ್ಬನು ಮಕರತೋರಣ ವನ್ನು ನಿಲ್ಲಿಸಿದ. | ಆ.ಸ.ಮೈ.ಆ.ರಿ. ೧೯೧೯, ಪು. ೩೧ |
| ೨೨. | ಹಾರಗದ್ದೆ | ಆನೇಕಲ್ | ,, | ೧೧೦೧ | — | ,, | ಮುರಸಾದಿರಾಜ ಚತುರ್ವೇದಿ ಮಂಗಲಂ (ಪಾಳ್ಯಂಗಳನ್ನು) ನ್ನು ದತ್ತಿಕೊಟ್ಟ ಉಲ್ಲೇಖ. | ಅದೇ, ಪು.೩೧–೩೨ |

| ಅ.ನಂ. | ಗ್ರಾಮ | ತಾಲೂಕು | ಜಿಲ್ಲೆ | ಕ್ರಿ.ಶ. | ಆಳುವ ಅರಸ | ಅರಸುಮನೆತನ | ಶಾಸನದ ವಿವರ | ವರದಿ ಮತ್ತು ಉಲ್ಲೇಖ |
|---|---|---|---|---|---|---|---|---|
| ೨೩. | ಜೋಡಿ ಕೆಂಪನಪುರ | ಚಾಮರಾಜ ನಗರ | ಮೈಸೂರು | — | — | ಚೋಳ | ಕೆಲ್ಲೂರಿನ ಸೈನಿಕರು ಮಾಡಿಕೊಂಡ ಒಪ್ಪಂದ ಮತ್ತು ಕವಚ್ಚೈಈಶ್ವರಂ ಉಡೈಯಾರನಿಗೆ ಕೊಡತಕ್ಕ ಕಾಣಿಕೆಯ ಉಲ್ಲೇಖ. | ಆ.ಸ.ಮೈ.ಆ.ರಿ. ೧೯೧೭, ಪು. ೪೪ |
| ೨೪. | ಹಾರಗದ್ದೆ | ಆನೇಕಲ್ | ಬೆಂಗಳೂರು | — | — | ,, | ಮುರಸಾದಿರಾಯರ್‌ನಿಂದ ಕೇಶವಪ್ಪೆರುಮಾಳದೇವನಿಗೆ ದತ್ತಿ. | ಆ.ಸ.ಮೈ.ಆ.ರಿ. ೧೯೧೯, ಪು. ೨೨ |
| ೨೫. | ದೇಬೂರು | ನಂಜನ ಗೂಡು | ಮೈಸೂರು | ೧೨೨೧ | ನರ ಸಿಂಹ II | ಹೊಯ್ಸಳ | ತಿರುವಿರಾಮೀಶುವರಂ ಉಡೈಯಾರ್‌ಗೆ ದೇವದಾನವಾಗಿತ್ತ ಭೂದತ್ತಿ. | ಆ.ಸ.ಮೈ.ಆ.ರಿ. ೧೯೧೮, ಪು. ೪೭ |
| ೨೬. | ದೊಡ್ಡಕವಲಂದೆ | ,, | ,, | ೧೨೨೪ | ,, | ,, | ಸವಕಲು. ಅರಸನ ಯಶಸ್ಸಿಗೆ ಕೊಟ್ಟ ದತ್ತಿ. | ಆ.ಸ.ಮೈ.ಆ.ರಿ. ೧೯೧೭, ಪು. ೪೬ |

| ಅ.ಸಂ. | ಗ್ರಾಮ | ತಾಲೂಕು | ಜಿಲ್ಲೆ | ಕ್ರಿ.ಶ. | ಆಳುವ ಅರಸ | ಅರಸುಮನೆತನ | ಶಾಸನದ ವಿವರ | ವರದಿ ಮತ್ತು ಉಲ್ಲೇಖ |
|---|---|---|---|---|---|---|---|---|
| ೨೭. | ಹೆಗ್ಗವಾಡಿ | ಚಾಮರಾಜ ನಗರ | ಮೈಸೂರು | ೧೨೨೯ | ನರ ಸಿಂಹ II | ಹೊಯ್ಸಳ | ಮಾರಗಾಮುಂಡನಿಂದ ತೋಲೆಯ ದಾನ. | ಆ.ಸ.ಮೈ.ಆ.ರಿ. ೧೯೧೭, ಪು. ೪೬ |
| ೨೮. | ,, | ,, | ,, | ,, | ,, | ,, | ಮಾರಗಾಮುಂಡನಿಂದ ಕಂಭದ ದಾನ. | ಅದೇ. |
| ೨೯. | ಹೆಡತಲೆ | ನಂಜನಗೂಡು | ,, | ೧೨೩೦ | ,, | ,, | ಸವಕಲು. ಗಾವುಂಡನೊಬ್ಬನಿಂದ ನಾರಾಯಣಪ್ಪೆರುಮಾಳದೇವರಿಗೆ ತೋಟವೊಂದರ ದಾನ. | ಆ.ಸ.ಮೈ.ಆ.ರಿ. ೧೯೧೮, ಪು. ೪೭ |
| ೩೦. | ಹೆಗ್ಗವಾಡಿ | ಚಾಮರಾಜ ನಗರ | ,, | ೧೨೪೨ | ಸೋಮೇಶ್ವರ | ,, | ಸಂಭುಗಾವುಂಡನು ಸಂಭುನಾಥ ದೇವಾಲಯವನ್ನು ೩೧೫(?) ಗದ್ಯಾಣದಿಂದ ಕಟ್ಟಿಸಿದ. | ಆ.ಸ.ಮೈ.ಆ.ರಿ. ೧೯೧೭, ಪು. ೪೬ |
| ೩೧. | ,, | ,, | ,, | — | ,, | ,, | ಪಟ್ಟವ್ಯಾಪಾರಿ ಪರುಗನ್ ಶೆಕ್ಕೆರಾಯನ್ ಕುಮಾರನ್ ಗಾಣವನ್ನು ದಾನಮಾಡಿದ. | ಅದೇ. |
| ೩೨. | ,, | ,, | ,, | ೧೨೬೯ | ನರ ಸಿಂಹ III | ,, | ಹೆಜ್ಜೆಕ್ಯಾಪಾಡಿನ ಸಮಸ್ತ ಗಾವುಂಡರಿಂದ ಸಂಭುನಾಥ ದೇವರಿಗೆ ವೃತ್ತಿ. | ಅದೇ, ಪು. ೪೭ |

| ಅ.ನಂ. | ಗ್ರಾಮ | ತಾಲೂಕು | ಜಿಲ್ಲೆ | ಕ್ರಿ.ಶ. | ಆಳುವ ಅರಸ | ಅರಸು ಮನೆತನ | ಶಾಸನದ ವಿವರ | ವರದಿ ಮತ್ತು ಉಲ್ಲೇಖ |
|---|---|---|---|---|---|---|---|---|
| ೨೩. | ಜಿನ್ನಾಗರ | ಹೊಸ ಕೋಟೆ | ಬೆಂಗ ಳೂರು | — | ವಿಶ್ವನಾಥ | — | ತ್ರುಟಿತ. ಸಿನ್ನಾಗರಿಯ ಸೋಮ ನಾಥ ದೇವರಿಗೆ ಕೊಟ್ಟ ದತ್ತಿ. | ಆ.ಸ.ಮೈ.ಆ.ರಿ. ೧೯೧೯, ಪು. ೩೨ |
| ೨೪. | ಹೆಡತಲೆ | ನಂಜನ ಗೂಡು | ಮೈಸೂರು | ೧೨೯೭ | ಬಲ್ಲಾಳ III | ಹೊಯ್ಸಳ | ವೀಮಗಾಮುಣ್ಡನ್ ಅರುಳಾಳ- ಪ್ಪೆರುಮಾಳನಿಗೆ ಕೊಟ್ಟ ದತ್ತಿ. | ಆ.ಸ.ಮೈ.ಆ.ರಿ. ೧೯೧೮, ಪು. ೪೭ |
| ೨೫. | ಮದ್ದೂರು | ಮಂಡ್ಯ | ಮಂಡ್ಯ | ೧೩೨೫ | ,, | ,, | ಸವಕಲು. ಮಹಾಮಂಡಳೇಶ್ವರ ತಮ್ಮಯ, ನಾಗರಸ ಮತ್ತು ಇತರರು ಮಾಡಿಕೊಂಡ ಒಪ್ಪಂದ. | ಆ.ಸ.ಮೈ.ಆ.ರಿ. ೧೯೧೯, ಪು. ೩೨-೩೩ |
| ೨೬. | ಪಾಗಟ | ಹೊಸ ಕೋಟೆ | ಬೆಂಗ ಳೂರು | ೧೩೨೭ | ,, | ,, | ವಿಟ್ಟಪ್ಪ ಮತ್ತು ಪೆರಿಯನಾಡಿನ ಇತರ ಪ್ರಜೆಗಳು ಓವಟ್ಟಂ (ವರದ ರಾಜ ಚತುರ್ವೇದಿಮಂಗಲಂ)ನ ಆಪಿಗ... ...ಗೆ ಕೊಟ್ಟರು. | ಅದೇ, ಪು. ೩೨ |

| ಅ.ಸಂ. | ಗ್ರಾಮ | ತಾಲೂಕು | ಜಿಲ್ಲೆ | ಕ್ರಿ.ಶ. | ಆಳುವ ಅರಸ | ಅರಸುಮನೆತನ | ಶಾಸನದ ವಿವರ | ಆಕರ ಮತ್ತು ಉಲ್ಲೇಖ |
|---|---|---|---|---|---|---|---|---|
| ೩೭. | ದೇವಿಸೆಟ್ಟಿ ಹಳ್ಳಿ | ಹೊಸ ಕೋಟೆ | ಬೆಂಗ ಳೂರು | ೧೨೩೨ | ಬಲ್ಲಾಳ III | ಹೊಯ್ಸಳ | ಪುಳ್ಳಿಯೂರ್‌ನಾಡಿನ ನಂಬಿರಪಿ ಸೆಟ್ಟಿ, ಪುಲಿಮಾರಗಾಮುಣ್ಡ, ವೀರ ಗಂಗನ್ ಮತ್ತಿತರ ಅಧಿಕಾರಿಗಳಿಂದ ಪೆಮ್ಮಿಸೆಟ್ಟಿಗೆ ಕೊಟ್ಟ ದತ್ತಿ. ಪೆಮ್ಮಿಸೆಟ್ಟಿಯು ಈ ದತ್ತಿಯನ್ನು ಪಾಳುಬಿದ್ದ ಹಳ್ಳಿಯ ಜೀರ್ಣೋದ್ಧಾರಕ್ಕಾಗಿ ಕೊಟ್ಟನು. | ಆ.ಸ.ಮೈ.ಸ.ರಿ. ೧೯೧೯, ಪು. ೩೨ |
| ೩೮. | ವಾಗಟ | ,, | ,, | ೧೨೪೦ | ,, | ,, | ಪೆರಿಯನಾಡಿನ ಜನರು ಮತ್ತು ಮಂತ್ರಿ–ಶಿಕ್ಕ–ವಿಟ್ಟಪ್ಪ–ಉಡೆಯರು ಓವಟ್ಟಂನಲ್ಲಿ ಕೆರೆ ಕಟ್ಟಿಸಿ ಶ್ರೀಯಣನ್‌ಗೆ ಕೊಟ್ಟ ಭೂದತ್ತಿ. | ಅದೇ. |
| ೩೯. | ವಣಕನ ಹಳ್ಳಿ | ಆನೇಕಲ್ | ,, | ,, | ,, | ,, | ತಟುಟ್ಟಿ...ರಾಯುರ್‌ಸಿಂದ ನಲ್ಲ–ವಿನಾಯಕಪ್ಪಿಳ್ಳೆಯಾರ್‌ಗೆ ದತ್ತಿ. | ಅದೇ, ಪು. ೩೩ |
| ೪೦. | ಹೊಂದಲ ಗೆರೆ | ಮಂಡ್ಯ | ಮಂಡ್ಯ | — | ಬಲ್ಲಾಳ III | ,, | ಸವಕಲು. ಮಹಾಜನರಿಂದ ಬ್ರಾಹ್ಮಣರಿಗೆ ದತ್ತಿ | ಅದೇ, ಪು ೩೩ |

| ಅ. ಸಂ. | ಗ್ರಾಮ | ತಾಲೂಕು | ಜಿಲ್ಲೆ | ಕ್ರಿ. ಶ. | ಆಳುವ ಅರಸ | ಅರಸುಮನೆತನ | ಶಾಸನದ ವಿವರ | ವರದಿ ಮತ್ತು ಉಲ್ಲೇಖ |
|---|---|---|---|---|---|---|---|---|
| ೪೧. | ಮಾಗಡಿ | ಹೊಸ ಕೋಟೆ | ಬೆಂಗ ಳೂರು | — | ಬಲ್ಲಾಳ III | ಹೊಯ್ಸಳ | ಶ್ರೀವತ್ಸಗೋತ್ರದ ರಾಜ್ಯ ರಸರ್ ನಿಂದ ಓವಟ್ಟಂದ ವರದರಾಜನ ತಿರುಮಣ್ಣ ಮಹೋತ್ಸವಕ್ಕೆ ದತ್ತಿ. | ಆ. ಸ. ಮೈ. ಆ. ರಿ. ೧೯೧೯, ಪ್ರ. ೩೨ |
| ೪೨. | ವಡಿಗೇನ ಹಳ್ಳಿ | ,, | ,, | ೧೨೮೬ | — | ,, | ಪುಮಟ್ಟೇರಿ ಮಾದವನಾಯುಕ್ಕರ್‌ನಿಂದ ವಂಗಿಪುರಂದ ತಿಯಾಗಪ್ಪೆರುಮಾಳನಿಗೆ ೧೨೫ ಕುಳಿ ಗದ್ದೆಯ ದತ್ತಿ. | ಅದೇ. |
| ೪೩. | ,, | ,, | ,, | — | — | ,, | ವಡುಗಗಾವುಂಡನ್‌ಪಲ್ಲಿಯಲ್ಲಿ ಮಾದವನಾಯುಕ್ಕರ್‌ನಿಂದ ಕೆರೆಯ ನಿರ್ಮಾಣ ಮತ್ತು ಮಾದೇವನ್ ಎಂಬ ಸುಂಕದ ಅಧಿಕಾರಿಯ ಉಲ್ಲೇಖ. | ಅದೇ. |

[ ಮುಂದುವರಿಯುವುದು ]

## ಕ್ರಿಯಾರಚನೆ : ಒಂದು ಟಿಪ್ಪಣಿ

"ಪದಿನಾಱಿಲ್ಲವಲಂಕ್ರಿಯಾರಚನೆ ಮೂವತ್ತಾಱು, ನೇರ್ಪಟ್ಟುವೊಂದಿದ ಶೃಂಗಾರಮುದಲ್ಲವೊಂದೆ ರಸಮೊಂಬತ್ತೆಯೊಡಂಬಟ್ಟುವು" ಎಂಬುದು ರನ್ನನ 'ಗದಾಯುದ್ಧ'ದಲ್ಲಿಯೂ (೧–೭) 'ಅಜಿತಪುರಾಣ'ದಲ್ಲಿಯೂ (೧–೧೩) ಬರುವ ಉಕ್ತಿ.

ಈ ಬಗ್ಗೆ ಶ್ರೀ ಎಂ. ವಿ. ಸೀತಾರಾಮಯ್ಯನವರು ಹೀಗೆ ಹೇಳುತ್ತಾರೆ: "ರನ್ನನಿಗೆ ದಂಡಿ-ಭಾಮಹರ ಗ್ರಂಥಗಳ ಪರಿಚಯವಿದ್ದಿರಬಹುದಾದರೂ, ರನ್ನನು ಹೇಳುವ ಅಲಂಕಾರಗಳ ಹಾಗೂ ರಸಗಳ ಸಂಖ್ಯೆಗೆ ಅವುಗಳಲ್ಲಿ ಸಮರ್ಥನೆ ದೊರೆಯುವುದಿಲ್ಲ (ದಂಡಿ ಹೇಳಿರುವುದು ೩೫ ಅರ್ಥಾಲಂಕಾರಗಳನ್ನು ಮಾತ್ರ). ಕವಿರಾಜಮಾರ್ಗದಲ್ಲಿ ನವರಸಗಳ ಪ್ರಸ್ತಾವವೂ, ೩೬ ಅರ್ಥಾಲಂಕಾರಗಳ ವಿವರಣೆಯೂ ಸ್ಪಷ್ಟವಾಗಿ ಬಂದಿವೆ (ರನ್ನನು ಶಬ್ದಾಲಂಕಾರಗಳನ್ನು ಗಣನೆಗೆ ತೆಗೆದುಕೊಂಡಿಲ್ಲವೆಂದು ಭಾವಿಸಬೇಕು). ಆದ್ದರಿಂದ ರನ್ನನು 'ಕವಿರಾಜಮಾರ್ಗ'ದಲ್ಲಿ ಹೇಳಿರುವ ಅಲಂಕಾರಗಳ ಸಂಖ್ಯೆಯನ್ನು ನೆನೆದೇ ಈ ಮಾತು ಹೇಳಿದ್ದಾನೆಂದು ತೋರುತ್ತದೆ."[೧]

ರನ್ನನ 'ಕ್ರಿಯಾರಚನೆ' ಎಂಬ ಮಾತು ಅಲಂಕಾರಗಳಿಗೇ ಸಂಬಂಧಿಸಿದ್ದು ಎಂಬುದಕ್ಕೆ ಆಧಾರವೇನು? ಅದನ್ನು ಎಂ. ವಿ. ಸೀ. ಅವರು ಸೂಚಿಸಿಲ್ಲ. "ಪದಿನಾಱಿಲ್ಲವಲಂಕ್ರಿಯಾರಚನೆ ಮೂವತ್ತಾಱು ನೇರ್ಪಟ್ಟುವು" ಎಂದು ವಾಕ್ಸುಂದರಿಯನ್ನು ಕುರಿತು ರನ್ನನು 'ಗದಾಯುದ್ಧ'ದಲ್ಲಿ ಹೇಳಿರುವುದು ಭರತನ ೩೬ ಭೂಷಣಗಳನ್ನು ನೆನೆದೇ ಇರಬಹುದೆ?"[೨] ಎಂಬ ತೀ. ನಂ. ಶ್ರೀಕಂಠಯ್ಯನವರ ಊಹೆಯನ್ನು ಇಲ್ಲಿ ನೆನೆಯಬಹುದು.

ವಾಸ್ತವವಾಗಿ, ಎಂ. ವಿ. ಸೀ. ಅವರ ಊಹೆ ಸರಿಯೆನಿಸುತ್ತದೆ; ತೀ. ನಂ. ಶ್ರೀ. ಅವರ ಊಹೆಗೆ ಅಷ್ಟಾಗಿ ಆಧಾರವಿರುವಂತೆ ತೋರುವುದಿಲ್ಲ.

'ಕ್ರಿಯಾರಚನೆ' ಎನ್ನುವಲ್ಲಿ 'ಕ್ರಿಯೆ' ಎಂದರೆ 'ಅಲಂಕ್ರಿಯೆ' ಅರ್ಥಾತ್ ಅಲಂಕಾರ. ಇದು 'ಕ್ರಿಯಾಕಲ್ಪ' ಎಂಬ ಮಾತನ್ನು ನೆನಪಿಗೆ ತರುತ್ತದೆ. ಎರಡಕ್ಕೂ ಸಂಬಂಧವಿರುವುದು ಸ್ಪಷ್ಟ.

ವಾತ್ಸ್ಯಾಯನನ 'ಕಾಮಸೂತ್ರ'ದಲ್ಲಿರುವ ೬೪ ಕಲೆಗಳ ಪಟ್ಟಿಯಲ್ಲಿ 'ಕ್ರಿಯಾಕಲ್ಪ' ಸೇರಿದೆ. ಅದಕ್ಕೆ "ಕ್ರಿಯಾಕಲ್ಪ ಇತಿ ಕಾವ್ಯಕರಣವಿಧಿಃ, ಕಾವ್ಯಾಲಂಕಾರ ಇತ್ಯರ್ಥಃ" ಎಂದು 'ಜಯಮಂಗಲಾ' ವ್ಯಾಖ್ಯಾನದಲ್ಲಿ ವಿವರಣೆಯಿದೆ (ತೀ. ನಂ. ಶ್ರೀ. ಅವರೇ ಅದನ್ನು ಉದ್ಧರಿಸಿದ್ದಾರೆ). ಕ್ರಿ. ಶ.

೧. ಶ್ರೀವಿಜಯಕೃತ ಕವಿರಾಜಮಾರ್ಗಂ, ಟಿಪ್ಪಣಿಗಳು, ಪು. ೩೬೦.

ಸು. ೧ನೆಯ ಶತಮಾನದ ‘ಲಲಿತವಿಸ್ತರ’ದಲ್ಲೂ ‘ಕ್ರಿಯಾಕಲ್ಪ’ದ ಉಲ್ಲೇಖ ವಿದೆ. ರಾಮಾಯಣದ ಉತ್ತರಕಾಂಡವೂ ‘ಕ್ರಿಯಾಕಲ್ಪ’ವಿವರವನ್ನು ಹೇಳುತ್ತದೆ. ಈ ಆಧಾರಗಳಿಂದ ಡಾ. ವಿ. ರಾಘವನ್ ಅವರು, ಕ್ರಿಸ್ತಶಕಕ್ಕೆ ಹಿಂದೆ, ಅಲಂಕಾರ ಶಾಸ್ತ್ರಕ್ಕೆ ‘ಕ್ರಿಯಾಕಲ್ಪ’ ಎಂಬ ಹೆಸರಿತ್ತೆಂದು ಊಹಿಸಿದರು. ಇದು ಪಿ. ವಿ. ಕಾಣೆಯವರಿಗೆ ಸಮ್ಮತವಲ್ಲ. ಆದರೆ ಡಾ. ರಾಘವನ್ ಅವರ ಊಹೆಯನ್ನು ಬೆಂಬಲಿಸುವಂಥ ಇನ್ನೊಂದು ಆಧಾರ ಈಚೆಗೆ ಸಿಕ್ಕಿದೆ. ಸಿಂಹಳದ ಬೌದ್ಧ ಲೇಖಕ ರತ್ನಶ್ರೀಜ್ಞಾನನೆಂಬವನು ಕ್ರಿ. ಶ. ೯೫೧ರಲ್ಲಿ ದಂಡಿಯ ‘ಕಾವ್ಯಾದರ್ಶ’ಕ್ಕೆ ರಚಿಸಿದ ‘ರತ್ನಶ್ರೀ’ ಎಂಬ ವ್ಯಾಖ್ಯಾನ ಈಗ ಉಪಲಬ್ಧವಾಗಿದ್ದು, ಅದರಲ್ಲಿ ‘ಕಾವ್ಯಾದರ್ಶ’ದ ೧-೯ರಲ್ಲಿ ಬರುವ ‘ಕ್ರಿಯಾವಿಧಿ’ ಶಬ್ದಕ್ಕೆ ‘ಕ್ರಿಯಾಕಲ್ಪ’ ಎಂದರೆ ‘ಕಾವ್ಯಾಲಂಕಾರ’ ಎಂದು ಅರ್ಥವಿಸಲಾಗಿದೆ.[೩]

ಆದ್ದರಿಂದ ರನ್ನನ “ಕ್ರಿಯಾರಚನೆ ಮೂವತ್ತಾಱು” ಎಂಬ ಉಕ್ತಿ ‘ಕವಿರಾಜಮಾರ್ಗ’ದ ೩೫ ಅರ್ಥಾಲಂಕಾರಗಳನ್ನು ಕುರಿತದ್ದೇ ಹೊರತು ‘ನಾಟ್ಯಶಾಸ್ತ್ರ’ದ ೩೬ ಭೂಷಣಗಳನ್ನು ಕುರಿತುದಲ್ಲ ಎಂದು ಹೇಳಬಹುದು. ಭರತನ ಕಾವ್ಯಲಕ್ಷಣ ಅಥವಾ ಭೂಷಣಗಳಿಗೆ ಈಚಿನ ಲಾಕ್ಷಣಿಕರು ಪ್ರಾಶಸ್ತ್ಯ ಕೊಡದೆ, ಅವುಗಳಲ್ಲಿ ಹಲವನ್ನು ‘ಅಲಂಕಾರ’ಗಳಲ್ಲೇ ಅಂತರ್ಭಾವಗೊಳಿಸಿದ ರೆಂಬುದನ್ನೂ ಗಮನಿಸಬೇಕು. ಭರತನನ್ನು ರನ್ನ ದೃಷ್ಟಿಯಲ್ಲಿಟ್ಟುಕೊಂಡಿರ ಲಿಲ್ಲವೆಂಬುದು ಇದರಿಂದ ವ್ಯಕ್ತವಾಗುತ್ತದೆ. (ನವರಸಗಳ ಪ್ರಸ್ತಾಪವೂ ಈ ನಿಲುವಿಗೆ ಪೋಷಕವಾಗಿದೆ ರನ್ನ, ಮಾರ್ಗಕಾರ ಇಬ್ಬರೂ ಜೈನಧರ್ಮೀಯ ರೆಂಬುದನ್ನು ಲಕ್ಷಿಸಬೇಕು.) ಆದರೆ ‘ಪದಿನಾಱುಲ್ಲ’ ಎಂಬುದು ಏನನ್ನು ಸೂಚಿ ಸುತ್ತದೆ ಎಂಬ ಪ್ರಶ್ನೆಗೆ ಉತ್ತರ ಮೊರಕಬೇಕಾಗಿದೆ.[೪]

ಸಿ. ಪಿ. ಕೆ.



೨. ಭಾರತೀಯ ಕಾವ್ಯಮೀಮಾಂಸೆ, ಪು. ೧೮, ಅಡಿಟಿಪ್ಪಣಿ.

೩. ಡಾ. ಕೆ. ಕೃಷ್ಣಮೂರ್ತಿ, ಕನ್ನಡ ಕಾವ್ಯಾದರ್ಶ, ಪೀಠಿಕೆ, ಪು. ೨೧.

೪. ‘ಕವಿರಾಜಮಾರ್ಗ’ದಲ್ಲಿ ಉಕ್ತವಾಗುವ ಯತಿಭಂಗ, ಅರ್ಥಶೂನ್ಯ, ವಿರುದ್ಧಾರ್ಥ, ಉಕ್ತಪುನರುಕ್ತ, ಸ್ವ್ಯತಯಥಾಸಂಖ್ಯ, ವ್ಯವಹಿತ, ಅಚ್ಛೇದ, ವಿಸಂಧಿ, ನೇಯಾರ್ಥ, ಆಗಮವಿರುದ್ಧ, ಸಮಯವಿರುದ್ಧ, ನ್ಯಾಯವಿರುದ್ಧ, ಕಲಾವಿರುದ್ಧ, ಕಾಲವಿರುದ್ಧ, ಲೋಕವಿರುದ್ಧ, ದೇಶವಿರುದ್ಧ — ಈ ಹದಿನಾರು ದೋಷಗಳನ್ನು ರನ್ನ ಉದ್ದೇಶಿಸಿರಬಹುದೆ? (ಶ್ರುತಿದುಷ್ಟ, ಅರ್ಥದುಷ್ಟ, ಶ್ರುತಿಕಷ್ಟ, ಕಲ್ಪನೋಕ್ತಿಕಷ್ಟ – ಇವು ಈ ೧೬ರಕ್ಕಿಂತ ಬೇರೆಯಾದ ದೋಷಗಳು). ೧೬ ದೋಷ ಗಳಿಲ್ಲ, ೩೬ ಅಲಂಕಾರಗಳು ವಾಕ್ಸುಂದರಿಗೆ ತೊಡವುಗಳು (ಕಾವ್ಯನಿರ್ದೋಷವೂ ಸಾಲಂಕಾರವೂ ಆಗಿರಬೇಕು) ಎಂಬುದು ಅವನ ಅಭಿಪ್ರಾಯವಿರಬಹುದೆ?

## ಲಕ್ಕುಂಡಿಯಲ್ಲಿ ಕುಂಥುಜಿನ ವಿಗ್ರಹ :

ಕ್ರಿ. ಶ. ಹತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ಚಾಲುಕ್ಯ ಆಹವಮಲ್ಲ ಹಾಗೂ ಇಱಿವಬೆಡಂಗ ಸತ್ಯಾಶ್ರಯರ ಅಧೀನಕ್ಕೊಳಪಟ್ಟ ಮಾಸವಾಡಿ-೧೪೦ ಎಂದು ಪ್ರಸಿದ್ಧವಾದ ನಾಡನ್ನು ಲಕ್ಕುಂಡಿಯಿಂದ ಆಳಿದ ಅಣ್ಣಿಗದೇವನ ತಾಯಿಯಾದ ಅತ್ತಿಮಬ್ಬೆ, ಕರ್ನಾಟಕದ ಇತಿಹಾಸದಲ್ಲಿ ಅಜರಾಮರ ವ್ಯಕ್ತಿಯಾಗಿದ್ದಾಳೆ. ಹುಟ್ಟಿದ ಮನೆತನ ಹಾಗೂ ಕೊಟ್ಟ ಮನೆತನಗಳ ಸಂಸ್ಕೃತಿಯ ತಿರುಳಿನಂತಿದ್ದ 'ರಾಜಪೂಜಿತೆ'ಯಾಗಿದ್ದಳು. ಅಸಿಧಾರಾವ್ರತಗಳನ್ನು ಪಾಲಿಸಿ, ಅನೇಕ ದಾನ-ಧರ್ಮಗಳನ್ನು ಮಾಡಿ 'ದಾನಚಿಂತಾಮಣಿ' ಎನ್ನಿಸಿದಳು. ಬಸದಿಗಳ ನಿರ್ಮಾಣ ಮತ್ತು ಜೀರ್ಣೋದ್ಧಾರ, ಪ್ರತಿಷ್ಠಾಪನೆ, ದೇವರ ಪೂಜಾ ವ್ಯವಸ್ಥೆ ಮೊದಲಾದ ಕಾರ್ಯಗಳನ್ನು ಮಾಡಿ 'ಜಿನಧರ್ಮಪತಾಕೆ' ಎನ್ನಿಸಿದಳು. ಲೊಕ್ಕಿಗುಂಡಿ, ಅಂದರೆ ಧಾರವಾಡ ಜಿಲ್ಲೆಯ ಈಗಿನ ಲಕ್ಕುಂಡಿ. ಅಲ್ಲಿ ಈಕೆ ಕಟ್ಟಿಸಿದ ಬಸದಿ ಇಂದಿಗೂ ಇದೆ. ಇಲ್ಲಿಯ ಶಿಲಾಶಾಸನವೊಂದು ಅವಳ ಪವಿತ್ರಜೀವನವನ್ನು ಹಾಗೂ ಪವಾಡಸದೃಶ ಮಹತ್ಕಾರ್ಯಗಳನ್ನು ಹೃದಯಂಗಮವಾಗಿ ಬಣ್ಣಿಸುತ್ತದೆ. ಗುಣದಂಕಕಾರ್ತಿ ಅತ್ತಿಮಬ್ಬೆ ನಡೆಸಿದ ಪುಣ್ಯಮಯ ಜೀವನ, ಅವಳು ಅಳಿದ ಮೇಲೂ ಲೊಕ್ಕಿಗುಂಡಿಯ ಸಾಮಾನ್ಯ ಜನತೆಗೆ ಆದರ್ಶವೆನಿಸಿದ್ದಿತೆಂದು ತೋರುತ್ತದೆ. ಇದಕ್ಕೆ ಸಾಕ್ಷಿಯೆಂದರೆ ಲಕ್ಕುಂಡಿಯಲ್ಲಿ ದೊರೆತ ಒಂದು ಭಗ್ನತೀರ್ಥಂಕರ ವಿಗ್ರಹ. ಅದರ ಪಾದಪೀಠದ ಮೇಲೆ ಈ ಬರೆವಣಿಗೆ ಇದೆ :

> ಪರಮಾರ್ಹಂ ತನಗಿಷ್ಟದೆಯ್ವಮಮಳಪ್ರಖ್ಯಾತನುರ್ವೀನುತ
> ಗ್ಗುರು ತ್ರೈವಿದ್ಯನರೇಂದ್ರಸೇನಮುನಿಪಂ ವೈಶ್ಯಾನ್ವಯಾಂಭೋಜ ಭಾ
> ಸ್ಕರನುದ್ಯದ್ಗುಣಿ ಜೇಮಿಸೆಟ್ಟಿಯ ಮಗಳ್ ರಾಜವ್ವೆ ಬೋಧೋದಯಾ
> ಕರನ[ಂ]ಕು[ಂ]ಥ[ಥು?] ಜಿನೇಂದ್ರನಂ ಪವಿನಿಂ ನಿರ್ಮಾಪಣಂ
> ಮಾಡಿದಳ್

"ಅರ್ಹಂತನೇ ತನಗೆ ಇಷ್ಟದೇವನಾದ, ಪ್ರಖ್ಯಾತನಾದ ತ್ರೈವಿದ್ಯ ನರೇಂದ್ರಸೇನ ಮುನಿಪನೇ ಗುರುವಾದ, ವೈಶ್ಯಕುಲದವನೂ ಗುಣವಂತನೂ ಆದ ಜೇಮಿಸೆಟ್ಟಿ ಎಂಬವನ ಮಗಳು ರಾಜವ್ವೆ, ಕುಂಥುನಾಥ ತೀರ್ಥಂಕರನನ್ನು ಪ್ರತಿಷ್ಠೆ ಮಾಡಿದಳು" ಎಂಬುದೇ ಈ ಪದ್ಯದ ಸಾರಾಂಶ.

ದುರ್ದೈವದಿಂದ ಕುಂಥುನಾಥ ತೀರ್ಥಂಕರ ಮೂರ್ತಿ ಒಡೆದುಹೋಗಿದೆ. ಇಲ್ಲಿ ಉಳಿದಿರುವ ಯಕ್ಷ-ಯಕ್ಷಿಯರ ಸುಂದರ ಮೂರ್ತಿಗಳನ್ನು ಗಮನಿಸಿದರೆ ಕುಂಥುನಾಥನ ಮೂರ್ತಿಯೂ ಬಹು ಮನೋಹರವಾಗಿತ್ತೇನೋ ಎಂಬ ಭಾವನೆ

ಸುಳಿಯದಿರಲಾರದು. ಲಿಪಿಯ ಶೈಲಿಯಲ್ಲಿ ಪರೀಕ್ಷಿಸಿದರೆ, ಬಹುಶಃ ಇದು ಹನ್ನೊಂದನೆಯ ಶತಮಾನದ ಕೊನೆಕೊನೆಗೆ ಪ್ರತಿಷ್ಠೆಯಾದ ಮೂರ್ತಿಯೆಂದೆನಿಸುತ್ತದೆ. ಅತ್ತಿಮಬ್ಬೆ ಆಳಿದ ಸುಮಾರು ನೂರು ವರುಷಗಳ ನಂತರ ಅಂದರೆ ಕರ್ನಾಟಕದಲ್ಲಿ ಜೈನಧರ್ಮವು ಇಳಿಮುಖವಾಗುತ್ತ ಸಾಗಿದ ಕಾಲದಲ್ಲೂ, ಲಕ್ಕುಂಡಿಯಲ್ಲಿ ಅತ್ತಿಮಬ್ಬೆಯ ಧಾರ್ಮಿಕ ಪರಂಪರೆ ಮುಂದುವರೆದಿತ್ತು ಎಂಬುದು ಈ ಭಗ್ನಶಿಲ್ಪದಿಂದ ಬೆಳಕಿಗೆ ಬರುತ್ತದೆ. ಈ ಪದ್ಯ ಹಾಗೂ ಪದ್ಯದಲ್ಲಿ ಉಲ್ಲಿಖಿತರಾದ ದೇಮಿಸೆಟ್ಟಿ ಹಾಗೂ ಆತನ ಮಗಳು ರಾಜವ್ವೆ ಇವರ ಬಗ್ಗೆ ಲಕ್ಕುಂಡಿಯಲ್ಲಿ ದೊರೆಯುವ ಬೇರೆ ಯಾವ ಶಾಸನವೂ ಮಾಹಿತಿಯನ್ನು ಒದಗಿಸುವುದಿಲ್ಲ. ಈ ದೃಷ್ಟಿಯಿಂದಲೂ ಇದು ಮಹತ್ವದ್ದಾಗಿದೆ.

ಲಕ್ಕುಂಡಿಯಲ್ಲಿ ಅನ್ವೇಷಣೆ ನಡೆದರೆ, ಕರ್ನಾಟಕದ ಇತಿಹಾಸ, ಧರ್ಮ, ಶಿಲ್ಪ, ಸಂಸ್ಕೃತಿಗಳಿಗೆ ವಿಷಯವನ್ನೊದಗಿಸುವ ಹಲವಾರು ಮಹತ್ವದ ಅವಶೇಷಗಳು ಸಿಗುವ ಸಂಭವವಿದೆಯೆಂಬುದನ್ನು ಸೂಚಿಸುವ ಕಣ್ಸನ್ನೆಯಾಗಿದೆ, ಈ ಭಗ್ನಶಿಲ್ಪ.

ಬಿ. ಎಸ್. ಕುಲಕರ್ಣಿ

# ಅಖಿಲಕರ್ನಾಟಕ ದ್ವಿತೀಯ ಜಾನಪದ ಸಮ್ಮೇಳನ

ನಿಂಗಣ್ಣ ಸಣ್ಣಕ್ಕಿ

ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನಪೀಠ ಜಾನಪದಕ್ಕೆ ಮಿಡಿಯತೊಡಗಿ, ಮೊಟ್ಟಮೊದಲನೆಯ ಜಾನಪದ ಸಮ್ಮೇಳನವನ್ನು ೧೯೭೩ ರ ಜನೆವರಿಯಲ್ಲಿ ಅತ್ಯಂತ ಯಶಸ್ವಿಯಾಗಿ ಆಚರಿಸುವುದರ ಮೂಲಕ ಜಾನಪದಕ್ಕೆ ವಿಶ್ವವಿದ್ಯಾಲಯ ಗದ್ದುಗೆಯನ್ನು ಕಲ್ಪಿಸಿ, ಈಗ ದ್ವಿತೀಯ ಸಮ್ಮೇಳನದ ಮೂಲಕ ಅದಕ್ಕೆ ಒಂದು ಪರಂಪರೆಯನ್ನು ನಿರ್ಮಿಸಿತು.

ಕನ್ನಡ ಅಧ್ಯಯನಪೀಠ, ಗಾಂಧೀಭವನದಲ್ಲಿ 'ಕಿತ್ತೂರ ಚೆನ್ನಮ್ಮ ಮಂಟಪ'ವನ್ನು ರಚಿಸಿ ೫, ೬ ಫೆಬ್ರುವರಿ, ೧೯೭೪ ರ ಎರಡು ದಿನಗಳ ಸಮ್ಮೇಳನವನ್ನು ಯಶಸ್ವಿಯಾಗಿ ನಡೆಸಿತು.

**ಮೊದಲ ದಿನ :**

ಕರ್ನಾಟಕ ವಿಶ್ವವಿದ್ಯಾಲಯದ ಆವರಣದಲ್ಲಿ ಅರುಣೋದಯದ ಸಮಯ. ಮಂಗಳ ಕಾರ್ಯಕ್ರಮಗಳು ಪ್ರಾರಂಭವಾಗಿ, ಸೂರ್ಯೋದಯಕ್ಕೆ ಕೊಂಬು-ಕಹಳೆಗಳ ಧ್ವನಿಗಳು ಮೊಳಗಿ, ವಾತಾವರಣದಲ್ಲಿ ಚೈತನ್ಯವನ್ನುಂಟುಮಾಡಿದವು. ಎಲ್ಲ ಕಡೆಗೂ ಆನಂದದ ಓಡಾಟಗಳು ಲೀಲೆಯಾಡುತ್ತಿದ್ದವು. ಮುಂಜಾವಿನ ಮಂಗಳಕರ ಜಯಘೋಷಗಳಿಂದ ಚೆನ್ನಮ್ಮ ಮಂಟಪವು ತುಂಬಿತುಳುಕಿತು. ಜನಪದ ಕವಯಿತ್ರಿ ಜಯದೇವಿತಾಯಿ ಲಿಗಾಡೆ, ಕರ್ನಾಟಕರಾಜ್ಯದ ಮುಖ್ಯಮಂತ್ರಿಗಳಾದ ಶ್ರೀ ದೇವರಾಜ ಅರಸ್ ಮತ್ತು ವಿಶ್ವವಿದ್ಯಾಲಯದ ಕುಲಪತಿ ಡಾ. ಆರ್. ಸಿ. ಹಿರೇಮಠ ಅವರ ನೇತೃತ್ವದಲ್ಲಿ ಜನಪದ ಕೀರ್ತನಗಳು ತೆರೆಯಾಗಿ ಬರಲು, ಪೀಠಗಳು ಅಲಂಕೃತವಾದವು.

**ಕಾರ್ಯ ಪ್ರಾರಂಭ :**

'ಎಳ್ಳು ಜೀರಿಗೆ ಬೆಳೆಯುವ ಭೂಮಿತಾಯಿ'ಯನ್ನು ನೆನೆದು, 'ಗಜಮುಖ ಗಣಪತಿ'ಯನ್ನು ಪ್ರಾರ್ಥಿಸಿ ಜನಪದಶಕ್ತಿಯನ್ನು ಚಿಮ್ಮಿಸಲಾಯಿತು.

ಅನಂತರ ಕುಲಪತಿ ಡಾ. ಆರ್. ಸಿ. ಹಿರೇಮಠ ಅವರು ನಶಿಸಿಹೋಗುವ ಇಂದಿನ ಕಾಲದಲ್ಲಿ 'ಜನಪದಸಾಹಿತ್ಯವನ್ನು ಸಂಗ್ರಹಿಸುವುದು, ಅಭ್ಯಸಿ

ಸುಪ್ರದು ಅಗತ್ಯ' 'ಆಧುನಿಕ ಕಾಲದಲ್ಲಿ ಶ್ರೀಸಾಮಾನ್ಯನಿಗೆ ಅಗ್ರಪಟ್ಟ ಸಲ್ಲಬೇಕು. ಹಾಗೆಯೇ ಶ್ರೀಸಾಮಾನ್ಯರಿಂದ ಹುಟ್ಟಿದ ಜನಪದಸಾಹಿತ್ಯಕ್ಕೂ ಅಗ್ರಪಟ್ಟ ಸಲ್ಲಬೇಕೆಂಬ' ಅಗತ್ಯವನ್ನು ಒತ್ತಿಹೇಳಿ, ಜನಪದ ಶಕ್ತಿ ಚೇತನವನ್ನು ವಿವರಿಸಿ ಸರ್ವರನ್ನೂ ಸ್ವಾಗತಿಸಿದರು. ಡಾ. ಎಂ. ಎಂ. ಕಲಬುರ್ಗಿಯವರು ಮಾಲಾರ್ಪಣೆ ಮಾಡಿದರು. ಡಾ. ಕೆ. ಜಿ. ಶಾಸ್ತ್ರಿಯವರು ಸಂದೇಶಗಳನ್ನು ಓದಿದರು.

**ಅನುಭವಜನ್ಯ :**

ಶ್ರೀ ದೇವರಾಜ ಅರಸ್ ಅವರು ಜ್ಯೋತಿಯನ್ನು ಹೊತ್ತಿಸಿ 'ಬದುಕು ಬೆಳಗುವ ಸಾಹಿತ್ಯಸೃಷ್ಟಿಯಾಗಬೇಕೆಂದು' ಸಮ್ಮೇಳನವನ್ನು ಉದ್ಘಾಟಿಸುತ್ತ 'ಜನಪದಸಾಹಿತ್ಯ ಯಾವುದೇ ಪ್ರಯತ್ನದ, ಕಷ್ಟದ ಫಲವಲ್ಲ. ಈ ಸಾಹಿತ್ಯ ಅನುಭವದ ಆಳದಿಂದ ಮೂಡಿಬಂದ ಸಹಜ ಅಭಿವ್ಯಕ್ತಿ, ಶ್ರೀಸಾಮಾನ್ಯರಿಗೂ ಅರ್ಥವಾಗುವ ಸಾಹಿತ್ಯಶಕ್ತಿ; ಸಮಾಜದೃಷ್ಟಿಯನ್ನು ವಿಶಾಲಗೊಳಿಸುವ ಶಕ್ತಿ; ಸಾಹಿತ್ಯವು ಸೇರಿದಂತೆ ಸಮಾಜದ ಎಲ್ಲ ಸಂಪತ್ತು ಎಲ್ಲರಿಗೂ ಲಭ್ಯವಾಗಬೇಕು. ಈ ಸಾಹಿತ್ಯದ ಪುರೋಭಿವೃದ್ಧಿ ಆಗಬೇಕು. ಇಂದಿನ ವೈಜ್ಞಾನಿಕಯುಗದಲ್ಲಿ ಜನಪದಸಾಹಿತ್ಯ ಕೊಚ್ಚಿಹೋಗಬಹುದೇನೋ ಎಂದೆನಿಸುತ್ತದೆ. ಆದರೆ ಅದು ನಮ್ಮ ಬದುಕಿನಲ್ಲಿ ಹಾಸುಹೊಕ್ಕಾಗಿದೆ. ಆದುದರಿಂದ ಅದನ್ನು ಬದುಕಿಸುವುದೂ ಸಾಧ್ಯವಿದೆ. ಜನರಿಗೆ ಸಮೀಪದ ಸಾಹಿತ್ಯಸೃಷ್ಟಿಯಾಗಬೇಕಾದರೆ ಅದಕ್ಕೆ ಜನಪದ ಸಾಹಿತ್ಯವೇ ನಿಘಂಟು. ಆಡುಮಾತುಗಳನ್ನು ಬಳಸದೇ ಬಿಟ್ಟು, ನಮ್ಮ ಶಬ್ದ ಸಂಪತ್ತು ಬಡವಾಗಿದೆ. ಈಗಲಾದರೂ ನಾವು ಆ ಸಂಪತ್ತನ್ನು ಬಳಸಬೇಕು. ಇತ್ಯಾದಿಯಾಗಿ ಆಡುನುಡಿಗಳನ್ನೂ, ಗಾದೆಮಾತುಗಳನ್ನೂ ಬಳಸಿ ಪ್ರೇರಕವಾದ ಅನುಭವಗಳನ್ನು ಮಹಾಜನತೆಗೆ ವಿವರಿಸಿದರು.

**ಜನಪದ ಜಯದೇವಿತಾಯಿ :**

'ಜನಪದಸಾಹಿತ್ಯಕ್ಕೆ ಬದುಕಿನಲ್ಲಿ ದೊಡ್ಡ ಸ್ಥಾನವಿದೆ. ಪಾಶ್ಚಿಮಾತ್ಯ ರಾಷ್ಟ್ರಗಳು ವಿಜ್ಞಾನದ ಜೊತೆಗೆ ತಮ್ಮತಮ್ಮ ಜನಪದ ಸಾಹಿತ್ಯವನ್ನು ಅಭ್ಯಸಿಸುತ್ತ ಬಂದಿವೆ. ನಮ್ಮ ರಾಷ್ಟ್ರದಲ್ಲಿ ಮತ್ತು ರಾಜ್ಯದಲ್ಲಿ ಜನಪದಸಾಹಿತ್ಯವನ್ನು ಬದುಕಿಸುವುದು ನಮ್ಮ ಕರ್ತವ್ಯವಾಗಿದೆ. ಅಲ್ಲದೆ ನಮ್ಮ ದೇಶ ಜಾನಪದದ ಶ್ರೀಮಂತ ತವರು. ಈ ಸಾಹಿತ್ಯಕಾರ್ಯಕ್ಕೆ ಮುಖ್ಯಮಂತ್ರಿಗಳು (ಸರಕಾರ) ಸಂಪೂರ್ಣ ಸಹಾಯ-ಸಹಕಾರಗಳನ್ನು ನೀಡಬೇಕು; ನೀಡುತ್ತಿರುವುದು ಸಂತೋಷ ಹಾಗೂ ಸ್ವಾಗತಾರ್ಹ' ಎಂದು ಕರೆ ನೀಡಿದರು.

ಜನಪದ ಸಾಹಿತ್ಯವು ತಮ್ಮ ಮೇಲೆ ಬಾಲ್ಯದಿಂದಲೂ ಪ್ರಭಾವ ಬೀರಿದುದನ್ನು ಜಯದೇವಿತಾಯಿಯವರು ಅನೇಕ ಉದಾಹರಣೆಗಳೊಂದಿಗೆ ವಿವರಿಸಿದರು. ಜನಜೀವನದ ಪಾಡು, ಹಾಡಾಗಿ ಮೂಡಿದೆ. 'ಶರಣರ ಸುಳಿಗಾಳಿ ಸೆಳೆ ನಮ್ಮನಿಮ್ಯಾಲ', 'ಯೋಗಿ ಬಂದಿದ್ದಾರೇನs', 'ನಿನಗೆ ಯಾಕ್ಯೇsನ ಅಂದಾರ! ನಿನ ಪಾರ್ಯಾಕ ಬಾಡ್ಯಾವs', 'ಮನ ಮುರದಮ್ಯಾಲ ಮಾತ್ಯಾಕ', 'ಹಂತಿ ಮಾತ್ಯೇನ ಸಂತಿಗೆ ಹೋದೇನ' ಇತ್ಯಾದಿ ತ್ರಿಪದಿಗಳ ಪಲ್ಲವಿಗಳನ್ನು ಜಾನಪದ ಲಯ, ಛಂದ, ಗತಿ, ಸಿರಿಯನ್ನು ಮೇಳವಿಸಿ ಮಾತೃವಾಣಿಯಿಂದ ಜಯಗೀತೆಗಳನ್ನು ಹಾಡುವಂತೆ ಜಯದೇವಿತಾಯಿಯವರು ಹಾಡಿ, ಜನಸ್ತೋಮವನ್ನು ಮಂತ್ರಮುಗ್ಧಗೊಳಿಸಿದರು. ಬೀಸುವ ಪದಗಳನ್ನು, ಕುಟ್ಟುವ ಪದಗಳನ್ನು, ಮದುವೆಯ ಹಾಡುಗಳನ್ನು, ಕೋಲಿನ ಪದಗಳನ್ನು, ಹಂತಿಯ ಹಾಡುಗಳನ್ನು, ಬಯಲಾಟದ ಪದಗಳನ್ನು ಸುಶ್ರಾವ್ಯವಾಗಿ ಹಾಡಿದರು.

ನಮ್ಮ ರಾಜ್ಯದಲ್ಲಿ ಹಳೆಮೈಸೂರು, ಹೈದ್ರಾಬಾದ ಕರ್ನಾಟಕ, ಉತ್ತರ ಕರ್ನಾಟಕ—ಇತ್ಯಾದಿ ಕೂಗುಗಳು ಇನ್ನೂ ಕೇಳಿಬರುತ್ತಿವೆ. ಇದು ಒಳ್ಳೆಯದಲ್ಲ. ನಮ್ಮೆಲ್ಲರಲ್ಲಿ ಭಾವೈಕ್ಯ ಮೂಡಬೇಕು. ಈ ಭಾವೈಕ್ಯ ಮೂಡಲು ಹಾಗೂ ಎಲ್ಲರೂ ನಮ್ಮವರಾಗಲು ಜನಪದಸಾಹಿತ್ಯ ತೀವ್ರ ಪ್ರಚಾರಕ್ಕೆ ಬರಬೇಕೆಂದು ಅಭಿಪ್ರಾಯಪಟ್ಟರು. ಮೊದಲನೆಯ ಜಾನಪದ ಸಮ್ಮೇಳನದ ಸಂಸ್ಮರಣ ಗ್ರಂಥವಾದ "**ಜಾನಪದ ಸಾಹಿತ್ಯದರ್ಶನ**"ವನ್ನು ಹೃದಯತುಂಬಿ ಬಿಡುಗಡೆ ಮಾಡಿದರು. ಹರ್ಷ ಎಲ್ಲೆಡೆಗೆ ಓಲಾಡುತ್ತಿರುವಂತೆ ಹರ್ಷದ ಮಾತುಗಳನ್ನು ಹೇಳಿ, ನಿರ್ದೇಶಕರಾದ ಡಾ. ಎಂ. ಎಸ್. ಸುಂಕಾಪುರ ಅವರು ಆಭಾರ ಮನ್ನಿಸಿದರು.

**ಮೊದಲನೆಯ ವಿಚಾರಸಂಕಿರಣ :**

ಮಧ್ಯಾಹ್ನ ಮೂರು ಗಂಟೆಗೆ ಜನಪದ ಕಥಾಗೋಷ್ಠಿ ಡಾ. ಶಂ. ಬಾ. ಜೋಶಿಯವರ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು. ಡಾ. ಎಂ. ಎಸ್. ಸುಂಕಾಪುರ ಅವರು ನಿರ್ದೇಶನ ಮಾಡಿದರು.

ಮೊಟ್ಟಮೊದಲು 'ಜನಪದ ಕಥೆಗಳ ಹುಟ್ಟು ಮತ್ತು ಬೆಳವಣಿಗೆ' ಕುರಿತು ಡಾ. ಎಂ. ಬಿ. ಕೊಟ್ರಶೆಟ್ಟಿಯವರು ವಿಚಾರಪೂರ್ಣ ಪ್ರಬಂಧವನ್ನು ಓದಿದರು. ಜನಪದ ಕಥೆಗಳ ಹುಟ್ಟು ಮನುಷ್ಯನ ಮಾತಿನೊಂದಿಗೆ ಪ್ರಾರಂಭವಾದುವೆಂದು ತಿಳಿಸಿ, ಜಗತ್ತಿನ ವಿದ್ವಾಂಸರು ಇಲ್ಲಿಯವರೆಗೆ ಮಾಡಿದ ಕಾರ್ಯಗಳನ್ನು, ವಿಸ್ತಾರ

ಗಳನ್ನು ವಿವರಿಸಿ ಕನ್ನಡ ಜಾನಪದಕಥೆಗಳ ಮೂಲ ಮತ್ತು ಬೆಳವಣಿಗೆಯನ್ನು ಸ್ಪಷ್ಟಪಡಿಸಿದರು.

'ಜನಪದಕಥೆಗಳ ಪ್ರಕಾರಗಳು' ಎಂಬ ಪ್ರಬಂಧವನ್ನು ಬೆಂಗಳೂರು ವಿಶ್ವವಿದ್ಯಾಲಯದ ಪ್ರಾಧ್ಯಾಪಕ ಕೆ. ಮರುಳಸಿದ್ದಪ್ಪ ಅವರು ಓದಿದರು. 'ಇಸೋಪನ ನೀತಿಕಥೆಗಳು ಜಗತ್ತಿನ ಅತೀ ಪ್ರಾಚೀನ ಕಥೆಗಳು, ಅನಂತರ ಜಗತ್ತಿನಲ್ಲಿಯೇ ನಮ್ಮ ಪಂಚತಂತ್ರ ಪ್ರಾಚೀನವಾದುದು' ಎಂಬುದನ್ನು ಆಧಾರಗಳಿಂದ ಸಿದ್ಧಪಡಿಸಿ, ವಿಶ್ವದ ವಿವಿಧ ಜಾನಪದಕಥೆಗಳನ್ನೂ ಅವುಗಳ ಹುಟ್ಟಿನ ಕಾಲಮಾನವನ್ನೂ ಸ್ಪಷ್ಟಪಡಿಸಿದರು.

'ಜನಪದಕಥೆಗಳ ಅಧ್ಯಯನದಲ್ಲಿ ವೈಜ್ಞಾನಿಕದೃಷ್ಟಿ' ಎಂಬ ಪ್ರಬಂಧವನ್ನು ಮೈಸೂರು ವಿಶ್ವವಿದ್ಯಾಲಯದ ಪ್ರಾಧ್ಯಾಪಕ ರಾಮೇಗೌಡ (ರಾಗೌ) ಅವರು ಮಂಡಿಸಿದರು. ಇಡೀ ಜನಪದಕಥೆಗಳನ್ನು ನಾಲ್ಕು ಗುಂಪುಗಳನ್ನಾಗಿ ವಿಂಗಡಿಸಿ, ಪಾಶ್ಚಾತ್ಯ ವಿದ್ವಾಂಸರ, ಗ್ರಿಮ್ಸ್ ಸಹೋದರರ ಕೆಲಸಗಳನ್ನು ಸ್ಪಷ್ಟಪಡಿಸಿದರು. ಕಥೆಗಳು ಒಬ್ಬರಿಂದ ಮತ್ತೊಬ್ಬರು ಹೇಳುವಾಗ ಅಂತರ ವಾಗುತ್ತವೆ ಎಂಬ ಬಗೆಯನ್ನು ನಿರೂಪಿಸಿದರು. ಕಥೆಗಳ ವಿಂಗಡನೆ ಮತ್ತು ಅಭ್ಯಾಸಗಳಲ್ಲಿ ನವೀನತೆ ತಲೆದೋರಿದುದಾಗಿ ತಿಳಿಸಿದರು.

ಕನ್ನಡ ಅಧ್ಯಯನಪೀಠದ ಪ್ರಾಧ್ಯಾಪಕ ವಿಲ್ಯಂ ಮಾಡ್ತ ಅವರು "ಜನಪದ ಕತೆ : ಒಂದು ರಚನಾತ್ಮಕ ವಿಶ್ಲೇಷಣೆ" ಎಂಬ ವಿಷಯವಾಗಿ 'ಅರಸನ ಸುಡುವ ಕಥೆ' ಯೊಂದನ್ನು ವಿಶ್ಲೇಷಿಸಿದರು. ಕಥೆಯಲ್ಲಿಯ ಪಾತ್ರ, ಶಬ್ದ, ಭಾವ, ಮಾತು ಪಟ್ಟಿಮಾಡಿ ಜನಪದಕಥೆಗಳ ಒಳಸ್ತರಗಳನ್ನು ಗುರುತಿಸಿದರು.

ಬಳಿಕ ಗೋಷ್ಠಿಯ ಅಧ್ಯಕ್ಷರಾದ ಡಾ. ಶಂ. ಬಾ. ಜೋಶಿಯವರು ಉಪನ್ಯಾಸ ನೀಡಿದರು :

"ಜಾನ-ಪದ ಸಂಸ್ಕೃತಿ, ಇದು ನಿಜ ಜೀವನಸ್ಥ ದೃಶ್ಯಘಟನೆಯ ಪಾತಳಿ ಮಾತ್ರ. ಆದರೆ ಮಾನವಸಂಸ್ಕೃತಿ ಇದು ತಾತ್ವಿಕ ಪಾತಳಿಯ ಮೇಲಣ ವಾಸ್ತವ ಸತ್ಯ. ವೇದದಲ್ಲಿ ದೊರೆವ ಜಾನಪದಸಾಹಿತ್ಯದ ಪ್ರಕಾರಗಳಿಂದ ಈ ಸಂಗತಿ ದೃಢಪಡುತ್ತದೆ."

ಈ ದೃಷ್ಟಿಯಿಂದ 'ಗೀತೆ' ಜಾನಪದಸಾಹಿತ್ಯದ ಶ್ರೇಷ್ಠ ಕೃತಿ ಎಂಬುದಾಗಿ ಅನೇಕ ಆಧಾರಗಳಿಂದ, ಭಾಷೆ, ಸಂಸ್ಕೃತಿ, ಧರ್ಮ ಮುಂತಾದ ಮುಖ

ಗಳಿಂದ ಜಾನಪದದ ಬಗೆಗೆ ಪಾಂಡಿತ್ಯಪೂರ್ಣ ಸಮಾಲೋಚನೆ ನಡೆಯಿಸಿದರು. ಕೊನೆಗೆ ಪ್ರೊ. ವೃಷಭೇಂದ್ರಸ್ವಾಮಿಗಳು ಸರ್ವರ ಆಭಾರ ಮನ್ನಿಸಿದರು.

**ಜನಪದ ರಂಗದರ್ಶನ :**

ಸಾಯಂಕಾಲ ಆರೂವರೆ ಗಂಟೆಗೆ ಗಂಗವ್ವ ಗೊರಗುದ್ದಿಯವರಿಂದ ಲಾವಣಿಗಳು ಡಪ್ಪ, ತಾಳ ಮೇಳದಿಂದ ಹಾಡಲ್ಪಟ್ಟವು.

ಗದಿಗೆಯ್ಯ ಚಿಕ್ಕಮಠ(ಅಗಡಿ)ಅವರಿಂದ ಕಾಲಜ್ಞಾನ ಪದಗಳು ಕಟತಾಳ ಹಾಗೂ ತಂಬೂರಿ ಮೇಳದಿಂದ ಸಾರಲ್ಪಟ್ಟವು.

ಶಂಭುಲಿಂಗಾಶ್ರಮ (ಚಿಕ್ಕೇನಕೊಪ್ಪ)ದ ಹೆಣ್ಣುಮಕ್ಕಳಿಂದ ಅನುಭಾವ ಪದಗಳು ಸೂಸಿದವು.

ಶಿವಾಪೂರದ ಶ್ರೀ ಬಿ. ಪಿ. ಕಬಾಡಗಿ ಹಾಗೂ ಮೇಳದವರಿಂದ ಸಂಗ್ಯಾ-ಬಾಳ್ಯಾ ಬಯಲಾಟ ಪ್ರದರ್ಶಿಸಲ್ಪಟ್ಟಿತು.

ಪ್ರಯೋಗದ ಮಾದರಿಯಾಗಿ ಈ ಕಲೆಗಳು ಸಹಸ್ರ ಜನತೆಯನ್ನು ಆನಂದಗೊಳಿಸಿದವು.

**ಎರಡನೆಯ ದಿನ :**

ಮೊದಲನೆಯ ದಿನದ ಚೈತನ್ಯ, ಇಮ್ಮಡಿಯಾಗಿ ಎರಡನೆಯ ದಿನದ ಸಮ್ಮೇಳನ ಪ್ರಾರಂಭವಾಯಿತು. ವಿಚಾರಸಂಕಿರಣವಾದ 'ಜನಪದ ನಾಟಕ ಗೋಷ್ಠಿ' ಮುಂಜಾನೆ ಒಂಬತ್ತು ಗಂಟೆಗೆ ಶ್ರೀ. ರಾವಬಹಾದ್ದೂರ ಅವರ ಅಧ್ಯಕ್ಷತೆಯಲ್ಲಿ ಕೂಡಿತು. ಡಾ. ಕೊಟ್ರಶೆಟ್ಟಿಯವರ ನಿರ್ದೇಶನದಲ್ಲಿ ಗೋಷ್ಠಿ ನಿರ್ದೇಶಿಸಲ್ಪಟ್ಟಿತು.

**ಎರಡನೆಯ ವಿಚಾರಸಂಕಿರಣ :**

ಮೊದಲನೆಯವರಾಗಿ ಡಾ. ಎಂ. ಎಸ್. ಸುಂಕಾಪುರ ಅವರು 'ಬಯಲಾಟದ ಪ್ರಕಾರಗಳು' ಎಂಬ ಪ್ರಬಂಧವನ್ನು ಹಾಸ್ಯ ಹಾಗೂ ಪಾಂಡಿತ್ಯಪೂರ್ಣವಾಗಿ ಓದಿದರು. ಬಯಲಾಟಗಳು ಗೊಂಬೆಯಾಟದಿಂದ ಪಾತ್ರದ ಮಹತ್ವ ಪಡೆದು ಕೊಂಡಿವೆಯೆಂದೂ ಏಕಪಾತ್ರಾಭಿನಯವೇ ಪಾತ್ರಗಳ ವಿಂಗಡನೆಗೆ ಕಾರಣವೆಂದೂ ಅಂತಹ ವೇಷಗಾರರನ್ನು ನಾವು ಇನ್ನೂ ಕಾಣುತ್ತೇವೆಂದೂ ಸ್ಪಷ್ಟಪಡಿಸಿದರು. ದೊಡ್ಡಾಟ, ಸಣ್ಣಾಟ, ಯಕ್ಷಗಾನ, ವೇಷಗಾರರಾಟ, ಕರಣ

ರಾಟ, ದಾಸರಾಟ, ಮುಂತಾದವುಗಳನ್ನು ವಿವರಿಸಿದರು. ಈ ನಾಟಕಕಾರರು ದ್ರಾವಿಡಛಂದಸ್ಸನ್ನು ಬಳಸಿದ್ದಾರೆಂಬುದನ್ನು ತಿಳಿಸಿದರು. ಶರಣರಾಟ ಮತ್ತು ದಾಸರಾಟಗಳು ಧರ್ಮಪ್ರಚಾರಕ್ಕೆ ಹುಟ್ಟಿದುದಾಗಿ ಅವುಗಳ ಮೂಲ ಉದ್ದೇಶಗಳನ್ನು ತಿಳಿಸಿದರು.

ಎರಡನೆಯವರಾಗಿ ಡಾ. ಬಿ. ಬಿ. ಹೆಂಡಿಯವರು 'ಬಯಲಾಟಗಳಲ್ಲಿ ಹಾಸ್ಯ ಪಾತ್ರಗಳು' ಎಂಬ ಪ್ರಬಂಧವನ್ನು ಮಂಡಿಸಿದರು. ಭಾಷಾಮಯಪದ್ಧತಿಯನ್ನೂ ಪಾತ್ರಪದ್ಧತಿಯನ್ನೂ 'ದೊರೆಯೇ ನೀನು ದೂರ ಸರಿಯೋ?' 'ತಾಯಿ ವೇಣಿಸಿಕಾಯಿ' ಮುಂತಾದ ಮಾತುಗಳನ್ನೂ ಗಾದೆಗಳನ್ನೂ ಕಲಬುರ್ಗಿ ಮತ್ತು ಹೈದರಾಬಾದ ಪ್ರದೇಶಗಳಲ್ಲಿಯ ನಾಟಕಗಳ ಮುಗ್ಧ ಹಾಸ್ಯವನ್ನೂ ಪಾರಿಜಾತದಲ್ಲಿ ಬರುವ ದೂತಿ ಪಾತ್ರವನ್ನೂ ವಿಶ್ಲೇಷಿಸಿದರು. ಸಹಜ ಮಾತಿನಲ್ಲಿ ಅಶ್ಲೀಲವೂ ಇದ್ದು; ತತ್ವದ ಶಕ್ತಿಯಾಗಿದೆ ಎಂಬ ಸಂಗತಿಯನ್ನು ಹೃದಯಂಗಮವಾಗಿ ವಿವರಿಸಿದರು.

ಡಾ. ಎಂ. ಎಸ್. ಲಠ್ಠೆ 'ಬಯಲಾಟದ ವೇಷ-ಭೂಷಣಗಳು' ಎಂಬ ಲೇಖನವನ್ನು ಓದಿದರು. ವೇಷ ತೊಡುವುದು ಅಂದರೆ ಸೋಗು ಹಾಕುವುದು ಎಂಬ ಮಾತನ್ನು ತಿಳಿಯಪಡಿಸಿದರು. ಅಟ್ಟ ಕಟ್ಟುವುದನ್ನೂ ಅಟ್ಟದ ಮೇಲಿನ ಆಟ್ಟವನ್ನೂ ರಂಗಸಜ್ಜಿಕೆಯನ್ನೂ ವಿವರಿಸಿದರು. ಮಂಟಪ, ಗಂಗಾಳ ಮಂಟಪ, ಪಂಜು, ಬಿಲಾಲ ಅಟ್ಟದ ವೈಭವ ಇತ್ಯಾದಿ ನಾಟಕದ ಸಜ್ಜಿಕೆಗಳನ್ನು, ಹಿಂದಿನಿಂದ ಇಂದಿನ ವರೆಗಿನ ಪಾತ್ರಪರಂಪರೆಯನ್ನು ಪಾತ್ರಗಳಿಗೆ ಸಂಬಂಧಿಸಿದ ವೇಷ-ಭೂಷಣಗಳನ್ನು ತಿಳಿಸಿದರು.

ಡಾ. ಕೆ. ಜಿ. ಶಾಸ್ತ್ರಿ ಅವರು 'ಯಕ್ಷಗಾನವು ಜಾನಪದ ನಾಟಕವೇ?' ಎಂಬ ಪ್ರಬಂಧದಲ್ಲಿ ತಾವೇ ಪ್ರಶ್ನೆಹಾಕಿಕೊಂಡು, ಇದು ದ್ರಾವಿಡಮೂಲದೆಂದೂ ಯಕ್ಷಗಾನ, ಜಾನಪದದಿಂದ ಬಂದುದೆಂದೂ ಹೇಳಿದರು. ವೇಷ-ಭೂಷಣಗಳ ಪ್ರಯೋಗಗಳಿಂದ, ಮನೆಗಳಲ್ಲಿ ಕುಳಿತು ಮಾಡುವ ಪ್ರಯೋಗಗಳಿಂದ, ನೃತ್ಯದಿಂದ, ಸಂಗೀತದಿಂದ, ಚಿತ್ರಗಳಿಂದ, ಮಾತುಗಳಿಂದ ವ್ಯಕ್ತವಾಗುವ ಇದು ಒಂದು ಜಾನಪದ ನಾಟಕ ರೂಪವೇ ಮತ್ತು ಜಾನಪದ ಮೂಲವೇ ಆಗಿದೆ ಎಂದು ಸ್ಪಷ್ಟಪಡಿಸಿದರು.

ಅಧ್ಯಕ್ಷರಾದ ಶ್ರೀ ರಾವಬಹಾದ್ದೂರ ಅವರು ಅನುಭವದ ಆಳಕ್ಕಿಳಿದು ಮಾತಾಡಿದರು. ಸಣ್ಣ-ದೊಡ್ಡ ಆಟಗಳ ಪ್ರಭಾವೀ ಪಾತ್ರಗಳನ್ನು ವಿವರಿಸಿ, ಬಾಲ್ಯದ ಸವಿನೆನಪನ್ನು ತಿಳಿಸಿದರು. ಸಣ್ಣಾಟಗಳು ಮಕ್ಕಳಿಗೂ ಸಹ ಪರಿಣಾಮ ಬೀರಿವೆ ಎಂಬುದನ್ನು ಉದಾಹರಿಸಿದರು. ಕನ್ನಡ ರಂಗಭೂಮಿಯ ಶ್ರೇಷ್ಠತೆ

ಯನ್ನು ವಿವರಿಸುತ್ತ ಅಣ್ಣಾಸಾಹೇಬ ಕಿರ್ಲೋಸ್ಕರ ಅವರು ಕೃಷ್ಣಪಾರಿಜಾತದ ಪದಗಳನ್ನೇ ತಕ್ಕೊಂಡು ಮರಾಠಿ ರಂಗಭೂಮಿಯನ್ನು ಜೀವಂತಗೊಳಿಸಿದರು ಎಂಬುದಾಗಿ ಹೇಳಿದರು. 'ಜನಪದ, ಜೀವನದ ಆಸ್ತಿ; ಅದು ಅಸ್ತವಾಗುವ ಮೊದಲು ನಮ್ಮ ಆಸ್ತಿಯನ್ನಾಗಿ ಮಾಡಬೇಕು ಎಂಬ ಕಳಕಳಿಯನ್ನು ವ್ಯಕ್ತಪಡಿಸಿದರು. ಸಭೆ ಡಾ. ಕೊಟ್ರಶೆಟ್ಟಿಯವರ ವಂದನಾರ್ಪಣೆಗಳಿಂದ ಮುಕ್ತಾಯವಾಯಿತು.

**ಮೂರನೆಯ ವಿಚಾರಸಂಕಿರಣ :**

ಶ್ರೀಮತಿ ಶಾಂತಾದೇವಿ ಮಾಳವಾಡ ಅವರ ಅಧ್ಯಕ್ಷತೆಯಲ್ಲಿ ಡಾ. ಕೆ. ಜಿ. ಶಾಸ್ತ್ರಿಯವರು "ಚೆನ್ನಮ್ಮನ ಗೋಷ್ಠಿ"ಯ ನಿರ್ದೇಶನ ಮಾಡಿದರು.

ಪ್ರೊ. ಎಸ್. ಎಂ. ವೃಷಭೇಂದ್ರಸ್ವಾಮಿಗಳು ಓದಬೇಕಾದ 'ಜನಪದ ಲಾವಣಿಯಲ್ಲಿ ಕಿತ್ತೂರ ಚೆನ್ನಮ್ಮ' ಪ್ರಬಂಧವನ್ನು ಪ್ರೊ. ಜವಳಿಯವರು ಓದಿ, ಇಲ್ಲಿಯವರೆಗೆ ಲಾವಣಿಕಾರರು 'ಚೆನ್ನಮ್ಮನ ವೀರಾವೇಶ'ವನ್ನು ಕಟೆದು ನಿಲ್ಲಿಸಿದ ರೀತಿಯನ್ನು ಹಾಗೂ ಚೆನ್ನಮ್ಮನ ಚರಿತ್ರೆಯನ್ನು ವಿವರಿಸಿದರು.

ಪ್ರೊ. ವ್ಹಿ. ಜಿ. ಮಾರಿಹಾಳ ಅವರು 'ಕಿತ್ತೂರಿನ ಕಲ್ಲುಗಳು ಹೇಳುವ ಕತೆ'ಯನ್ನು ಎತ್ತಿಹೇಳಿದರು. 'ಕಿತ್ತೂರಿನ ಕಥೆ ಹನ್ನೆರಡುಜನ ರಾಜರ ಮನೆತನದ ಕಥೆಯಾಗಿದೆ. ಇದು ಮೊದಲು ಹುಬ್ಬಳ್ಳಿಯ ಪರಗಣೆಯಾಗಿತ್ತು. ಹಾಳಾದ ಕಿತ್ತೂರಿನ ಕೋಟೆಯ ಕಲ್ಲುಗಳು ಹುಬ್ಬಳ್ಳಿ, ಧಾರವಾಡ, ಬೆಳಗಾಂವ ನಗರಗಳಲ್ಲಿ ಕಟ್ಟಡಗಳಾಗಿ ನಿಂತಿವೆ; ಫಕೀರ ರುದ್ರಸರ್ಜನ ಕತೆ, ಧ್ರುವ ನಕ್ಷತ್ರ ಕೊಳವೆ, ಜೈನ, ಶಾಕ್ತ, ಶೈವ, ವೈಷ್ಣವಧರ್ಮ ಸಂಪ್ರದಾಯಗಳ ಸಂಘಟನೆ, ಹದಿನೆಂಟುನೂರುಮೆಟ್ಟಿಗಳ ಕುರುಹು ಇತ್ಯಾದಿ ದಾಖಲೆಗಳನ್ನು ಸ್ಪಷ್ಟಪಡಿಸಿದರು.

ಪ್ರೊ. ಎಸ್. ಜಿ. ಇಮ್ರಾಪೂರ ಅವರು 'ಇತರ ಜನಪದ ಹಾಡುಗಳಲ್ಲಿ ಕಿತ್ತೂರ ಚೆನ್ನಮ್ಮ'ನ ಜೀವನವನ್ನೂ ಹಂತಿ, ಸೋಬಾನ, ಕೋಲು, ದುಂದುಮೆ, ಹಾಡುಗಳಿಂದ ಇತಿಹಾಸವನ್ನು ವಿವರಿಸಿದರು. 'ಬೋರ್ಯಾಡಿ ಚೆನ್ನಮ್ಮ ಮಾಡ್ಯಾಳ ದುಃಖ, ಅರಮನಿಯ ವರಿಗೆ ತಪ್ಪಿತ ದಿಕ್ಕ' ಎಂಬ ಶೋಕಭರಿತ ಜನಪದ ದಾಖಲೆಗಳನ್ನು ಉಲ್ಲೇಖಿಸಿದರು.

ಪ್ರೊ. ಭುಜೇಂದ್ರ ಮಹಿಶವಾಡಿ ಅವರು 'ಕಿತ್ತೂರ ಚೆನ್ನಮ್ಮ ಪ್ರೇರೇಪಿಸಿದ ಪರಂಪರೆ'ಯನ್ನು ಕುರಿತು ಸಂಗೊಳ್ಳಿ ರಾಯಣ್ಣನ ಲಾವಣಿಯನ್ನೂ ಗಜವೀರನ ಸಹಾಸವನ್ನೂ ವಿವರಿಸಿದರು. 'ಕುರಿ ಹಿಂಡಿನ್ಯಾಗ ಹುಲಿ ಹೊಕ್ಕ ಹಾಂಗ

ಮಂಡಾ ಮುರಿದಾನ ಬ್ರಿಟೀಶರನ' ಎಂಬುದಾಗಿ ಹೇಳುತ್ತ, ಶೌರ್ಯದ ಇನ್ನಿತರ ಘಟನೆಗಳನ್ನೂ ಓದಿದರು. ಚೆನ್ನಮ್ಮನು ರಾಯಣ್ಣನ ಮುಂದೆ ಸುರಿಸಿದ ಕಣ್ಣೀರಿನ ಘಟನೆಗಳನ್ನು ವಿವರಿಸಿದರು. 'ಇಂಗ್ರೇಜರಾಟ ನಡೆಯದ್ಹಂಗ ಮಾಡುವೆನು' ಎಂಬುದಾಗಿ ರಾಯಣ್ಣ ಹೇಳಿದುದನ್ನು ಇನ್ನಿತರ ಜಾನಪದ ಐತಿಹ್ಯಗಳ ಆಧಾರಕೊಟ್ಟು ಓದಿದರು.

ಶ್ರೀಮತಿ ಶಾಂತಾದೇವಿ ಮಾಳವಾಡ ಅವರು ಅಧ್ಯಕ್ಷಸ್ಥಾನದಿಂದ ಮಾತನಾಡಿದರು. ಕೀರ್ತಿವೆತ್ತ ಚೆನ್ನಮ್ಮನ ಹೆಸರು ಜಾನಪದದಲ್ಲಿ ಅಮರವಾದ ಬಗೆಯನ್ನು ವಿವರಿಸಿ, ಚೆನ್ನಮ್ಮನ ಹೆಸರು ನಮ್ಮ ನಾಡಿನಲ್ಲೂ ರಾಷ್ಟ್ರದಲ್ಲೂ ಚಿರಸ್ಥಾಯಿಯಾಗುವಂತೆ ಮಾಡಲು ಕರೆಕೊಟ್ಟರು. ಮತ್ತೊಮ್ಮೆ ಶ್ರೀಮತಿ ಜಯದೇವಿತಾಯಿ ಲಿಗಾಡೆಯವರು ಚೆನ್ನಮ್ಮನ ವೀರಶ್ರೀಯನ್ನು ಗುಣಗಾನ ಮಾಡಿದರು. ಪ್ರೊ. ಜವಳಿಯವರು ಅಭಿನಂದನೆ ಹೇಳಿದರು.

**ಬಳಿಕ ಬಹಿರಂಗಾಧಿವೇಶನದ ಆರು ಗೊತ್ತುವಳಿಗಳು ಸ್ವೀಕೃತವಾದವು.**

**ಜನಪದ ನೃತ್ಯದರ್ಶನ :**

ಕಲಾಪೂರ್ಣ ಜಾನಪದ 'ರಂಗದರ್ಶನ'ವನ್ನು ನೋಡಲು ಪ್ರತಿದಿನ ಸಂಜೆ ಜನಸ್ತೋಮ ಕಿಕ್ಕಿರಿಯುತ್ತಿದ್ದಿತು. ಸರ್ವರಿಗೂ ಕರ್ಣಾನಂದ, ನೇತ್ರಾನಂದವನ್ನು ತುಂಬುತ್ತಲಿದ್ದಿತು, ಈ ಕಲಾಪ್ರದರ್ಶನ. ಕೆಲಗೇರಿ ಮೇಳದವರ ಹೆಜ್ಜೆ ಕುಣಿತವು ಪ್ರಾರಂಭಿಕ ಆಕರ್ಷಣೆಯನ್ನು ಪಡೆಯಿತು.

ಹೊಸಕುಪ್ಪಿ ಮೇಳದವರಿಂದ ಮುರಗಾಲ ಕುಣಿತವು ಕಲಾಭಿವೃದ್ಧಿಯನ್ನು ಸೂಚಿಸಿತು. ಕುಂದಗೋಳ ಮೇಳದ ಡೊಳ್ಳಿನ ಕುಣಿತ, ನೃತ್ಯ ಹಾಗೂ ವಾದ್ಯಗಳ ವೈಭವವನ್ನು ಹೆಚ್ಚಿಸಿತು.

ಬಡಗೇರಿ ಮೇಳದವರಿಂದ ಸುಗ್ಗಿಯ ಕುಣಿತ ಹಿಗ್ಗನ್ನುಂಟು ಮಾಡಿತು.

ಕಳಸಾಪುರ ಮೇಳದ ಲಂಬಾಣಿ ಕುಣಿತ, ನಾಗನೂರ ಮೇಳದವರ ದೀಪಧಾರಿ ಕುಣಿತಗಳು ಆಕರ್ಷಕವಾಗಿದ್ದುವು.

ಬಡಗೇರಿ ಮೇಳದ ಗುಮಟೆ ಕುಣಿತ, ಹುಬ್ಬಳ್ಳಿ ಮೇಳದ ಜೋಗತಿ ಕುಣಿತ (ಗಂಡ ಜೋಗಿಗಳ ಕುಣಿತ)ಗಳು ಅಪೂರ್ವವಾಗಿದ್ದವು.

ಈ ಎಲ್ಲ ಕಲೆಗಳನ್ನು ಕರ್ನಾಟಕರಾಜ್ಯದ 'ಫಿಲ್ಮಸಂಸ್ಥೆ'ಯವರು ಚಿತ್ರೀಕರಣ ಮಾಡಿದರು.

ಹೀಗೆ ಎರಡು ದಿನಗಳ ದ್ವಿತೀಯ ಜಾನಪದ ಸಮ್ಮೇಳನ ಅಚ್ಚುಕಟ್ಟಾಗಿ ನಡೆದು, ಕನ್ನಡ ಜನಪದವನ್ನು ಮತ್ತೆ ಎತ್ತಿ ಮೆರೆಸಿತು.

ಕನ್ನಡ ಅಧ್ಯಯನಪೀಠದ ಪ್ರಾಧ್ಯಾಪಕ ಹಾಗೂ ಸಿಬ್ಬಂದಿ ವರ್ಗಗಳ ದುಡಿಮೆಯಿಂದ, ದ್ವಿತೀಯ ಜಾನಪದಸಮ್ಮೇಳನ ಕರ್ನಾಟಕಾದ್ಯಂತ ತನ್ನ ಜಯಭೇರಿಯನ್ನು ಮೊಳಗಿಸಿತು.

# ಗ್ರಂಥಾವಲೋಕನ

೧ ಆಧುನಿಕಭಾರತದ ಆರ್ಥಿಕಸಮಸ್ಯೆಗಳು ಭಾಗ—೧ : ಕೃಷ್ಣ ನಾಯಕ. ಪ್ರ : ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೧, ಬೆಲೆ : ರೂ. ೭-೦೦. ಪುಟ xi + ೪೮೯

೨ ಆಧುನಿಕಭಾರತದ ಆರ್ಥಿಕಸಮಸ್ಯೆಗಳು ಭಾಗ—೨ : ಟಿ. ಎಸ್. ವಿಜಯಪ್ಪ. ಪ್ರ : ಪ್ರಕಟನ ಮತ್ತು ಪ್ರಚಾರೋಪನ್ಯಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೧, ಬೆಲೆ : ರೂ. ೪-೫೦. ಪುಟ xii + ೨೮೦

ಪ್ರಸ್ತುತ ಕೃತಿಗಳು ಬೆಂಗಳೂರು ವಿಶ್ವವಿದ್ಯಾಲಯದ ಬಿ. ಎ. ತರಗತಿಯ ಕನ್ನಡ ಮಾಧ್ಯಮದ ಅರ್ಥಶಾಸ್ತ್ರದ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕಗಳು.

ಪ್ರಥಮ ಭಾಗದಲ್ಲಿ ಮುಖ್ಯವಾಗಿ ಆರ್ಥಿಕ ಮತ್ತು ಸಾಮಾಜಿಕ ಹಿನ್ನೆಲೆ, ಭಾರತದ ಜನಸಂಖ್ಯೆ, ಬೇಸಾಯ, ಕೈಗಾರಿಕೆಗಳು, ಸಾಗಣೆ ಮುಂತಾದ ವಿಷಯಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಹದಿನೆಂಟು ಅಧ್ಯಾಯಗಳಲ್ಲಿ ಸವಿಸ್ತಾರವಾಗಿ ಶ್ರೀ ಕೃಷ್ಣ ನಾಯಕ ಅವರು ಚರ್ಚಿಸಿದ್ದಾರೆ.

ಮೊದಲನೆಯ ಎರಡು ಅಧ್ಯಾಯಗಳಲ್ಲಿ ಭಾರತದಲ್ಲಿಯ ನೈಸರ್ಗಿಕ ಸಂಪತ್ತಿನ, ಜಾತಿ ಪದ್ಧತಿಯ ಹಾಗೂ ಸಹಕುಟುಂಬದ ಸಾಧಕ-ಬಾಧಕಗಳ ಮತ್ತು ಧಾರ್ಮಿಕ ಪ್ರಭಾವಗಳ ಪರಿಚಯ ಮಾಡಿಕೊಡಲಾಗಿದೆ. ನಮ್ಮ ದೇಶವು ಎದುರಿಸುತ್ತಿರುವ ಜನಸಂಖ್ಯೆಯ ಅಧಿಕ ಬೆಳವಣಿಗೆಯಿಂದ ಸಂಭವಿಸಬಹುದಾದ ತೊಂದರೆಗಳನ್ನು ವಿವರಿಸುವುದರ ಜೊತೆಗೆ ಜನರು ವಲಸೆ ಹೋಗುವುದಕ್ಕೆ ಪ್ರೋತ್ಸಾಹ, ಕೃಷಿ ಹಾಗೂ ಕೈಗಾರಿಕೆ ಉತ್ಪನ್ನಗಳ ಆಧಿಕ್ಯ, ಕುಟುಂಬ ಯೋಜನಾ ಕಾರ್ಯಕ್ರಮಗಳನ್ನು ತೀವ್ರಗೊಳಿಸುವುದು, ವಿದ್ಯಾಭ್ಯಾಸ ಹಾಗೂ ಜನರ ಆರೋಗ್ಯ ಸುಧಾರಣಾ ಕಾರ್ಯಕ್ರಮಗಳ ಮುಖಾಂತರ ಪರಿಹಾರಗಳನ್ನು ಕಂಡುಕೊಳ್ಳಲು ಸಾಧ್ಯವಾಗುವುದೆಂಬುದನ್ನು ತಿಳಿಯಪಡಿಸಿದ್ದಾರೆ.

ಮೂರನೆಯ ಅಧ್ಯಾಯದಿಂದ ಮುಂದಿನ ಏಳು ಅಧ್ಯಾಯಗಳಲ್ಲಿ ಆಹಾರೋತ್ಪಾದನೆ, ಭೂಸುಧಾರಣೆ, ನೀರಾವರಿ, ಬೇಸಾಯೋತ್ಪನ್ನಗಳ ಮಾರುಕಟ್ಟೆ, ಗ್ರಾಮೀಣ ಸಾಲ, ಸಹಕಾರಿ ಚಳುವಳಿ, ಸಾಮುದಾಯಿಕ ಅಭಿವೃದ್ಧಿ ಯೋಜನೆಗಳು ಮುಂತಾದ, ಬೇಸಾಯಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ವಿಶದ

ಪಡಿಸಿ ಅವುಗಳ ಪರಿಹಾರದ ಸಲುವಾಗಿ ವಿವಿಧ ಪಂಚವಾರ್ಷಿಕ ಯೋಜನೆಗಳಲ್ಲಿ ಸರಕಾರವು ಕೈಕೊಂಡ ಕಾರ್ಯಕ್ರಮಗಳ ಪರಿಚಯ ಮಾಡಿಕೊಟ್ಟದ್ದಾರೆ.

ದೊಡ್ಡ ಕೈಗಾರಿಕೆಗಳು, ಗೃಹ ಮತ್ತು ಸಣ್ಣ ಕೈಗಾರಿಕೆಗಳು, ಕೈಗಾರಿಕಾ ಬಂಡವಾಳ, ಕೈಗಾರಿಕಾ ನೀತಿಗಳು ಮುಂತಾದ ಕೈಗಾರಿಕೆಗಳಿಗೆ ಅನ್ವಯಿಸುವ ಸಮಸ್ಯೆಗಳನ್ನು ಕುರಿತು; ಹನ್ನೆರಡರಿಂದ ಹದಿನಾರನೆಯ ಅಧ್ಯಾಯಗಳಲ್ಲಿ ಕೂಲಂಕುಶವಾಗಿ ವಿವರಿಸಲಾಗಿದೆ. ಹದಿನೇಳನೆಯ ಅಧ್ಯಾಯವದ ಕಾರ್ಮಿಕ ಆಂದೋಲನದ ಬೆಳವಣಿಗೆ, ಸಂಘ ಶಾಸನಗಳು. ಸಾಮೂಹಿಕ ಲಾಭಗಳಿಕೆ ಮತ್ತು ಹಂಚಿಕೆ, ಕಾರ್ಮಿಕರ ವೇತನ ಮತ್ತು ಕಾರ್ಮಿಕ ನೀತಿಗಳನ್ನು ಕುರಿತು ಚರ್ಚಿಸಲಾಗಿದೆ.

ಸಾಗಣೆಯ ಪ್ರಾಮುಖ್ಯತೆ, ರಸ್ತೆ, ರೇಲ್ವೆ, ವಾಯು ಹಾಗೂ ಜಲ ಸಾಗಣೆಗಳ ಸಮಸ್ಯೆಗಳು ಮತ್ತು ಅವುಗಳ ಪರಿಹಾರಗಳಿಗೆ ಯೋಗ್ಯವಾದ ಸೂಚನೆಗಳನ್ನು ಕೊಟ್ಟಿದ್ದಾರೆ. ದೇಶದ ಸರ್ವಾಂಗೀಣ ಅಭಿವೃದ್ಧಿಗೆ ವಿವಿಧ ಪ್ರಕಾರದ ಸಾಗಣೆಗಳ ಸಮನ್ವಯ ಬೆಳವಣಿಗೆಯ ಅವಶ್ಯಕತೆಯನ್ನು ಸಹ ಕೊನೆಯ ಅಧ್ಯಾಯದಲ್ಲಿ ಒತ್ತಿ ಹೇಳಲಾಗಿದೆ.

ತೀಕ್ಷ್ಣಬೇಸಾಯದ ಜಿಲ್ಲಾ ಕಾರ್ಯಕ್ರಮ, ತೀಕ್ಷ್ಣಬೇಸಾಯದ ಪ್ರಾದೇಶಿಕ ಕಾರ್ಯಕ್ರಮ, ಹೆಚ್ಚು ಇಳುವರಿ ಬೀಜಗಳ ಕಾರ್ಯಕ್ರಮ ಮುಂತಾದ ಹೊಸ ಕೃಷಿವ್ಯೂಹದ ಅಂಶಗಳ, 'ಬೆಳೆಸಾಲ'ದ, ಪಂಚಾಯತ ರಾಜ್ಯದ ಮತ್ತು ಔದ್ಯಮಿಕ ನೆಲೆಗಳ ಸಮಸ್ಯೆಗಳನ್ನು ಸಂಬಂಧಿಸಿದ ಅಧ್ಯಾಯಗಳಲ್ಲಿ ವಿವೇಚಿಸಿದ್ದರೆ ಹೆಚ್ಚು ಸಮಂಜಸವಾಗುತ್ತಿತ್ತು.

ಶ್ರೀ ಟಿ. ಎನ್. ವಿಜಯಪ್ಪ ಅವರು ಆಧುನಿಕಭಾರತದ ಅರ್ಥಿಕಸಮಸ್ಯೆಗಳು ಭಾಗ-೨ರಲ್ಲಿ ವಾಣಿಜ್ಯ, ಹಣ ಮತ್ತು ವಿನಿಮಯ, ಬ್ಯಾಂಕಿಂಗ ಪದ್ಧತಿ, ಸಾರ್ವಜನಿಕ ಹಣಕಾಸು, ರಾಷ್ಟ್ರೀಯ ವರಮಾನ ಹಾಗೂ ಆರ್ಥಿಕ ಯೋಜನೆಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಆರು ಅಧ್ಯಾಯಗಳಲ್ಲಿ ಕೂಲಂಕುಶವಾಗಿ ವಿವರಿಸಿದ್ದಾರೆ.

ಪ್ರಥಮ ಅಧ್ಯಾಯವಲ್ಲಿ ದೇಶೀಯ ಹಾಗೂ ವಿದೇಶೀಯ ವಾಣಿಜ್ಯ, ದೇಶದ ಅಭಿವೃದ್ಧಿಯಲ್ಲಿ ವಾಣಿಜ್ಯದ ಪಾತ್ರ, ಅದರ ಪೂರ್ವೇತಿಹಾಸ, ಆಮದು-ರಫ್ತುಗಳ ಬೆಳವಣಿಗೆ, ಸರಕಾರವು ಪಾಲಿಸುತ್ತ ಬಂದಿರುವ ವಿದೇಶಿ ವಾಣಿಜ್ಯನೀತಿ ಹಾಗೂ ಸರಕಾರಿ ವಾಣಿಜ್ಯ ಸಂಸ್ಥೆಯು ಸಾಧಿಸಿದ ಪ್ರಗತಿ ಇವುಗಳ ಬಗ್ಗೆ ವಿಮರ್ಶಾತ್ಮಕವಾಗಿ ಚರ್ಚಿಸಿದ್ದಾರೆ.

ಭಾರತದಲ್ಲಿಯ ನಾಣ್ಯ ಹಾಗೂ ನೋಟುಗಳ ಚಲಾವಣಾ ಪದ್ಧತಿ, ವಿದೇಶಿ ವಿನಿಮಯ ನಿಯಂತ್ರಣ, ರೂಪಾಯಿಯ ಪೌಲ್ಯವಿಚ್ಛೇದನ, ಬೆಲೆಗಳ ಹಾಗೂ ಹಣದ ಸರಬರಾಜಿನ ನಡುವಿರುವ ನಿಕಟ ಸಂಬಂಧ—ಈ ಮೊದಲಾದ ಸಮಸ್ಯೆಗಳನ್ನು ಕುರಿತು ಎರಡನೆಯ ಅಧ್ಯಾಯದಲ್ಲಿ ವಿವರಿಸಿದ್ದಾರೆ. ಇದೇ ಅಧ್ಯಾಯದಲ್ಲಿ ಬೆಲೆನೀತಿಯ ಬಗ್ಗೆ ಇನ್ನಷ್ಟು ವಿಮರ್ಶಾತ್ಮಕವಾಗಿ ಚರ್ಚಿಸಿದ್ದರೆ ಹೆಚ್ಚು ಉಪಯುಕ್ತವಾಗುತ್ತಿತ್ತು.

ತೃತೀಯ ಅಧ್ಯಾಯದಲ್ಲಿ ನಮ್ಮ ದೇಶದಲ್ಲಿರುವ ವೈವಿಧ್ಯಮಯ ಹಣದ ಮಾರುಕಟ್ಟೆಯ ಹಾಗೂ ಅದರ ವಿವಿಧ ಅಂಗಗಳಾದ ಬೇರೆಬೇರೆ ತರದ ಬ್ಯಾಂಕುಗಳ ಪದ್ಧತಿಗಳ ಪರಿಚಯ ಮಾಡಿಕೊಟ್ಟದ್ದಾರೆ. ಅವ್ಯವಸ್ಥಿತ ಹಣದ ಮಾರುಕಟ್ಟೆಯನ್ನು ಹತೋಟಿಯಲ್ಲಿಡುವದಕ್ಕೋಸ್ಕರ ಹಾಗೂ ವ್ಯವಸ್ಥಿತ ಮಾರುಕಟ್ಟೆಯ ಯೋಗ್ಯ ಬೆಳವಣಿಗೆ ದಿಶೆಯಲ್ಲಿ ಕೇಂದ್ರ ಬ್ಯಾಂಕಿನ ಸ್ಥಾಪನೆ, ಬ್ಯಾಂಕಿಂಗ ಕಾನೂನಿನ ಉದಯ, ಸ್ಟೇಟ ಬ್ಯಾಂಕಿನ ಸ್ಥಾಪನೆ ಹಾಗೂ ಇತ್ತೀಚಿಗೆ ಸರಕಾರವು ಕೈಕೊಂಡ ವಾಣಿಜ್ಯ ಬ್ಯಾಂಕುಗಳ ರಾಷ್ಟ್ರೀಕರಣ ಇವುಗಳೆಲ್ಲದರ ಬಗ್ಗೆ ಸವಿಸ್ತಾರವಾಗಿ ವಿವರಿಸಿದ್ದಾರೆ.

ನಾಲ್ಕನೆಯ ಅಧ್ಯಾಯದಲ್ಲಿ ಕೇಂದ್ರ ಹಾಗೂ ರಾಜ್ಯ ಸರಕಾರಗಳ ಆದಾಯ ಮತ್ತು ವೆಚ್ಚಗಳ ಅಂಶಗಳನ್ನು ಕುರಿತು ಬರೆದಿದ್ದಾರೆ. ವಿವಿಧ ಹಣಕಾಸಿನ ಆಯೋಗಗಳ ಶಿಫಾರಸುಗಳನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸಿದ್ದಾರೆ. ಕೊನೆಯಲ್ಲಿ ಸಾರ್ವಜನಿಕ ಸಾಲದ ನೀತಿಯ ಹಾಗೂ ಕೊರತೆ ತುಂಬುವ ಹಣಕಾಸಿನ ಅಗತ್ಯ ಮತ್ತು ಅದರ ದುಷ್ಪರಿಣಾಮಗಳ ಬಗ್ಗೆ ವಿವೇಚಿಸಲಾಗಿದೆ.

ರಾಷ್ಟ್ರೀಯ ವರಮಾನ ಗಣನೆಯ ಪದ್ಧತಿಗಳು, ಅಂದಾಜುಗಳು ಹಾಗೂ ವೃತ್ತಿಗಳ ಬಗ್ಗೆ ಸಂಕ್ಷಿಪ್ತವಾಗಿ ಐದನೇ ಅಧ್ಯಾಯದಲ್ಲಿ ಸೂಚಿಸಿದ್ದಾರೆ. ಆರನೆಯ ಅಧ್ಯಾಯದಲ್ಲಿ ಆರ್ಥಿಕ ಯೋಜನೆಗಳ ಮಹತ್ವ, ಭಾರತದಲ್ಲಿ ಅವುಗಳ ಉದಯ ಹಾಗೂ ಸ್ವಾತಂತ್ರ್ಯ ಲಭಿಸಿದ ನಂತರ ನಾವು ಕಾರ್ಯಾಚರಣೆಯಲ್ಲಿ ತಂದ ವಿವಿಧ ಪಂಚವಾರ್ಷಿಕ ಯೋಜನೆಗಳ ಬಗ್ಗೆ ಸವಿಸ್ತಾರವಾಗಿ ವಿವರಿಸಿದ್ದಾರೆ.

ಕೊನೆಯ ಅಧ್ಯಾಯದಲ್ಲಿ ಭವಿಷ್ಯದಲ್ಲಿ ಭಾರತವು ತನ್ನ ಆರ್ಥಿಕ ಅಭಿವೃದ್ಧಿ ಪಥದಲ್ಲಿ ಚಲಿಸುವಾಗ ಎದುರಿಸಬಹುದಾದ ಸಮಸ್ಯೆಗಳ ಹಾಗೂ ಅವುಗಳನ್ನು ನಿವಾರಿಸುವದಕ್ಕೋಸ್ಕರ ಸಹಾಯಕಾರಿಯಾಗುವಂಥ ಸೂಚನೆಗಳನ್ನು ಕೊಟ್ಟಿದ್ದಾರೆ.

ವಿವಿಧ ಆರ್ಥಿಕ ಸಮಸ್ಯೆಗಳನ್ನು ಚರ್ಚಿಸುವಾಗ ಉಪಯೋಗಿಸಿದ ಪಾರಿಭಾಷಿಕ ಪದಗಳಿಗೆ ಯೋಗ್ಯ ಕನ್ನಡ ಪದಗಳನ್ನು ಎರಡೂ ಪುಸ್ತಕಗಳ ಕೊನೆಗೆ

ಒದಗಿಸಿರುವದು, ವಿಷಯವನ್ನು ತಿಳಿದುಕೊಳ್ಳುವದಕ್ಕೆ ಹೆಚ್ಚು ಅನುಕೂಲಗುವದು. ಪರಭಾಷಾ ವ್ಯಾಮೋಹವನ್ನು ತೊರೆದು ತಮ್ಮತಮ್ಮ ಪ್ರಾದೇಶಿಕ ಭಾಷೆಗಳನ್ನೇ ಶಿಕ್ಷಣದ ಮಾಧ್ಯಮವನ್ನಾಗಿ ಮಾಡಬೇಕೆಂಬ ಇತ್ತೀಚಿನ ಕೇಂದ್ರ ಸರಕಾರದ ನೀತಿಯನ್ನು ಎಲ್ಲ ರಾಜ್ಯ ಸರಕಾರಗಳು ಕಾರ್ಯಾಚರಣೆಯಲ್ಲಿ ತರುತ್ತಿರುವದು ಸ್ತುತ್ಯ ಸಂಗತಿ. ಈ ನೀತಿಗನುಗುಣವಾಗಿ ನಮ್ಮ ರಾಜ್ಯದಲ್ಲಿಯ ಎಲ್ಲ ವಿಶ್ವವಿದ್ಯಾಲಯಗಳು ಕನ್ನಡದಲ್ಲಿಯೇ ವಿಜ್ಞಾನ, ಕಲೆ ಹಾಗೂ ಸಾಮಾಜಿಕ ಶಾಸ್ತ್ರಗಳ ವಿಷಯಕ್ಕೆ ಸಂಬಂಧಿಸಿದ ಪಠ್ಯಪುಸ್ತಕಗಳನ್ನು ಬರೆಯಿಸಿ, ಪ್ರಕಟಿಸುತ್ತಿರುವದು ತುಂಬ ಸಂತೋಷದ ಸಂಗತಿ. ಇದರಿಂದ ಪ್ರತಿಯೊಬ್ಬ ಶ್ರೀಸಾಮಾನ್ಯನಿಗೂ ವಿಜ್ಞಾನ, ತಾಂತ್ರಿಕ, ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ವಿಷಯಗಳ ಸಮಸ್ಯೆಗಳನ್ನು ಅರಿತುಕೊಳ್ಳಲು ಸುಲಭವಾಗುವದು. ಬೆಂಗಳೂರು ವಿಶ್ವವಿದ್ಯಾಲಯವು ಶ್ರೀಯುತರಾದ ಕೃಷ್ಣ ನಾಯಕ ಮತ್ತು ಟಿ. ಎನ್. ವಿಜಯಪ್ಪ ಇವರಿಂದ ಈ ಪುಸ್ತಕಗಳನ್ನು ಬರೆಯಿಸಿ ಪ್ರಕಟಪಡಿಸಿದ್ದು ಸಂತೋಷದ ಸಂಗತಿ. ಇಬ್ಬರೂ ಲೇಖಕರ ಬರೆಹದ ಹಾಗೂ ವಿಷಯ ನಿರೂಪಣೆಯ ಶೈಲಿ, ಸರಳವೂ ಸುಂದರವೂ ಇರುವದರಿಂದ ಓದುಗನಿಗೆ ಸಮಸ್ಯೆಗಳ ಅರಿವು ಸುಲಭವಾಗಿ ಉಂಟಾಗುವದು.

ಎನ್. ಎಸ್. ಹಿರೇಮಠ

# ಸಾದರ ಸ್ವೀಕಾರ

**೧ ಉತ್ತರಕರ್ನಾಟಕದ ಗಾದೆಗಳು :**

ಸಂ : ಬಿ. ಬಿ. ಹೆಂಡಿ, ಎಂ. ಎಸ್. ಲಠ್ಠೆ, ಪ್ರ: ರವೀಂದ್ರ ಪ್ರಕಾಶನ, ಕಲಬುರ್ಗಿ.
ಬೆಲೆ : ೫ ರೂಪಾಯಿ, ಪುಟ : ೧೧೬.

**೨ ಮೂರು ಏಕಾಂಕ ನಾಟಕಗಳು :**

ಎಂ. ಎಸ್. ಲಠ್ಠೆ, ಪ್ರ : ರವೀಂದ್ರ ಪ್ರಕಾಶನ, ಕಲಬುರ್ಗಿ.
ಬೆಲೆ : ೪ ರೂಪಾಯಿ, ಪುಟ : ೯೦.

**೩ ಉತ್ತರಕರ್ನಾಟಕದ ಒಡಪುಗಳು :**

ಸಂ : ಎಂ. ಎಸ್. ಲಠ್ಠೆ, ಪ್ರ : ರವೀಂದ್ರ ಪ್ರಕಾಶನ, ಕಲಬುರ್ಗಿ.
ಬೆಲೆ : ೪ ರೂಪಾಯಿ, ಪುಟ : ೨೪ + ೮೪.

**೪ ಉತ್ತರಕರ್ನಾಟಕದ ಒಗಟುಗಳು :**

ಸಂ : ಎಂ. ಎಸ್. ಲಠ್ಠೆ, ಪ್ರ : ರವೀಂದ್ರ ಪ್ರಕಾಶನ, ಕಲಬುರ್ಗಿ.
ಬೆಲೆ : ೫ ರೂಪಾಯಿ, ಪುಟ : xiv + ೧೧೩.

**೫ ಚೈತ್ರ (ಕವನಸಂಕಲನ) :**

ಗೋಪಾಲಕೃಷ್ಣ ಹೆಗಡೆ, ಪ್ರ : ಅಪ್ಪದಳ ಪ್ರಕಾಶನ, ಶಿರಶಿ.
ಬೆಲೆ : ೩ ರೂಪಾಯಿ. ಪುಟ : ೪೪.

**೬ ಸೀಮಾಂತರ (ಕವನಸಂಕಲನ) :**

ಬಿ. ಎ. ಸನದಿ. ಪ್ರ : ತಾಯಿನುಡಿ ಪ್ರಕಾಶನ, ಮುಂಬಯಿ–೧.
ಬೆಲೆ : ೩ ರೂಪಾಯಿ, ಪುಟ : xii + ೭೧.

**೭ ನನ್ನ ಗೀತಗಳು, ೧–೨ (ಕವನಸಂಕಲನ) :**

ಗೀತಾಪ್ರಿಯ. ಪ್ರ : ರಾಜಹಂಸ ಪ್ರಕಾಶನ, ಧಾರವಾಡ.
ಬೆಲೆ : ೩ ರೂಪಾಯಿ. ಪುಟ : ೧೭ + ೪೪.

**೮ ' ರಾವಣಲೀಲಾ ' ಅಕ್ರಮವೇ? :**

ವೆಂಕಟೇಶ ಕುಲಕರ್ಣಿ, ಪ್ರ : ಲಂಕಾ ಪ್ರಕಾಶನ, ಧಾರವಾಡ.
ಬೆಲೆ : ೧ ರೂಪಾಯಿ, ಪುಟ : ೩೨.

೯ **ಕೆಲವು ಕವನಗಳು :**

ಪ್ರಭುಸ್ವಾಮಿಮಠ. ಪ್ರ : ಅಕ್ಷರಪ್ರಕಾಶನ, ಸಾಗರ.
ಬೆಲೆ : ೨ ರೂಪಾಯಿ. ಪುಟ : ೭೪.

೧೦ **ಜೀವನಸಂಗ್ರಾಮ** (ಕಾದಂಬರಿ) :

ವಾಗ್ದೇವಿ. ಪ್ರ : ಭುವನೇಶ್ವರಿ ಪ್ರಕಾಶನ, ಸುರಪುರ.
ಬೆಲೆ : ೪ ರೂಪಾಯಿ, ಪುಟ : ೨ + ೨೦೭.

## ಪತ್ರಿಕೆಗಳು

ಕನ್ನಡ ನುಡಿ
ಸಾಹಿತ್ಯ ಪರಿಷತ್ಪತ್ರಿಕೆ
ಜೀವನವಿಕಾಸ
ಪಂಚಾಕ್ಷರ ಪ್ರಕಾಶ
ಪರಂಜ್ಯೋತಿ
ಕೃಷಿವಿಜ್ಞಾನ
ರಾಷ್ಟ್ರೋತ್ಥಾನ ವಾರ್ತಾ
ಮತ್ಸ್ಯಲೋಕ
Timeless Fellowship

# ಸಂಪಾದಕೀಯ

ಕಿತ್ತೂರ ಚೆನ್ನಮ್ಮ, ಸರ್ವಜ್ಞಕವಿಗಳ ಮಹೋತ್ಸವ ಈ ವರ್ಷದುದ್ದಕ್ಕೂ ನಮ್ಮ ನಾಡಿನಲ್ಲಿ ನಡೆಯುತ್ತಲಿವೆ. ಈ ಸಂದರ್ಭದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗವಿಸ್ತರಣ ಮತ್ತು ಪ್ರಕಟನ ವಿಭಾಗವು ಸಂಕೇಶ್ವರದಲ್ಲಿ ಹಮ್ಮಿಕೊಂಡಿದ್ದ 'ಸರ್ವಜ್ಞ ಮಹೋತ್ಸವ'ದಲ್ಲಿ ಓದಿದ ಲೇಖನ ಮತ್ತು ಕವನಗಳನ್ನು ವಿಶೇಷ ಸಂಖ್ಯೆಯಲ್ಲಿ ಒಳಗೊಂಡಿವೆ, ಈ ಸಂಚಿಕೆ.

೧೯೭೫, ಕರ್ನಾಟಕ ವಿಶ್ವವಿದ್ಯಾಲಯದ ರಜತೋತ್ಸವ ವರ್ಷ. ಈ ಸಮಯದಲ್ಲಿ ಮೈದುಂಬಿ ಬೆಳೆದ "ಕರ್ನಾಟಕ ಭಾರತಿ"ಯ ವಿಶೇಷ ಸಂಚಿಕೆಯನ್ನು ಪ್ರಕಟಿಸಲು ಯೋಜಿಸಲಾಗಿದೆ. ಸುಮಾರು ೨೫೦ ಪುಟಗಳ ಈ ಸಂಚಿಕೆ "ಕನ್ನಡ ಶಾಸ್ತ್ರಸಾಹಿತ್ಯ"ಕ್ಕೆ ಮೀಸಲಾಗಿದ್ದು, ಅನೇಕ ವಿದ್ವಾಂಸರ ಲೇಖನಗಳನ್ನು ಹೊತ್ತು ಹೊರಬರುತ್ತಿದೆ.

## ಗೌರವ ಡಾಕ್ಟರೇಟ್ ಪದವಿ

ಕರ್ನಾಟಕ ವಿಶ್ವವಿದ್ಯಾಲಯದ ವಿಶೇಷ ಪದವೀದಾನ ಸಮಾರಂಭ ೧೬-೫-೧೯೭೫ರಂದು ಜರುಗಿತು. ಮುಖ್ಯ ಅತಿಥಿಗಳಾಗಿ ಬಂದ ಡಾ. ರಾಜಾರಾಮಣ್ಣ ಅವರು ಮೊದಲು ಮಾಡಿ, ನಮ್ಮ ನೆಲದ ಹಲವು ಹಿರಿಯರಿಗೆ ಗೌರವ ಡಾಕ್ಟರೇಟ ಪದವಿಗಳನ್ನು ನೀಡಲಾಯಿತು.

ಕನ್ನಡಿಗರಾದ ಡಾ. ರಾಜಾರಾಮಣ್ಣ ಅವರ ಹೆಸರು, ಜಾಗತಿಕ ಮಹಾ ವಿಜ್ಞಾನಿಗಳ ಮಾಲಿಕೆಯಲ್ಲಿ ಶೋಭಿಸುತ್ತಿದೆ. ಅಣುಶಕ್ತಿಯ ಆಸ್ಫೋಟನೆಗೆ ಕಾರಣರಾಗಿ ಲೋಕಗಮನ ಸೆಳೆದವರಲ್ಲಿ ಒಬ್ಬರು, ಅವರು.

ಶ್ರೀ ಬಿ. ಎಚ್. ಕಾತರಕಿ ಅವರು ಪ್ರಚಾರಪ್ರಿಯರಲ್ಲದ ವಿಚಾರವೇತ್ತರು. ಸದ್ದು ಗದ್ದಲವಿಲ್ಲದೆ ವರಲಕ್ಷ್ಮಿ ಸಂಶೋಧನ ನಡೆಸಿ, ಕನ್ನಡ ನಾಡಿನಲ್ಲಿ ಭಾಗ್ಯಲಕ್ಷ್ಮಿ ನಡೆದು ಬರುವಂತೆ ಮಾಡಿದ ಕೀರ್ತಿ ಅವರದು.

ಶ್ರೀ ಎಚ್. ಎಫ್. ಕಟ್ಟೀಮನಿ, ಉತ್ತರಕರ್ನಾಟಕದ ಹಳೆಯ ತಲೆಮಾರಿನ ಶಿಕ್ಷಣ ಆಂದೋಲನದ ನೇತಾರರಲ್ಲಿ ಒಬ್ಬರು. ಸ್ವಾರ್ಥತ್ಯಾಗ, ಕಾರ್ಯನಿಷ್ಠೆಗಳಿಗೆ ಹೆಸರಾದ ಅವರು ಗೈಯ್ದ ಶಿಕ್ಷಣ ಸೇವೆ ಅನುಪಮವಾದುದು.

ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳ ಹೆಸರು ಕರ್ನಾಟಕದಲ್ಲಿ ಮನೆ ಮಾತು. ಸುಪ್ರಸಿದ್ಧ ಕೀರ್ತನಕಾರರಾಗಿ, ವಿದ್ವಾಂಸರಾಗಿ, ಸಂಪಾದಕರಾಗಿ ಧರ್ಮ-ಸಾಹಿತ್ಯ-ಸಮಾಜ ಕ್ಷೇತ್ರಗಳಿಗೆ ಸಲ್ಲಿಸಿದ ಅವರ ಸೇವೆ ಬಹುಕಾಲ ಬೆಳಗುವಂತಹದು.

ಗದುಗಿನ ಪಂಚಾಕ್ಷರಿ ಗವಾಯಿಗಳ ಶಿಷ್ಯರಾದ ಪುಟ್ಟರಾಜ ಗವಾಯಿಗಳ ಬದುಕು-ಬರಹಗಳು ಒಂದು ಪವಾಡ. ಹುಟ್ಟುಗುರುಡರಾದ ಅವರು ಸಾಹಿತ್ಯ, ಸಂಗೀತ ಕ್ಷೇತ್ರಗಳಲ್ಲಿ ಸಾಧಿಸಿದ ಸಾಧನೆ, ಲೋಕದ ಪರಮ ಆಶ್ಚರ್ಯಗಳಲ್ಲಿ ಒಂದು.

ಈ ಸುಪ್ರಸಿದ್ಧರಿಗೆ ಗೌರವ ಡಾಕ್ಟರೇಟ ಪದವಿ ನೀಡುವದರ ಮೂಲಕ ತನ್ನ ಪರಿವಾರದವರ ಪ್ರತಿಭೆಯನ್ನು ಗುರುತಿಸಿದ, ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಈ ಮಹನೀಯರಿಗೆ ಕರ್ನಾಟಕ ಭಾರತಿ ಅಭಿವಂದನೆಗಳನ್ನು ಸಲ್ಲಿಸುತ್ತದೆ.

## ಜನಪದ ಸಮ್ಮೇಲನ

ಕನ್ನಡ ಅಧ್ಯಯನಪೀಠ ಪ್ರಾರಂಭಿಸಿದ ಹೊಸ ಆಯಾಮಗಳಲ್ಲಿ 'ಅಖಿಲ ಕರ್ನಾಟಕ ಜನಪದ ಸಮ್ಮೇಲನ' ಅತಿ ಮುಖ್ಯವಾದುದು. ವಿಶ್ವವಿದ್ಯಾಲಯದ ಆವರಣದಲ್ಲಿ ೫, ೬ ಫೆಬ್ರುವರಿ ೧೯೭೫ ರಂದು ಜರುಗಿದ, ದ್ವಿತೀಯ ಸಮ್ಮೇಲನ ಹೆಸರಿಗೆ ತಕ್ಕಂತೆ ರಾಜ್ಯಮಟ್ಟದಲ್ಲಿ ರಾರಾಜಿಸಿತು. ಕನ್ನಡ ಜನಪದದ ತಾಯಿ ಶ್ರೀಮತಿ ಜಯದೇವಿತಾಯಿ ಲಿಗಾಡೆ ಅವರ ಅಧ್ಯಕ್ಷತೆ, ಮುಖ್ಯಮಂತ್ರಿ ಶ್ರೀ ದೇವರಾಜ ಅರಸು ಅವರ ಉದ್ಘಾಟನೆ— ಇವು ಈ ಸಮ್ಮೇಲನಕ್ಕೆ ವಿಶೇಷ ಶೋಭೆಯನ್ನು ನೀಡಿದವು. ಇದರ ಅಂಗವಾಗಿ ನಡೆದ ವಿಚಾರಗೋಷ್ಠಿ, ರಂಗ ದರ್ಶನಗಳಿಂದ ಜನಸ್ತೋಮ ಶ್ರಾವಣ, ಚಾಕ್ಷುಷ ಚೈತನ್ಯ ಪಡೆಯಿತು. ಪ್ರಜಾ ಸತ್ತೆಯ ಯುಗದಲ್ಲಿ ಪ್ರಜಾಸಾಹಿತ್ಯವನ್ನು ಗೌರವಿಸಿದ ಕನ್ನಡ ಅಧ್ಯಯನ ಪೀಠಕ್ಕೆ ಅಭಿವಂದನೆಗಳು.

# ಈ ಸಂಚಿಕೆಯ ಲೇಖಕರು

೧ **ಡಾ. ಜಿ. ಎಸ್. ಶಿವರುದ್ರಪ್ಪ :**
ನಿರ್ದೇಶಕರು, ಕನ್ನಡ ಅಧ್ಯಯನಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೨ **ಡಾ. ಡಿ. ಎಸ್. ಕರ್ಕಿ :**
ವಿಶ್ರಾಂತ ಕನ್ನಡ ಅಧ್ಯಾಪಕರು, ಹೊಸೂರು-ಹುಬ್ಬಳ್ಳಿ

೩ **ಶ್ರೀಮತಿ ಶೈಲಜಾ ಉಡಚಣ :**
ಕನ್ನಡ ಅಧ್ಯಾಪಕರು, ಸರಕಾರಿ ಕಾಲೇಜು, ಕಲಬುರ್ಗಿ

೪ **ಶ್ರೀ ಭುಜೇಂದ್ರ ಮಹೀಷವಾಡಿ :**
ಕನ್ನಡ ಅಧ್ಯಾಪಕರು, ಕನ್ನಡ ಅಧ್ಯಯನಪೀಠ, ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

೫ **ಡಾ. ಬುದ್ದಣ್ಣ ಹಿಂಗಮಿರೆ :**
ಕನ್ನಡ ಅಧ್ಯಾಪಕರು, ಕರ್ನಾಟಕ ಕಾಲೇಜು, ಧಾರವಾಡ

೬ **ಶ್ರೀ ಸೋಮಶೇಖರ ಇಮ್ರಾಪೂರ :**
ಅಧ್ಯಾಪಕರು, ಕನ್ನಡ ಅಧ್ಯಯನಪೀಠ, ಕ. ವಿ. ವಿ. ಧಾರವಾಡ

೭ **ಶ್ರೀ ಎಚ್. ಎಸ್. ಭೀಮನಗೌಡರ :**
ಇಂಗ್ಲೀಷ ಅಧ್ಯಾಪಕರು, ಕಲಾ ಮತ್ತು ವಿಜ್ಞಾನ ಕಾಲೇಜು, ಸಂಕೇಶ್ವರ

೮ **ಶ್ರೀ ಕಲಾಶೇಖರ (ಶ್ರೀ ಎಸ್. ಎಫ್. ಪೂಜಾರ) :**
ಸಹಾಯಕ ಸಂಶೋಧಕರು, ಸಮಾಜಕಾರ್ಯವಿಭಾಗ, ಕ. ವಿ. ವಿ. ಧಾರವಾಡ

೯ **ಶ್ರೀ ಎಂ, ವಿ. ಸೀತಾರಾಮಯ್ಯ :**
ವಿಶ್ರಾಂತ ಕನ್ನಡ ಅಧ್ಯಾಪಕರು. ೫೪, III ಗವಿಪುರಂ ವಿಸ್ತರಣೆ, ಬೆಂಗಳೂರು-೧೯

೧೦ **ಶ್ರೀಮತಿ ಪ್ರೇಮಾ ತಾಶೀಲದಾರ :**
C/o ಮುಖ್ಯಾಧ್ಯಾಪಕರು, ಹಿಡಕಲ್ ಹಾಯಸ್ಕೂಲ ಹಿಡಕಲ್ (ಜಿ. ಬೆಳಗಾವಿ)

೧೧ **ಶ್ರೀ ಗೌರೀಶ ಕಾಯ್ಕಿಣಿ :**
ಗೋಕರ್ಣ

೧೨ **ಡಾ. ಬೆಟಗೇರಿ ಕೃಷ್ಣಶರ್ಮ :**
ಮಾಳಮಡ್ಡಿ, ಧಾರವಾಡ

೧೩ **ಶ್ರೀ ಶ್ರೀರಾಮ ಇಟ್ಟಣ್ಣವರ :**
ಕನ್ನಡ ಅಧ್ಯಾಪಕರು, ಜೂನಿಯರ ಕಾಲೇಜು ಬೀಳಗಿ, ಜಿ. ವಿಜಾಪೂರ

೧೪ **ಶ್ರೀಮತಿ ಲೀಲಾವತಿ ಬಿ. ತೋರಣಗಟ್ಟಿ :**
ನಂದ್ಯಾಲ, (ಆಂಧ್ರಪ್ರದೇಶ)

೧೫ **ಶ್ರೀ ಧರಣೇಂದ್ರ ಕುರಕುರಿ :**
ಮುಗದ, ಜಿ. ಧಾರವಾಡ

೧೬ **ಶ್ರೀ ಎಸ್. ಎಸ್. ಹೀರೇಮಠ :**
ಕನ್ನಡ ಅಧ್ಯಾಪಕರು, ವಿಜಯನಗರ ಕಾಲೇಜು, ಹೊಸಪೇಟ

೧೭ **ಶ್ರೀ ದೇವೇಂದ್ರಕುಮಾರ ಹಕಾರಿ :**
ಕನ್ನಡ ಅಧ್ಯಾಪಕರು, ಕನ್ನಡ ಅಧ್ಯಯನಪೀಠ, ಕ. ವಿ. ವಿ. ಧಾರವಾಡ

೧೮ **ಶ್ರೀ ಮಹಿಮ :**
(ಸಂಶೋಧನ ವಿದ್ಯಾರ್ಥಿ) ಕನ್ನಡ ಅಧ್ಯಯನಪೀಠ, ಕ. ವಿ. ವಿ. ಧಾರವಾಡ

೧೯ **ಡಾ. ಎಂ. ಜಿ. ಬಿರಾದಾರ :**
ಕನ್ನಡ ಅಧ್ಯಾಪಕರು, ಸ್ನಾತಕೋತ್ತರ ಕೇಂದ್ರ, ಕಲಬುರ್ಗಿ

೨೦ **ಡಾ. ವಿ. ಶಿವಾನಂದ :**
ಕನ್ನಡ ಅಧ್ಯಾಪಕರು, ಸ್ನಾತಕೋತ್ತರಕೇಂದ್ರ, ಕಲಬುರ್ಗಿ

೨೧ **ಶ್ರೀ ಜಿ. ಎಂ. ಹೆಗಡೆ :**
ಕನ್ನಡ ಅಧ್ಯಾಪಕರು, ಕಿಟೆಲ್ ಕಾಲೇಜು, ಧಾರವಾಡ

೨೨ **ಕು. ಹೇಮಲತಾ ಪಡಕಿ ;**
ಕನ್ನಡ ಅಧ್ಯಾಪಕರು, ಕಿಟೆಲ್ ಕಾಲೇಜು, ಧಾರವಾಡ

೨೩ **ಡಾ. ಎಸ್. ಶೆಟ್ಟರ್ :**
ಮುಖ್ಯಸ್ಥರು, ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗ ಕ. ವಿ. ವಿ. ಧಾರವಾಡ

೨೪ **ಶ್ರೀ ಎಸ್. ರಾಜಶೇಖರ :**
ಅಧ್ಯಾಪಕರು, ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರವಿಭಾಗ, ಕ. ವಿ. ವಿ. ಧಾರವಾಡ

೨೫ **ಡಾ. ಸಿ. ಪಿ. ಕೆ. :**
ರೀಡರ್ ಕನ್ನಡ ಅಧ್ಯಯನಸಂಸ್ಥೆ, ಮಾನಸಗಂಗೋತ್ರಿ, ಮೈಸೂರು–೬

೨೬ **ಡಾ. ಬಿ. ಎಸ್. ಕುಲಕರ್ಣಿ :**
ನಿರ್ದೇಶಕರು, ಕನ್ನಡ ಸಂಶೋಧನ ಸಂಸ್ಥೆ, ಕ. ವಿ. ವಿ. ಧಾರವಾಡ

೨೭ **ಶ್ರೀ ನಿಂಗಣ್ಣ ಸಣ್ಣಕ್ಕಿ :**
ಶಿಕ್ಷಕರು, ನ್ಯೂ ಇಂಗ್ಲೀಷ ಸ್ಕೂಲ ಗೋಕಾಕ

೨೮ **ಶ್ರೀ ಎನ್. ಎಸ್. ಹಿರೇಮಠ :**
ಅರ್ಥಶಾಸ್ತ್ರ ಅಧ್ಯಾಪಕರು, ಅರ್ಥಶಾಸ್ತ್ರವಿಭಾಗ, ಕ. ವಿ. ವಿ. ಧಾರವಾಡ

# ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

## ವ್ಯಾಸಂಗವಿಸ್ತರಣ ಹಾಗು ಪ್ರಕಟನ ವಿಭಾಗ

## ಇತ್ತೀಚಿನ ಪ್ರಕಟನೆಗಳು



### ಸಂಶೋಧನ ಗ್ರಂಥಮಾಲೆ

ಸಿದ್ಧರಾಮ ಶಿವಯೋಗಿ —ಎಂ. ಬಿ. ಕೊಟ್ರಶೆಟ್ಟಿ ರೂ. ೨೪.೦೦
ಹೊಸಗನ್ನಡ ಸಾಹಿತ್ಯದ ಉದಯಕಾಲ —ರಾ. ಯ. ಧಾರವಾಡಕರ ರೂ. ೩೫.೦೦

### ಉಪನ್ಯಾಸ ಗ್ರಂಥಮಾಲೆ : ಪ್ರತಿಯೊಂದರ ಬೆಲೆ ೨೫ ಪೈಸೆ

ಜನಸಂಖ್ಯಾ ಸ್ಫೋಟ ಮತ್ತು
  ಅಂತರರಾಷ್ಟ್ರೀಯ ಜನಸಂಖ್ಯಾ ವರ್ಷ —ಪಿ. ಬಿ. ಅಂಗಡಿ
ಕುಕನೂರು —ಎಸ್. ಎಲ್. ಶಾಂತಕುಮಾರಿ
ಜಗನ್ನಾಥದಾಸರ ಹಿರಿಮೆ —ವಸಂತ ಕುಷ್ಟಗಿ
ನವಭಾರತ ನಿರ್ಮಾಪಕ ರಾಜಾರಾಮ ಮೋಹನರಾಯ —ಜೆ. ಜಿ. ಕಾಡದೇವರ
ಭಾರತೀಯ ಸಂವಿಧಾನದಲ್ಲಿ
  ಮೂಲಭೂತ ಹಕ್ಕುಗಳು —ಶಿವಾನಂದ ಗುಬ್ಬಣ್ಣವರ
ಭಾರತದ ಆರ್ಥಿಕ ಬೆಳವಣಿಗೆಯ ಗುಣದೋಷಗಳು —ಡಿ. ಎ. ಹೆಗಡೆ
ಸಸ್ಯಪೋಷಕಗಳು —ಸಾ. ನಾ. ವಜ್ರನಾಭಯ್ಯ
ಕೌಟಲ್ಯನ ಅರ್ಥಶಾಸ್ತ್ರ —ಅರವಿಂದ ಜೋಶಿ

### ಜನಪದ ಸಾಹಿತ್ಯಮಾಲೆ

ಜನಪದ ಸಾಹಿತ್ಯದರ್ಶನ —ಸಂ: ಆರ್. ಸಿ. ಹಿರೇಮಠ ರೂ. ೧೦.೦೦
(ಕೆಲಿಕೊ) ರೂ. ೧೨.೦೦
ಗಂಗೀ ಗೌರೀ ಸಂವಾದ —ಸಂ: ಎಂ. ಎಸ್. ಸುಂಕಾಪುರ ರೂ. ೫.೦೦

## ವಚನ ಸಾಹಿತ್ಯ

ಸ್ವತಂತ್ರ ಸಿದ್ಧಲಿಂಗೇಶ್ವರನ ಕೃತಿಗಳು —ಸಂ: ಎಚ್. ಪಿ. ಮಲ್ಲೇದೇವರು
ರೂ. ೧೬·೦೦

ಉರಿಲಿಂಗಪೆದ್ದಿಯ ವಚನಗಳು —ಸಂ: ಎಚ್. ಪಿ. ಮಲ್ಲೇದೇವರು ರೂ. ೧೬·೦೦

## ಇತರ ಪ್ರಕಟನೆಗಳು

ಕನ್ನಡದಲ್ಲಿ ಷಟ್ಪದಿಸಾಹಿತ್ಯ ರೂ. ೫·೦೦

ಧಾರವಾಡ ಜಿಲ್ಲೆಯ ಶಾಸನಸೂಚಿ ರೂ. ೨೦·೦೦

—ಎಂ. ಎಂ. ಕಲಬುರ್ಗಿ (ಕೆಲಿಕೊ) ರೂ. ೭೦.೦೦

---